॥ ಶ್ರೀಹರಿಃ ॥ 1288

# ಶ್ರೀಮದ್ಭಗವದ್ಗೀತೆ

## ಶ್ಲೋಕಾರ್ಥಸಹಿತ

### श्रीमद्भगवद्गीता श्लोकार्थ ( कन्नड़ )



गीताप्रेस गोरखपुर
GITA PRESS, GORAKHPUR

ಗೀತಾಪ್ರೆಸ್ ಗೋರಖಪುರ

# ಶ್ರೀಮದ್ಭಗವದ್ಗೀತೆ

श्रीमद्भगवद्गीता (शलोकार्थ सहित)

## ಶ್ಲೋಕಾರ್ಥಸಹಿತ



ತ್ವಮೇವ ಮಾತಾ ಚ ಪಿತಾ ತ್ವಮೇವ ।
ತ್ವಮೇವ ಬಂಧುಶ್ಚ ಸಖಾ ತ್ವಮೇವ ।
ತ್ವಮೇವ ವಿದ್ಯಾ ದ್ರವಿಣಂ ತ್ವಮೇವ ।
ತ್ವಮೇವ ಸರ್ವಂ ಮಮ ದೇವದೇವ ॥

*Books are also available at—*

Gita Press, Gorakhpur Ki Pustak-Dukan

1. #15, 4th 'E' Cross, K.S. Garden, Lalbag Road, Bangalore ✆ (080) 22955190
2. Dukan No. 41, 4-4-1, Dilshada Plaza, Sultan Bazar, Hyderabad ✆ (040) 24758311
3. Bangalore, Railway Station, Platform No.1
4. Secunderabad, Railway Station, Platform No. 1

Twenty-second Reprint 2009 1,00,000

Total 8,15,000

❖ **Price : Rs. 7**

**(Seven Rupees only)**

ISBN 81-293-0485-6

Printed & Published by :

**Gita Press, Gorakhpur—273005 (INDIA)**

(a unit of Gobind Bhavan-Karyalaya, Kolkata)

Phone - (0551) 2334721, 2331250; Fax - (0551) 2336997

e-mail : **booksales@gitapress.org** website : **www.gitapress.org**

# ಗೀತಾ ಮಾಹಾತ್ಮ್ಯೆ

'ಶ್ರೀಮದ್ಭಗವದ್ಗೀತಾ' ಆನಂದಚಿದ್ಘನ, ಷಡೈಶ್ವರ್ಯ ಪೂರ್ಣ, ಚರಾಚರವಂದಿತ, ಪರಮ ಪುರುಷೋತ್ತಮ, ಸಾಕ್ಷಾತ್ ಭಗವಾನ್ ಶ್ರೀಕೃಷ್ಣನ ದಿವ್ಯವಾಣಿಯಾಗಿದೆ. ಇದು ಅನಂತ ರಹಸ್ಯಗಳಿಂದ ಪೂರ್ಣವಾಗಿದೆ. ಪರಮ ದಯಾಮಯ ಭಗವಾನ್ ಶ್ರೀಕೃಷ್ಣನ ಕೃಪೆಯಿಂದಲೇ ಕೆಲವೇ ಅಂಶದಲ್ಲಿ ಇದರ ರಹಸ್ಯ ತಿಳಿವಳಿಕೆಗೆ ಬರಬಲ್ಲದು. ಯಾವ ಪುರುಷರು ಪರಮಶ್ರದ್ಧೆ ಮತ್ತು ಪ್ರೇಮಮಯ ವಿಶುದ್ಧ ಭಕ್ತಿಯಿಂದ ತನ್ನ ಹೃದಯವನ್ನು ತುಂಬಿಕೊಂಡು ಭಗವದ್ಗೀತೆಯ ಮನನ ಮಾಡುತ್ತಾರೋ ಅವರೇ ಭಗವತ್ ಕೃಪೆಯ ಪ್ರತ್ಯಕ್ಷ ಅನುಭವ ಮಾಡಿಕೊಂಡು ಗೀತೆಯ ಸ್ವರೂಪವನ್ನು ಕೆಲವೇ ಅಂಶದಲ್ಲಿ ಇಣುಕಿ ನೋಡಬಲ್ಲರು. ಆದುದರಿಂದ ತನ್ನ ಶ್ರೇಯಸ್ಸನ್ನು ಬಯಸುವ ನರ-ನಾರಿಯರಿಗೆ ಭಕ್ತವರ ಅರ್ಜುನನನ್ನು ಆದರ್ಶನಾಗಿ ತಿಳಿದುಕೊಂಡು ತನ್ನಲ್ಲಿ ಅರ್ಜುನನಂತಹ ದೈವೀಗುಣಗಳನ್ನು ಗಳಿಸುತ್ತ ಶ್ರದ್ಧಾ-ಭಕ್ತಿಪೂರ್ವಕ ಗೀತೆಯ ಶ್ರವಣ, ಮನನ ಮತ್ತು ಅಧ್ಯಯನ ಮಾಡಿ, ಭಗವಂತನ ಆಜ್ಞಾನುಸಾರ ಯಥಾಯೋಗ್ಯ ತತ್ಪರತೆಯಿಂದೊಡಗೂಡಿ ಸಾಧನೆಯಲ್ಲಿ ತೊಡಗುವುದು ಉಚಿತವಾಗಿದೆ. ಯಾವ ಪುರುಷರು ಈ ಪ್ರಕಾರ ಮಾಡುತ್ತಾರೋ ಅವರ ಅಂತಃಕರಣದಲ್ಲಿ ನಿತ್ಯವೂ ಹೊಸ-ಹೊಸ ಪರಮಾನಂದದಾಯಕ ಅನುಪಮ ಮತ್ತು ದಿವ್ಯ ಭಾವಗಳ ಸ್ಫುರಣೆಗಳು ಆಗುತ್ತಾ ಇರುತ್ತವೆ ಹಾಗೂ ಅವರು ಸರ್ವಥಾ ಶುದ್ಧಾಂತಃಕರಣರಾಗಿ ಭಗವಂತನ ಅಲೌಕಿಕ ಕೃಪಾಮೃತದ ರಸಾಸ್ವಾದನ ಮಾಡುತ್ತ ಬೇಗನೇ ಭಗವಂತನನ್ನು ಪಡೆಯುತ್ತಾರೆ.

॥ ಓಂ ಶ್ರೀಪರಮಾತ್ಮನೇ ನಮಃ ॥

ಶಾಸ್ತ್ರಗಳ ಅವಲೋಕನ ಮತ್ತು ಮಹಾಪುರುಷರ ವಚನಗಳನ್ನು ಶ್ರವಣಮಾಡಿ ಪ್ರಪಂಚದಲ್ಲಿ ಶ್ರೀಮದ್ಭಗವದ್ಗೀತೆಗೆ ಸಮಾನವಾದ ಶ್ರೇಯಸ್ಕರವಾದ ಉಪಯೋಗೀ ಗ್ರಂಥವು ಬೇರೊಂದು ಇಲ್ಲ ಎಂಬ ನಿರ್ಣಯಕ್ಕೆ ಬಂದಿರುವೆನು. ಗೀತೆಯಲ್ಲಿ ಜ್ಞಾನಯೋಗ, ಧ್ಯಾನಯೋಗ, ಕರ್ಮಯೋಗ, ಭಕ್ತಿಯೋಗ ಮೊದಲಾದ ಎಷ್ಟು ಸಾಧನೆಗಳು ಹೇಳಲ್ಪಟ್ಟಿವೆಯೋ ಅವುಗಳಲ್ಲಿನ ಯಾವುದೇ ಸಾಧನೆಯನ್ನು ತನ್ನ ಶ್ರದ್ಧೆ, ಅಭಿರುಚಿ ಮತ್ತು ಯೋಗ್ಯತೆಗನುಸಾರವಾಗಿ ಮಾಡುವುದರಿಂದ ಮನುಷ್ಯನ ಶ್ರೇಯಸ್ಸು ಬೇಗನೆ ಆಗಬಲ್ಲದು.

ಆದುದರಿಂದ ಮೇಲೆ ಹೇಳಿದ ಸಾಧನೆಗಳನ್ನು ಮತ್ತು ಪರಮಾತ್ಮನ ತತ್ತ್ವರಹಸ್ಯವನ್ನು ತಿಳಿಯಲಿಕ್ಕಾಗಿ ಮಹಾಪುರುಷರ ಹಾಗೂ ಅವರ ಅಭಾವದಲ್ಲಿ ಉಚ್ಚ ಕೋಟಿಯ ಸಾಧಕರ ಸಂಗವನ್ನು ಶ್ರದ್ಧಾ ಪ್ರೇಮಪೂರ್ವಕ ಮಾಡುವ ವಿಶೇಷ ಪ್ರಯತ್ನವನ್ನು ಇಟ್ಟುಕೊಳ್ಳುತ್ತಾ ಗೀತೆಯ ಅರ್ಥ ಮತ್ತು ಭಾವ ಸಹಿತ ಮನನ ಮಾಡಲು ಹಾಗೂ ಅದಕ್ಕನುಸಾರವಾಗಿ ತನ್ನ ಜೀವನವನ್ನು ರೂಪಿಸಿಕೊಳ್ಳಲು ಪ್ರಾಣವಿರುವ ತನಕ ಪ್ರಯತ್ನ ಮಾಡುತ್ತಾ ಇರಬೇಕು.

– ಜಯದಯಾಳ ಗೋಯಂದಕಾ

# ಶ್ರೀಮದ್ಭಗವದ್ಗೀತೆಯ
# ಪ್ರಧಾನ ವಿಷಯಗಳ ಅನುಕ್ರಮಣಿಕೆ

## ಅರ್ಜುನ ವಿಷಾದಯೋಗ ಎಂಬ ೧ನೇ ಅಧ್ಯಾಯ

| ಶ್ಲೋಕ | ವಿಷಯ |
|---|---|
| 1 – 11 | ಎರಡೂ ಸೇನೆಗಳ ಮುಖ್ಯ-ಮುಖ್ಯ ಶೂರ-ವೀರರ ಪರಿಚಯ ಮತ್ತು ಸಾಮರ್ಥ್ಯದ ವಿವರಣೆ. |
| 12 – 19 | ಎರಡೂ ಸೈನ್ಯಗಳ ಶಂಖ-ಧ್ವನಿಯ ವರ್ಣನೆ. |
| 20 – 27 | ಅರ್ಜುನನ ಮೂಲಕ ಸೈನ್ಯದ ನಿರೀಕ್ಷಣೆಯ ಪ್ರಸಂಗ. |
| 28 – 47 | ಮೋಹದಿಂದ ವ್ಯಾಪ್ತನಾದ ಅರ್ಜುನನ ಹೇಡಿತನ, ಸ್ನೇಹ ಮತ್ತು ಶೋಕ ಯುಕ್ತವಾದಮಾತುಗಳು. |

## ಸಾಂಖ್ಯಯೋಗವೆಂಬ ೨ನೇ ಅಧ್ಯಾಯ

| | |
|---|---|
| 1 – 10 | ಅರ್ಜುನನ ಹೇಡಿತನದ ವಿಷಯದಲ್ಲಿ ಶ್ರೀಕೃಷ್ಣಾರ್ಜುನ ಸಂವಾದ. |
| 11 – 30 | ಸಾಂಖ್ಯಯೋಗದ ವಿಷಯ. |
| 31 – 38 | ಕ್ಷಾತ್ರಧರ್ಮಕ್ಕನುಸಾರ ಯುದ್ಧಮಾಡುವುದರ ಆವಶ್ಯಕತೆಯ ನಿರೂಪಣೆ. |
| 39 – 53 | ಕರ್ಮಯೋಗದ ವಿಷಯ. |
| 54 – 72 | ಸ್ಥಿರಬುದ್ಧಿ ಪುರುಷನ ಲಕ್ಷಣ ಮತ್ತು ಅವನ ಮಹಿಮೆ. |

## ಕರ್ಮಯೋಗವೆಂಬ ೩ನೇ ಅಧ್ಯಾಯ



## ಜ್ಞಾನಕರ್ಮಸಂನ್ಯಾಸಯೋಗವೆಂಬ ೪ನೇ ಅಧ್ಯಾಯ



## ಕರ್ಮಸಂನ್ಯಾಸಯೋಗವೆಂಬ ೫ನೇ ಅಧ್ಯಾಯ

## ಆತ್ಮಸಂಯಮಯೋಗವೆಂಬ ೬ನೇ ಅಧ್ಯಾಯ



## ಜ್ಞಾನವಿಜ್ಞಾನಯೋಗವೆಂಬ ೭ನೇ ಅಧ್ಯಾಯ

## ವಿಶ್ವರೂಪದರ್ಶನಯೋಗವೆಂಬ ೧೧ನೇ ಅಧ್ಯಾಯ



## ಭಕ್ತಿಯೋಗವೆಂಬ ೧೨ನೇ ಅಧ್ಯಾಯ

### ಕ್ಷೇತ್ರ-ಕ್ಷೇತ್ರಜ್ಞವಿಭಾಗಯೋಗವೆಂಬ ೧೩ನೇ ಅಧ್ಯಾಯ



### ಗುಣತ್ರಯವಿಭಾಗಯೋಗವೆಂಬ ೧೪ನೇ ಅಧ್ಯಾಯ



### ಪುರುಷೋತ್ತಮಯೋಗವೆಂಬ ೧೫ನೇ ಅಧ್ಯಾಯ



### ದೈವಾಸುರಸಂಪದ್ವಿಭಾಗಯೋಗವೆಂಬ ೧೬ನೇ ಅಧ್ಯಾಯ

**॥ ಹರಿಃ ಓಂ ತತ್ಸತ್॥**

❀ ❀ ❀ ❀ ❀

# ಅಥ ಗೀತಾಮಾಹಾತ್ಮ್ಯಮ್

ಗೀತಾಶಾಸ್ತ್ರಮಿದಂ ಪುಣ್ಯಂ ಯಃ ಪಠೇತ್ಪ್ರಯತಃ ಪುಮಾನ್ ।
ವಿಷ್ಣೋಃ ಪದಮವಾಪ್ನೋತಿ ಭಯಶೋಕಾದಿವರ್ಜಿತಃ ॥ ೧॥

ಗೀತಾಧ್ಯಯನಶೀಲಸ್ಯ ಪ್ರಾಣಾಯಾಮಪರಸ್ಯ ಚ ।
ನೈವ ಸಂತಿ ಹಿ ಪಾಪಾನಿ ಪೂರ್ವಜನ್ಮ ಕೃತಾನಿ ಚ ॥ ೨॥

ಮಲನಿರ್ಮೋಚನಂ ಪುಂಸಾಂ ಜಲಸ್ನಾನಂ ದಿನೇ ದಿನೇ ।
ಸಕೃದ್ಗೀತಾಮ್ಭಸಿ ಸ್ನಾನಂ ಸಂಸಾರಮಲನಾಶನಮ್ ॥ ೩॥

ಗೀತಾ ಸುಗೀತಾ ಕರ್ತವ್ಯಾ ಕಿಮನ್ಯೈಃ ಶಾಸ್ತ್ರವಿಸ್ತರೈಃ ।
ಯಾ ಸ್ವಯಂ ಪದ್ಮನಾಭಸ್ಯ ಮುಖಪದ್ಮಾದ್ವಿನಿಃಸೃತಾ ॥ ೪॥

ಭಾರತಾಮೃತಸರ್ವಸ್ವಂ ವಿಷ್ಣೋರ್ವಕ್ತ್ರಾದ್ವಿನಿಃಸೃತಮ್ ।
ಗೀತಾಗಂಗೋದಕಂ ಪೀತ್ವಾ ಪುನರ್ಜನ್ಮ ನ ವಿದ್ಯತೇ ॥ ೫॥

ಸರ್ವೋಪನಿಷದೋ ಗಾವೋ ದೋಗ್ಧಾ ಗೋಪಾಲನಂದನಃ ।
ಪಾರ್ಥೋ ವತ್ಸಃ ಸುಧೀರ್ಭೋಕ್ತಾ ದುಗ್ಧಂ ಗೀತಾಮೃತಂ ಮಹತ್

ಏಕಂ ಶಾಸ್ತ್ರಂ ದೇವಕೀಪುತ್ರಗೀತ –
ಮೇಕೋ ದೇವೋ ದೇವಕೀಪುತ್ರ ಏವ ।
ಏಕೋ ಮಂತ್ರಸ್ತಸ್ಯ ನಾಮಾನಿ ಯಾನಿ
ಕರ್ಮಾಪ್ಯೇಕಂ ತಸ್ಯ ದೇವಸ್ಯ ಸೇವಾ॥ ೭॥

# ಗೀತಾ ಮಾಹಾತ್ಮ್ಯ

## ಶ್ರೀಭಗವಾನುವಾಚ

**ನ ಬಂಧೋಽಸ್ತಿ ನ ಮೋಕ್ಷೋಽಸ್ತಿ ಬ್ರಹ್ಮೈವಾಸ್ತಿ ನಿರಾಮಯಮ್**
**ನೈಕಮಸ್ತಿ ನ ಚ ದ್ವಿತ್ವಂ ಸಚ್ಚಿತ್ಸ್ವರಂ ವಿಜೃಂಭತೇ ॥ ೧॥**
**ಗೀತಾಸಾರಮಿದಂ ಶಾಸ್ತ್ರಂ ಸರ್ವಶಾಸ್ತ್ರಸುನಿಶ್ಚಿತಮ್ ।**
**ಯತ್ರ ಸ್ಥಿತಂ ಬ್ರಹ್ಮಜ್ಞಾನಂ ವೇದಶಾಸ್ತ್ರಸುನಿಶ್ಚಿತಮ್ ॥ ೨॥**
**ಇದಂ ಶಾಸ್ತ್ರಂ ಮಯಾ ಪ್ರೋಕ್ತಂ ಗುಹ್ಯವೇದಾರ್ಥದರ್ಪಣಮ್**
**ಯಃ ಪಠೇತ್ಪ್ರಯತೋ ಭೂತ್ವಾ ಸ ಗಚ್ಛೇದ್ವಿಷ್ಣುಶಾಶ್ವತಮ್ ॥ ೩॥**

ಶ್ರೀಭಗವಂತನು ಹೇಳಿದನು – ಬಂಧನವಿಲ್ಲ, ಮೋಕ್ಷವಿಲ್ಲ; ಕೇವಲ ನಿರಾಮಯ ಬ್ರಹ್ಮವೇ ಸರ್ವತ್ರ ವಿರಾಜಮಾನನಾಗಿದ್ದಾನೆ. ಅದ್ವೈತವಿಲ್ಲ ದ್ವೈತವಿಲ್ಲ; ಕೇವಲ ಸಚ್ಚಿದಾನಂದನೇ ಎಲ್ಲ ಕಡೆಗಳಲ್ಲಿ ಪರಿಪೂರ್ಣನಾಗಿದ್ದಾನೆ. ಗೀತೆಯ ಸಾರಭೂತ ಈ ಶಾಸ್ತ್ರವು ಸಂಪೂರ್ಣ ಶಾಸ್ತ್ರಗಳ ಮೂಲಕ ಚೆನ್ನಾದ ನಿಶ್ಚಿತ ಸಿದ್ಧಾಂತವಾಗಿದೆ, ಇದರಲ್ಲಿ ವೇದ-ಶಾಸ್ತ್ರಗಳಿಂದ ಒಳ್ಳೆಯ ರೀತಿಯಿಂದ ನಿಶ್ಚಿತವಾಗಿಸಿದ ಬ್ರಹ್ಮಜ್ಞಾನ ವಿದ್ಯಮಾನವಾಗಿದೆ ನನ್ನ ಮೂಲಕ ಹೇಳಲ್ಪಟ್ಟ ಈ ಗೀತಾಶಾಸ್ತ್ರವು ವೇದಗಳ ಗೂಢ ಅರ್ಥವನ್ನು ಕನ್ನಡಿಯಂತೆ ಪ್ರಕಾಶಿಸುವುದಾಗಿದೆ; ಯಾರು ಪವಿತ್ರನಾಗಿದ್ದಾನೋ ಮನ–

ಇಂದ್ರಿಯಗಳನ್ನು ವಶದಲ್ಲಿರಿಸಿಕೊಂಡು ಇದರ ಪಾರಾಯಣ ಮಾಡುತ್ತಾನೋ ಅವನು ಸನಾತನದೇವ ಭಗವಾನ್ ವಿಷ್ಣುವಾದ ನನ್ನನ್ನು ಪಡೆಯುತ್ತಾನೆ.

**ಏತತ್ಪುಣ್ಯಂ ಪಾಪಹರಂ ಧನ್ಯಂ ದುಃಖಪ್ರಣಾಶನಮ್ ।**
**ಪಠತಾಂ ಶೃಣ್ವತಾಂ ವಾಪಿ ವಿಷ್ಣೋರ್ಮಾಹಾತ್ಮ್ಯಮುತ್ತಮಮ್ ॥**

**ಅಷ್ಟಾದಶಪುರಾಣಾನಿ ನವವ್ಯಾಕರಣಾನಿ ಚ ।**
**ನಿರ್ಮಥ್ಯ ಚತುರೋ ವೇದಾನ್ ಮುನಿನಾ ಭಾರತಂ ಕೃತಮ್ ॥**

**ಭಾರತೋದಧಿನಿರ್ಮಥ್ಯ ಗೀತಾನಿರ್ಮಥಿತಸ್ಯ ಚ ।**
**ಸಾರಮುದ್‌ಧೃತ್ಯ ಕೃಷ್ಣೇನ ಅರ್ಜುನಸ್ಯ ಮುಖೇ ಧೃತಮ್ ॥ ೬॥**

**ಮಲನಿರ್ಮೋಚನಂ ಪುಂಸಾಂ ಗಂಗಾಸ್ನಾನಂ ದಿನೇ ದಿನೇ ।**
**ಸಕೃದ್‌ಗೀತಾಂಭಸಿ ಸ್ನಾನಂ ಸಂಸಾರಮಲನಾಶನಮ್ ॥ ೭॥**

**ಗೀತಾನಾಮಸಹಸ್ರೇಣ ಸ್ತವರಾಜೋ ವಿನಿರ್ಮಿತಃ ।**
**ಯಸ್ಯ ಕುಕ್ಷೌ ಚ ವರ್ತೇತ ಸೋಽಪಿ ನಾರಾಯಣಃ ಸ್ಮೃತಃ ॥**

ಭಗವಾನ್ ವಿಷ್ಣುವಿನ ಈ ಉತ್ತಮ ಮಾಹಾತ್ಮ್ಯ (ಗೀತಾಶಾಸ್ತ್ರ) ಓದುವ ಮತ್ತು ಕೇಳುವವರ ಪುಣ್ಯವನ್ನು ಹೆಚ್ಚಿಸುವಂತಹುದು, ಪಾಪನಾಶಕ, ಧನ್ಯವಾದಕ್ಕೆ ಯೋಗ್ಯ ಮತ್ತು ಸಮಸ್ತ ದುಃಖಗಳನ್ನು ದೂರಮಾಡುವಂತಹುದಾಗಿದೆ॥

ಮುನಿವರ ಶ್ರೀವೇದವ್ಯಾಸರು ಹದಿನೆಂಟು ಪುರಾಣಗಳು, ಒಂಭತ್ತುವ್ಯಾಕರಣಗಳನ್ನು ಮತ್ತು ನಾಲ್ಕು ವೇದಗಳನ್ನು ಮಂಥನಗೈದು ಮಹಾಭಾರತದ ರಚನೆ ಮಾಡಿದರು ॥ ೫॥ ಪುನಃ ಮಹಾಭಾರತರೂಪೀ ಸಮುದ್ರ ಮಂಥನಗೈದು ಪ್ರಕಟವಾದ ಗೀತೆಯನ್ನು ಮಂಥನಗೈದು (ಮೇಲೆ ಹೇಳಿದ ಗೀತಾಸಾರ ರೂಪದಲ್ಲಿ) ಅದರ ಅರ್ಥದ ಸಾರವನ್ನು ತೆಗೆದು ಅದನ್ನು ಭಗವಾನ್ ಶ್ರೀಕೃಷ್ಣನು ಅರ್ಜುನನ ಮುಖದಲ್ಲಿ ಹಾಕಿಬಿಟ್ಟನು ॥ ೬॥ ಗಂಗೆಯಲ್ಲಿ ಪ್ರತಿದಿನ ಸ್ನಾನಮಾಡುವುದರಿಂದ ಮನುಷ್ಯರ ಕೊಳೆ ದೂರವಾಗುತ್ತದೆ, ಆದರೂ ಗೀತಾರೂಪೀ ಗಂಗೆಯ ಜಲದಲ್ಲಿ ಒಂದೇಬಾರಿಯ ಸ್ನಾನವು ಸಂಪೂರ್ಣ ಸಂಸಾರಮಲವನ್ನು ನಷ್ಟಮಾಡುವುದಾಗಿದೆ ॥ ೭॥ ಗೀತೆಯ ಸಹಸ್ರ ನಾಮಗಳ ಮೂಲಕ ಯಾವ ಸ್ತವರಾಜ ನಿರ್ಮಿತವಾಗಿದೆಯೋ, ಅದು ಯಾರ ಕುಕ್ಷಿ (ಹೃದಯ)ಯಲ್ಲಿ ವರ್ತಮಾನವಾಗಿದೆಯೋ ಅರ್ಥಾತ್ ಯಾರು ಅದನ್ನು ಮನಸ್ಸಿನಲ್ಲಿಯೇ ಸ್ಮರಿಸುತ್ತಾನೋ ಅವನೂ ಕೂಡ ಸಾಕ್ಷಾತ್ ನಾರಾಯಣನ ಸ್ವರೂಪನೆಂದು ಹೇಳಲಾಗಿದೆ ॥ ೮॥

**ಸರ್ವವೇದಮಯೀ ಗೀತಾ ಸರ್ವಧರ್ಮಮಯೋ ಮನುಃ ।**
**ಸರ್ವತೀರ್ಥಮಯಿ ಗಂಗಾ ಸರ್ವದೇವಮಯೋ ಹರಿಃ ॥ ೯॥**

ಪಾದಸ್ಯಾಪ್ಯರ್ಧಪಾದಂ ವಾ ಶ್ಲೋಕಂ ಶ್ಲೋಕಾರ್ಧಮೇವ ವಾ ।
ನಿತ್ಯಂ ಧಾರಯತೇ ಯಸ್ತು ಸ ಮೋಕ್ಷಮಧಿಗಚ್ಛತಿ ॥ ೧೦॥

ಕೃಷ್ಣವೃಕ್ಷಸಮುದ್ಭೂತಾ ಗೀತಾಮೃತಹರೀತಕೀ ।
ಮಾನುಷೈಃ ಕಿಂ ನ ಖಾದ್ಯೇತ ಕಲೌ ಮಲವಿರೇಚನೀ ॥ ೧೧॥

ಗಂಗಾ ಗೀತಾ ತಥಾ ಭಿಕ್ಷುಃ ಕಪಿಲಾಶ್ವತ್ಥಸೇವನಮ್ ।
ವಾಸರಂ ಪದ್ಮನಾಭಸ್ಯ ಪಾವನಂ ಕಿಂ ಕಲೌ ಯುಗೇ ॥ ೧೨॥

ಗೀತಾ ಸುಗೀತಾ ಕರ್ತವ್ಯಾ ಕಿಮನ್ಯೈಃ ಶಾಸ್ತ್ರವಿಸ್ತರೈಃ ।
ಯಾ ಸ್ವಯಂ ಪದ್ಮನಾಭಸ್ಯ ಮುಖಪದ್ಮಾದ್ವಿನಿಃಸೃತಾ ॥ ೧೩॥

ಆಪದಂ ನರಕಂ ಘೋರಂ ಗೀತಾಧ್ಯಾಯೀ ನ ಪಶ್ಯತಿ ॥ ೧೪॥

ಗೀತೆಯು ಸಂಪೂರ್ಣ ವೇದಮಯಿಯಾಗಿದೆ, ಮನುಸ್ಮೃತಿಯು ಸರ್ವಧರ್ಮಮಯವಾಗಿದೆ, ಗಂಗೆಯು ಸರ್ವತೀರ್ಥಮಯಿಯಾಗಿದ್ದಾಳೆ ಹಾಗೂ ಭಗವಾನ್ ವಿಷ್ಣುವು ಸರ್ವದೇವಮಯನಾಗಿದ್ದಾನೆ ॥ ೯॥ ಯಾರು ಗೀತೆಯ ಇಡೀ ಒಂದು ಶ್ಲೋಕ, ಅರ್ಧಶ್ಲೋಕ, ಒಂದು ಚರಣ (ಕಾಲು) ಅಥವಾ ಅರ್ಧ ಚರಣವೂ ಕೂಡ ಪ್ರತಿದಿನ ಪಠಿಸುತ್ತಾನೋ ಅವನು ಕೊನೆಯಲ್ಲಿ ಮೋಕ್ಷವನ್ನು ಪ್ರಾಪ್ತಿಮಾಡಿಕೊಳ್ಳುತ್ತಾನೆ ॥ ೧೦॥ ಮನುಷ್ಯನು ಶ್ರೀಕೃಷ್ಣ ರೂಪೀ ವೃಕ್ಷದಿಂದ ಪ್ರಕಟವಾದ ಗೀತಾರೂಪೀ ಅಮೃತಮಯ

ಹರಡೆಯನ್ನು ಏಕೆ ತಿನ್ನುವುದಿಲ್ಲ! ಅದು ಸಮಸ್ತ ಕಲಿಮಲವನ್ನು ಶರೀರದಿಂದ ಹೊರಗೆ ಹಾಕುವಂತಹುದಾಗಿದೆ ॥ ೧೧॥ ಕಲಿಯುಗದಲ್ಲಿ ಶ್ರೀಗಂಗೆ, ಗೀತಾ, ನಿಜವಾದ ಸಂನ್ಯಾಸೀ, ಕಪಿಲಾಗೋವು, ಅಶ್ವತ್ಥವೃಕ್ಷದ ಸೇವೆ ಮತ್ತು ಭಗವಾನ್ ವಿಷ್ಣುವಿನ ಪರ್ವದಿನ (ಏಕಾದಶೀ ಮೊದಲಾದ) ಇವುಗಳಿಂದ ಹೆಚ್ಚಾಗಿ ಪವಿತ್ರ ಮಾಡುವಂತಹ ಬೇರೆ ಯಾವ ವಸ್ತು ಇರಬಲ್ಲದು? ॥ ೧೨॥ ಬೇರೆ ಶಾಸ್ತ್ರಗಳ ವಿಸ್ತಾರದಿಂದ ಏನು ಪ್ರಯೋಜನ? ಕೇವಲ ಗೀತೆಯದೇ ಸಮ್ಯಕ್ ಪ್ರಕಾರದಿಂದ ಗಾನ (ಪಠಣ ಮತ್ತು ಮನನ) ಮಾಡಬೇಕು, ಸಾಕ್ಷಾತ್ ಭಗವಾನ್ ವಿಷ್ಣುವಿನ ಮುಖಕಮಲದಿಂದ ಪ್ರಕಟವಾದುದು ಅದು ॥ ೧೩॥ ಗೀತೆಯ ಸ್ವಾಧ್ಯಾಯ ಮಾಡುವ ಮನುಷ್ಯನಿಗೆ ಆಪತ್ತುಗಳ ಮತ್ತು ಘೋರ ನರಕಗಳ ದರ್ಶನವಾಗುವುದಿಲ್ಲ.

***॥ ಇತಿ ಶ್ರೀಸ್ಕಂದಪುರಾಣೇ ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ಶ್ರೀಗೀತಾಸಾರೇ ಭಗವದ್ಗೀತಾಮಾಹಾತ್ಮ್ಯಂ ಸಂಪೂರ್ಣಮ್ ॥***



# ಶ್ರೀಮದ್ಭಗವದ್ಗೀತೆಯ ವಿನಿಯೋಗ ಮತ್ತು ಧ್ಯಾನ

ಓಂ ಅಸ್ಯ ಶ್ರೀಮದ್ಭಗವದ್ಗೀತಾಮಾಲಾಮಂತ್ರಸ್ಯ ಭಗವಾನ್ವೇದವ್ಯಾಸ ಋಷಿಃ । ಅನುಷ್ಟುಪ್ ಛಂದಃ । ಶ್ರೀಕೃಷ್ಣಃ ಪರಮಾತ್ಮಾ ದೇವತಾ । ಅಶೋಚ್ಯಾನನ್ವಶೋಚಸ್ತ್ವಂ ಪ್ರಜ್ಞಾವಾದಾಂಶ್ಚ ಭಾಷಸೆ ಇತಿ ಬೀಜಮ್॥ ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ಇತಿ ಶಕ್ತಿಃ॥ ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚ ಇತಿ ಕೀಲಕಮ್ ॥

## ಅಥ ಕರನ್ಯಾಸಃ

ನೈನಂ ಛಿನ್ದನ್ತಿ ಶಸ್ತ್ರಾಣಿ ನೈನಂ ದಹತಿ ಪಾವಕ ಇತ್ಯಂಗುಷ್ಠಾಭ್ಯಾಂ ನಮಃ। ನ ಚೈನಂ ಕ್ಲೇದಯಂತ್ಯಾಪೋ ನ ಶೋಷಯತಿ ಮಾರುತ ಇತಿ ತರ್ಜನೀಭ್ಯಾಂ ನಮಃ ॥ ಅಚ್ಛೇದ್ಯೋಽಯಮದಾಹ್ಯೋಽಯ ಮಕ್ಲೇದ್ಯೋಽಶೋಷ್ಯ ಏವ ಚ ಇತಿ ಮಧ್ಯಮಾಭ್ಯಾಂ ನಮಃ ॥ ನಿತ್ಯಃ ಸರ್ವಗತಃ ಸ್ಥಾಣುರಚಲೋಽಯಂ ಸನಾತನ ಇತ್ಯನಾಮಿಕಾಭ್ಯಾಂ ನಮಃ ॥ ಪಶ್ಯ ಮೇ ಪಾರ್ಥ ರೂಪಾಣಿ ಶತಶೋಽಥ ಸಹಸ್ರಶ ಇತಿ ಕನಿಷ್ಠಿಕಾಭ್ಯಾಂ ನಮಃ ॥ ನಾನಾವಿಧಾನಿ ದಿವ್ಯಾನಿ ನಾನಾವರ್ಣಾಕೃತೀನಿ ಚ ಇತಿ ಕರತಲಕಲಕರಪೃಷ್ಠಾಭ್ಯಾಂ ನಮಃ ॥ ಇತಿ ಕರನ್ಯಾಸಃ ॥

## ಅಥ ಹೃದಯಾದಿನ್ಯಾಸಃ

ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕ ಇತಿ ಹೃದಯಾಯ ನಮಃ ॥ ನ ಚೈನಂ ಕ್ಲೇದಯಂತ್ಯಾಪೋ ನ ಶೋಷಯತಿ ಮಾರುತ ಇತಿ ಶಿರಸೇ ಸ್ವಾಹಾ ॥ ಅಚ್ಛೇದ್ಯೋಽಯಮದಾಹ್ಯೋಽಯಮಕ್ಲೇ

ದ್ಯೋಽಕಶೋಷ್ಯ ಏವ ಚ ಇತಿ ಶಿಖಾಯೈ ವಷಟ್॥ ನಿತ್ಯಃ ಸರ್ವಗತಃ ಸ್ಥಾಣುರಚಲೋಽಯಂ ಸನಾತನ ಇತಿ ಕವಚಾಯ ಹುಮ್ ॥ ಪಶ್ಯ ಮೇ ಪಾರ್ಥ ರೂಪಾಣಿ ಶತಶೋಽಥ ಸಹಸ್ರಶ ಇತಿ ನೇತ್ರತ್ರಯಾಯ ವೌಷಟ್ ॥ ನಾನಾವಿಧಾನಿ ದಿವ್ಯಾನಿ ನಾನಾವರ್ಣಾಕೃತೀನಿ ಚ ಇತಿ ಅಸ್ತ್ರಾಯ ಫಟ್ ॥ ಶ್ರೀಕೃಷ್ಣಪ್ರೀತ್ಯರ್ಥೇ ಪಾಠೇ ವಿನಿಯೋಗಃ ॥

## ಧ್ಯಾನಮ್

ಓಂ ಪಾರ್ಥಾಯ ಪ್ರತಿಬೋಧಿತಾಂ ಭಗವತಾ ನಾರಾಯಣೇನ ಸ್ವಯಂ
ವ್ಯಾಸೇನ ಗ್ರಥಿತಾಂ ಪುರಾಣಮುನಿನಾ ಮಧ್ಯೆಮಹಾಭಾರತಮ್ ।
ಅದ್ವೈತಾಮೃತವರ್ಷಿಣೀಂ ಭಗವತೀಂ ಅಷ್ಟಾದಶಾಧ್ಯಾಯಿನೀಂ
ಅಂಬ ತ್ವಾಮನುಸಂದಧಾಮಿ ಭಗವದ್ ಗೀತೇ ಭವದ್ವೇಷಿಣೀಮ್ ॥
ನಮೋಽಸ್ತು ತೇ ವ್ಯಾಸ ವಿಶಾಲಬುದ್ಧೇ
ಫುಲ್ಲಾರವಿಂದಾಯತಪತ್ರನೇತ್ರ ।
ಯೇನ ತ್ವಯಾ ಭಾರತತೈಲಪೂರ್ಣಃ
ಪ್ರಜ್ವಾಲಿತೋ ಜ್ಞಾನಮಯಪ್ರದೀಪಃ ॥ ೨॥
ಪ್ರಪನ್ನಪಾರಿಜಾತಾಯ ತೋತ್ರವೇತ್ರೈಕಪಾಣಯೇ ।
ಜ್ಞಾನಮುದ್ರಾಯ ಕೃಷ್ಣಾಯ ಗೀತಾಮೃತದುಹೇ ನಮಃ ॥ ೩॥
ಸರ್ವೋಪನಿಷದೋ ಗಾವೋ ದೋಗ್ಧಾ ಗೋಪಾಲನಂದನಃ ।
ಪಾರ್ಥೋ ವತ್ಸಃ ಸುಧೀರ್ಭೋಕ್ತಾ ದುಗ್ಧಂ ಗೀತಾಮೃತಂ ಮಹತ್ ॥
ವಸುದೇವಸುತಂ ದೇವಂ ಕಂಸಚಾಣೂರಮರ್ದನಮ್ ।
ದೇವಕೀಪರಮಾನಂದಂ ಕೃಷ್ಣಂ ವಂದೇ ಜಗದ್ಗುರುಮ್ ॥ ೫॥

ಭೀಷ್ಮದ್ರೋಣತಟಾ ಜಯದ್ರಥಜಲಾ ಗಾಂಧಾರನೀಲೋತ್ಪಲಾ
ಶಲ್ಯಗ್ರಾಹವತೀ ಕೃಪೇಣ ವಹನೀ ಕರ್ಣೇನ ವೇಲಾಕುಲಾ ।
ಅಶ್ವತ್ಥಾಮವಿಕರ್ಣಘೋರಮಕರಾ ದುರ್ಯೋಧನಾವರ್ತಿನೀ
ಸೋತ್ತೀರ್ಣಾ ಖಲು ಪಾಂಡವೈ ರಣನದೀ ಕೈವರ್ತಕಃ ಕೇಶವಃ॥
ಪಾರಾಶರ್ಯವಚಃಸರೋಜಮಮಲಂ ಗೀತಾರ್ಥಗಂಧೋತ್ಕಟಂ
ನಾನಾಖ್ಯಾನಕಕೇಸರಂ ಹರಿಕಥಾ ಸಂಬೋಧನಾಬೋಧಿತಮ್ ।
ಲೋಕೇ ಸಜ್ಜನಷಟ್ಪದೈರಹರಹಃ ಪೇಪೀಯಮಾನಂ ಮುದಾ
ಭೂಯಾದ್ಭಾರತಪಂಕಜಂ ಕಲಿಮಲಪ್ರಧ್ವಂಸಿ ನಃ ಶ್ರೇಯಸೇ ॥
ಮೂಕಂ ಕರೋತಿ ವಾಚಾಲಂ ಪಂಗುಂ ಲಂಘಯತೇ ಗಿರಿಮ್ ।
ಯತ್ಕೃಪಾ ತಮಹಂ ವಂದೇ ಪರಮಾನಂದಮಾಧವಮ್ ॥ ೮॥
ಯಂ ಬ್ರಹ್ಮಾವರುಣೇಂದ್ರರುದ್ರಮರುತಃ ಸ್ತುನ್ವಂತಿ ದಿವ್ಯೈಃ ಸ್ತವೈ-
ರ್ವೇದೈಃ ಸಾಂಗಪದಕ್ರಮೋಪನಿಷದೈರ್ಗಾಯಂತಿ ಯಂಸಾಮಗಾಃ ।
ಧ್ಯಾನಾವಸ್ಥಿತತದ್ಗತೇನ ಮನಸಾ ಪಶ್ಯಂತಿ ಯಂ ಯೋಗಿನೋ
ಯಸ್ಯಾಂತಂ ನ ವಿದುಃ ಸುರಾಸುರಗಣಾ ದೇವಾಯ ತಸ್ಮೈ ನಮಃ॥

ಶಾಂತಾಕಾರಂ ಭುಜಗಶಯನಂ ಪದ್ಮನಾಭಂ ಸುರೇಶಂ
ವಿಶ್ವಾಧಾರಂ ಗಗನಸದೃಶಂ ಮೇಘವರ್ಣಂ ಶುಭಾಙ್ಗಮ್।
ಲಕ್ಷ್ಮೀಕಾಂತಂ ಕಮಲನಯನಂ ಯೋಗಿಹೃದ್ಧ್ಯಾನಗಮ್ಯಂ
ವಂದೇ ವಿಷ್ಣು ಭವಭಯಹರಂ ಸರ್ವಲೋಕೈಕನಾಥಮ್॥

ಓಂ ಶ್ರೀಪರಮಾತ್ಮನೇ ನಮಃ

*ಓಂ ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ಪೂರ್ಣಮುದಚ್ಯತೇ।*
*ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ॥*

# ಶ್ರೀಮದ್ಭಗವದ್ಗೀತಾ

## ॥ ಅಥ ಪ್ರಥಮೋಽಧ್ಯಾಯಃ॥
## ಅರ್ಜುನ ವಿಷಾದಯೋಗವು

ಧೃತರಾಷ್ಟ್ರ ಉವಾಚ

**ಧರ್ಮಕ್ಷೇತ್ರೇ ಕುರುಕ್ಷೇತ್ರೇ ಸಮವೇತಾ ಯುಯುತ್ಸವಃ ।**
**ಮಾಮಕಾಃ ಪಾಂಡವಾಶ್ಚೈವ ಕಿಮಕುರ್ವತ ಸಂಜಯ ॥ ೧॥**

ಧೃತರಾಷ್ಟ್ರನು ಹೇಳಿದನು – ಹೇ ಸಂಜಯ! ಧರ್ಮಭೂಮಿಯಾದ ಕುರುಕ್ಷೇತ್ರದಲ್ಲಿ ಸೇರಿದ ಯುದ್ಧದ ಇಚ್ಛೆ ಉಳ್ಳ ನನ್ನವರು ಹಾಗೂ ಪಾಂಡುವಿನ ಪುತ್ರರು ಏನು ಮಾಡಿದರು? ॥ ೧॥

*ಸಂಜಯ ಉವಾಚ*

**ದೃಷ್ಟ್ವಾ ತು ಪಾಂಡವಾನೀಕಂ ವ್ಯೂಢಂ ದುರ್ಯೋಧನಸ್ತದಾ ।**
**ಆಚಾರ್ಯಮುಪಸಂಗಮ್ಯ ರಾಜಾ ವಚನಮಬ್ರವೀತ್ ॥ ೨॥**

ಸಂಜಯನು ಹೇಳಿದನು – ಯುದ್ಧಾರಂಭದ ಸಮಯದಲ್ಲಿ ರಾಜನಾದ ದುರ್ಯೋಧನನು ವ್ಯೂಹರಚನಾ ಯುಕ್ತವಾದ ಪಾಂಡವರ ಸೈನ್ಯವನ್ನು ನೋಡಿ ದ್ರೋಣಾಚಾರ್ಯರ ಬಳಿಗೆ ಹೋಗಿ ಈ ಮಾತನ್ನು ಹೇಳಿದನು. ॥ ೨॥

**ಪಶ್ಯೈತಾಂ ಪಾಂಡುಪುತ್ರಾಣಾಮಾಚಾರ್ಯ ಮಹತೀಂ ಚಮೂಮ್**
**ವ್ಯೂಢಾಂ ದ್ರುಪದಪುತ್ರೇಣ ತವ ಶಿಷ್ಯೇಣ ಧೀಮತಾ ॥ ३॥**

ಹೇ ಆಚಾರ್ಯರೇ! ತಮ್ಮ ಬುದ್ಧಿವಂತನಾದ ಶಿಷ್ಯ ದ್ರುಪದ ಪುತ್ರ, ಧೃಷ್ಟದ್ಯುಮ್ನನ ಮೂಲಕ ವ್ಯೂಹಾಕಾರವಾಗಿ ನಿಲ್ಲಿಸಲ್ಪಟ್ಟ ಪಾಂಡುಪುತ್ರರ ಈ ಬಹಳ ದೊಡ್ಡದಾದ ಸೈನ್ಯವನ್ನು ನೋಡಿರಿ ॥ ३॥

**ಅತ್ರ ಶೂರಾ ಮಹೇಷ್ವಾಸಾ ಭೀಮಾರ್ಜುನಸಮಾ ಯುಧಿ ।**
**ಯುಯುಧಾನೋ ವಿರಾಟಶ್ಚ ದ್ರುಪದಶ್ಚ ಮಹಾರಥಃ ॥ ४॥**
**ಧೃಷ್ಟಕೇತುಶ್ಚೇಕಿತಾನಃ ಕಾಶಿರಾಜಶ್ಚ ವೀರ್ಯವಾನ್ ।**
**ಪುರುಜಿತ್ಕುಂತಿಭೋಜಶ್ಚ ಶೈಬ್ಯಶ್ಚ ನರಪುಂಗವಃ ॥ ५॥**
**ಯುಧಾಮನ್ಯುಶ್ಚ ವಿಕ್ರಾಂತ ಉತ್ತಮೌಜಾಶ್ಚ ವೀರ್ಯವಾನ್ ।**
**ಸೌಭದ್ರೋ ದ್ರೌಪದೇಯಾಶ್ಚ ಸರ್ವ ಏವ ಮಹಾರಥಾಃ ॥**

ಈ ಸೈನ್ಯದಲ್ಲಿ ದೊಡ್ಡ ದೊಡ್ಡ ಧನುಸ್ಸುಳ್ಳ ಹಾಗೂ ಯುದ್ಧದಲ್ಲಿ ಭೀಮಾರ್ಜುನರಿಗೆ ಸಮಾನರಾದ ಶೂರ-ವೀರ ಸಾತ್ಯಕಿಯೂ, ವಿರಾಟನೂ, ಮಹಾರಥಿಯಾದ ದ್ರುಪದ ರಾಜನೂ, ಧೃಷ್ಟಕೇತು ಮತ್ತು ಚೇಕಿತಾನನು ಹಾಗೂ ಬಲಶಾಲಿಯಾದ ಕಾಶಿರಾಜನೂ, ಪುರುಜಿತ್ತು, ಕುಂತಿಭೋಜನೂ, ಮನುಷ್ಯರಲ್ಲಿ ಶ್ರೇಷ್ಠನಾದ ಶೈಬ್ಯನೂ, ಪರಾಕ್ರಮಿಯಾದ ಯುಧಾಮನ್ಯುವು, ಬಲಶಾಲಿಯಾದ ಉತ್ತಮೌಜನು,

ಸುಭದ್ರಾಪುತ್ರನಾದ ಅಭಿಮನ್ಯುವು ಹಾಗೂ ದ್ರೌಪದಿಯ ಐವರು ಪುತ್ರರೂ - ಇವರೆಲ್ಲರೂ ಮಹಾರಥಿಗಳಾಗಿದ್ದಾರೆ.

**ಅಸ್ಮಾಕಂ ತು ವಿಶಿಷ್ಟಾ ಯೇ ತಾನ್ನಿಬೋಧ ದ್ವಿಜೋತ್ತಮ ।**
**ನಾಯಕಾ ಮಮ ಸೈನ್ಯಸ್ಯ ಸಂಜ್ಞಾರ್ಥಂ ತಾನ್ ಬ್ರವೀಮಿ ತೇ**

ಹೇ ಬ್ರಾಹ್ಮಣಶ್ರೇಷ್ಠರೇ! ನಮ್ಮ ಪಕ್ಷದಲ್ಲಿಯೂ ಕೂಡ ಯಾವ ಪ್ರಧಾನರಾದ ಯೋಧರಿದ್ದಾರೆಯೋ ಅವರನ್ನು ನೀವು ತಿಳಿದುಕೊಳ್ಳಿರಿ. ತಮ್ಮ ತಿಳಿವಳಿಕೆಗಾಗಿ ನನ್ನ ಸೈನ್ಯದಲ್ಲಿ ಯಾರು-ಯಾರು ಸೇನಾಧಿಪತಿಗಳಿದ್ದಾರೋ ಅವರನ್ನು ತಿಳಿಸುತ್ತೇನೆ.

**ಭವಾನ್ ಭೀಷ್ಮಶ್ಚ ಕರ್ಣಶ್ಚ ಕೃಪಶ್ಚ ಸಮಿತಿಂಜಯಃ ।**
**ಅಶ್ವತ್ಥಾಮಾ ವಿಕರ್ಣಶ್ಚ ಸೌಮದತ್ತಿಸ್ತಥೈವ ಚ ॥ ೮॥**

ದ್ರೋಣಾಚಾರ್ಯರಾದ ನೀವು ಮತ್ತು ಪಿತಾಮಹರಾದ ಭೀಷ್ಮರು ಹಾಗೂ ಕರ್ಣನು ಮತ್ತು ಸಂಗ್ರಾಮವಿಜಯಿಯಾದ ಕೃಪಾಚಾರ್ಯರು, ಅಂತೆಯೇ ಅಶ್ವತ್ಥಾಮನು, ವಿಕರ್ಣನು ಮತ್ತು ಸೋಮದತ್ತನ ಪುತ್ರನಾದ ಭೂರಿಶ್ರವನು - ॥ ೮॥

**ಅನ್ಯೇ ಚ ಬಹವಃ ಶೂರಾ ಮದರ್ಥೇ ತ್ಯಕ್ತಜೀವಿತಾಃ ।**
**ನಾನಾಶಸ್ತ್ರಪ್ರಹರಣಾಃ ಸರ್ವೇ ಯುದ್ಧವಿಶಾರದಾಃ ॥ ೯॥**

ಇನ್ನೂ ಕೂಡ ನನಗೋಸ್ಕರ ಜೀವನದ ಆಸೆ ಯನ್ನು ತ್ಯಾಗಮಾಡಿರುವ ಅನೇಕರಾದ ಶೂರವೀರರು ಅನೇಕ

ಪ್ರಕಾರದ ಶಸ್ತ್ರಾಸ್ತ್ರಗಳಿಂದ ಸುಸಜ್ಜಿತರಾಗಿದ್ದಾರೆ ಮತ್ತು ಅವರೆಲ್ಲರೂ ಯುದ್ಧದಲ್ಲಿ ನಿಪುಣರಾಗಿದ್ದಾರೆ. ॥ ೯॥

**ಅಪರ್ಯಾಪ್ತಂ ತದಸ್ಮಾಕಂ ಬಲಂ ಭೀಷ್ಮಾಭಿರಕ್ಷಿತಮ್ ।**
**ಪರ್ಯಾಪ್ತಂ ತ್ವಿದಮೇತೇಷಾಂ ಬಲಂ ಭೀಮಾಭಿರಕ್ಷಿತಮ್ ॥**

ಭೀಷ್ಮಪಿತಾಮಹರ ಮೂಲಕ ರಕ್ಷಿತವಾದ ನಮ್ಮ ಆ ಸೈನ್ಯವು ಅಪರಿಮಿತವಾಗಿದೆ ಅರ್ಥಾತ್ ಎಲ್ಲ ಪ್ರಕಾರದಿಂದ ಅಜೇಯವಾಗಿದೆ ಮತ್ತು ಭೀಮನಿಂದ ರಕ್ಷಿತವಾಗಿರುವ ಇವರುಗಳ ಈ ಸೈನ್ಯವು ಪರಿಮಿತ ಅರ್ಥಾತ್ ಗೆಲ್ಲಲು ಸುಗಮವಾಗಿದೆ. ॥ ೧೦॥

**ಅಯನೇಷು ಚ ಸರ್ವೇಷು ಯಥಾಭಾಗಮವಸ್ಥಿತಾಃ ।**
**ಭೀಷ್ಮಮೇವಾಭಿರಕ್ಷಂತು ಭವಂತಃ ಸರ್ವ ಏವ ಹಿ ॥ ೧೧॥**

ಆದ್ದರಿಂದ ಎಲ್ಲಾ ವ್ಯೂಹದ್ವಾರಗಳಲ್ಲಿ ನಿಮ್ಮ ನಿಮ್ಮ ಜಾಗಗಳಲ್ಲಿ ಸ್ಥಿರವಾಗಿರುತ್ತ ನೀವೆಲ್ಲರೂ ನಿಸ್ಸಂದೇಹರಾಗಿ ಭೀಷ್ಮಪಿತಾಮಹರನ್ನೇ ಎಲ್ಲ ಕಡೆಯಿಂದ ರಕ್ಷಿಸಿರಿ ॥ ೧೧॥

**ತಸ್ಯ ಸಂಜನಯನ್ ಹರ್ಷಂ ಕುರುವೃದ್ಧಃ ಪಿತಾಮಹಃ ।**
**ಸಿಂಹನಾದಂ ವಿನದ್ಯೋಚ್ಚೈಃ ಶಂಖಂ ದಧ್ಮೌ ಪ್ರತಾಪವಾನ್**

ಕೌರವರಲ್ಲಿ ವೃದ್ಧರಾದ, ಬಹಳ ಪ್ರತಾಪಿಯಾದ ಪಿತಾಮಹ ಭೀಷ್ಮರು ಆ ದುರ್ಯೋಧನನ ಹೃದಯದಲ್ಲಿ ಹರ್ಷವನ್ನುಂಟುಮಾಡುತ್ತ ಉಚ್ಚ ಸ್ವರದಲ್ಲಿ ಸಿಂಹದ ಗರ್ಜನೆಗೆ ಸಮಾನವಾಗಿ ಗರ್ಜಿಸಿ ಶಂಖವನ್ನು ಊದಿದರು. ॥ ೧೨॥

**ತತಃ ಶಂಖಾಶ್ಚ ಭೇರ್ಯಶ್ಚ ಪಣವಾನಕಗೋಮುಖಾಃ ।**
**ಸಹಸೈವಾಭ್ಯಹನ್ಯಂತ ಸ ಶಬ್ದಸ್ತುಮುಲೋಽಭವತ್ ॥ ೧೩॥**

ಇದಾದ ನಂತರ ಶಂಖಗಳು, ನಗಾರಿಗಳು ಹಾಗೂ ಡೋಲು, ಮೃದಂಗ, ಕಹಳೆ ಮೊದಲಾದ ವಾದ್ಯಗಳು ಒಟ್ಟಿಗೆ ಮೊಳಗಿದವು. ಅವುಗಳ ಆ ಶಬ್ದವು ಬಹಳ ಭಯಂಕರವಾಯಿತು.

**ತತಃ ಶ್ವೇತೈರ್ಹಯೈರ್ಯುಕ್ತೇ ಮಹತಿ ಸ್ಯಂದನೇ ಸ್ಥಿತೌ ।**
**ಮಾಧವಃ ಪಾಂಡವಶ್ಚೈವ ದಿವ್ಯೌ ಶಂಖೌ ಪ್ರದಧ್ಮತುಃ ॥**

ಇದಾದ ನಂತರ ಬಿಳಿಯ ಬಣ್ಣದ ಕುದುರೆಗಳಿಂದ ಯುಕ್ತವಾದ ಉತ್ತಮ ರಥದಲ್ಲಿ ಕುಳಿತಿದ್ದ ಭಗವಾನ್ ಶ್ರೀಕೃಷ್ಣನು ಮತ್ತು ಅರ್ಜುನನೂ ಕೂಡ ಅಲೌಕಿಕವಾದ ಶಂಖಗಳನ್ನು ಊದಿದರು. ॥ ೧೪॥

**ಪಾಂಚಜನ್ಯಂ ಹೃಷೀಕೇಶೋ ದೇವದತ್ತಂ ಧನಂಜಯಃ ।**
**ಪೌಂಡ್ರಂ ದಧ್ಮೌ ಮಹಾಶಂಖಂ ಭೀಮಕರ್ಮಾ ವೃಕೋದರಃ**

ಭಗವಾನ್ ಶ್ರೀಕೃಷ್ಣನು ಪಾಂಚಜನ್ಯವೆಂಬ ಹೆಸರಿನ ಶಂಖವನ್ನೂ, ಅರ್ಜುನನು ದೇವದತ್ತವೆಂಬ ಹೆಸರಿನ ಶಂಖವನ್ನೂ ಮತ್ತು ಭಯಾನಕ ಕರ್ಮಗಳನ್ನು ಮಾಡುವ ಭೀಮಸೇನನು ಪೌಂಡ್ರವೆಂಬ ಹೆಸರಿನ ಮಹಾಶಂಖವನ್ನು ಊದಿದರು. ॥ ೧೫॥

**ಅನಂತವಿಜಯಂ ರಾಜಾ ಕುಂತೀಪುತ್ರೋ ಯುಧಿಷ್ಠಿರಃ।**
**ನಕುಲಃ ಸಹದೇವಶ್ಚ ಸುಘೋಷಮಣಿಪುಷ್ಪಕೌ ॥ ೧೬॥**

ಕುಂತಿಯ ಪುತ್ರನಾದ ರಾಜಾ ಯುಧಿಷ್ಠಿರನು ಅನಂತ ವಿಜಯವೆಂಬ ಹೆಸರಿನ ಮತ್ತು ನಕುಲ ಹಾಗೂ ಸಹದೇವರು ಸುಘೋಷ ಮತ್ತು ಮಣಿಪುಷ್ಪಕವೆಂಬ ಹೆಸರಿನ ಶಂಖಗಳನ್ನು ಊದಿದರು. ॥ ೧೬॥

**ಕಾಶ್ಯಶ್ಚ ಪರಮೇಷ್ವಾಸಃ ಶಿಖಂಡೀ ಚ ಮಹಾರಥಃ ।**
**ಧೃಷ್ಟದ್ಯುಮ್ನೋ ವಿರಾಟಶ್ಚ ಸಾತ್ಯಕಿಶ್ಚಾಪರಾಜಿತಃ ॥ ೧೭॥**
**ದ್ರುಪದೋ ದ್ರೌಪದೇಯಾಶ್ಚ ಸರ್ವಶಃ ಪೃಥಿವೀಪತೇ।**
**ಸೌಭದ್ರಶ್ಚ ಮಹಾಬಾಹುಃ ಶಂಖಾನ್‌ದಧ್ಮುಃ ಪೃಥಕ್ಪೃಥಕ್॥**

ಶ್ರೇಷ್ಠವಾದ ಧನುಸ್ಸುಳ್ಳ ಕಾಶಿರಾಜನು ಮತ್ತು ಮಹಾರಥಿಯಾದ ಶಿಖಂಡೀ ಹಾಗೂ ಧೃಷ್ಟದ್ಯುಮ್ನ, ರಾಜಾ ವಿರಾಟನು ಮತ್ತು ಅಜೇಯನಾದ ಸಾತ್ಯಕಿಯು, ರಾಜನಾದ ದ್ರುಪದನು, ದ್ರೌಪದಿಯ ಐವರು ಪುತ್ರರು ಮತ್ತು ಮಹಾಬಾಹುವಾದ ಸುಭದ್ರಾಪುತ್ರ ಅಭಿಮನ್ಯುವು - ಇವರೆಲ್ಲರೂ ಹೇ! ರಾಜನೇ! ಎಲ್ಲಕಡೆಗಳಿಂದ ಬೇರೆ-ಬೇರೆಯಾಗಿ ಶಂಖಗಳನ್ನು ಊದಿದರು. ॥ ೧೭-೧೮॥

**ಸ ಘೋಷೋ ಧಾರ್ತರಾಷ್ಟ್ರಾಣಾಂ ಹೃದಯಾನಿ ವ್ಯದಾರಯತ್**
**ನಭಶ್ಚ ಪೃಥಿವೀಂ ಚೈವ ತುಮುಲೋ ವ್ಯನುನಾದಯನ್ ॥**

ಮತ್ತು ಆ ಭಯಾನಕವಾದ ಶಬ್ದವು ಆಕಾಶ ಮತ್ತು ಪೃಥ್ವಿಯನ್ನು ಸಹ ಪ್ರತಿಧ್ವನಿಗೊಳಿಸುತ್ತ ದುರ್ಯೋಧನಾದಿಗಳ ಅಂದರೆ ನಿಮ್ಮ ಪಕ್ಷದವರ ಹೃದಯಗಳನ್ನು ಭೇದಿಸಿತು. ॥ ೧೯॥

**ಅಥ ವ್ಯವಸ್ಥಿತಾನ್ ದೃಷ್ಟ್ವಾ ಧಾರ್ತರಾಷ್ಟ್ರಾನ್ ಕಪಿಧ್ವಜಃ ।**
**ಪ್ರವೃತ್ತೇ ಶಸ್ತ್ರಸಂಪಾತೇ ಧನುರುದ್ಯಮ್ಯ ಪಾಂಡವಃ ॥ ೨೦॥**
**ಹೃಷೀಕೇಶಂ ತದಾ ವಾಕ್ಯಮಿದಮಾಹ ಮಹೀಪತೇ ।**

**ಅರ್ಜುನಉವಾಚ**

**ಸೇನೆಯೋರುಭಯೋರ್ಮಧ್ಯೇ ರಥಂ ಸ್ಥಾಪಯ ಮೇಽಚ್ಯುತ**

ಹೇ ರಾಜಾ! ಇದಾದನಂತರ ಕಪಿಧ್ವಜನಾದ ಅರ್ಜುನನು ಯುದ್ಧಕ್ಕೆ ಸನ್ನದ್ಧರಾಗಿ ನಿಂತಿರುವ ಧೃತರಾಷ್ಟ್ರನ ಸಂಬಂಧಿಗಳನ್ನು ನೋಡಿದವನಾಗಿ ಆ ಶಸ್ತ್ರ ಪ್ರಯೋಗ ಸಿದ್ಧತೆಯ ಸಮಯದಲ್ಲಿ ಧನುಸ್ಸನ್ನು ಎತ್ತಿಕೊಂಡು ಹೃಷೀಕೇಶನಾದ ಭಗವಾನ್ ಶ್ರೀಕೃಷ್ಣನಿಗೆ ಈ ವಚನವನ್ನು ಹೇಳಿದನು. ಹೇ ಅಚ್ಯುತನೇ! ನನ್ನ ರಥವನ್ನು ಎರಡೂ ಸೈನ್ಯಗಳ ಮಧ್ಯದಲ್ಲಿ ನಿಲ್ಲಿಸಿಬಿಡು. ॥ ೨೦-೨೧॥

**ಯಾವದೇತಾನ್ನಿರೀಕ್ಷೇಽಹಂ ಯೋದ್ಧುಕಾಮಾನವಸ್ಥಿತಾನ್ ।**
**ಕೈರ್ಮಯಾ ಸಹ ಯೋದ್ಧವ್ಯಮಸ್ಮಿನ್ ರಣಸಮುದ್ಯಮೇ ॥ ೨೨॥**

ನಾನು ಯುದ್ಧಕ್ಷೇತ್ರದಲ್ಲಿ ಸನ್ನದ್ಧರಾಗಿರುವ ಯುದ್ಧದ ಅಭಿಲಾಷೆಯುಳ್ಳ ಈ ವಿಪಕ್ಷದ ಯೋಧರನ್ನು ಚೆನ್ನಾಗಿ ನೋಡಿ

ಬಿಡುತ್ತೇನೆ. ಈ ಯುದ್ಧರೂಪವಾದ ವ್ಯಾಪಾರದಲ್ಲಿ ನಾನು ಯಾರ-ಯಾರೊಡನೆ ಯುದ್ಧಮಾಡುವುದು ಯೋಗ್ಯವೆಂಬು ದನ್ನು ತಿಳಿದುಕೊಳ್ಳುವೆನು. ಅಲ್ಲಿಯವರೆಗೆ ರಥವನ್ನು ನಿಲ್ಲಿಸಿಕೊಂಡಿರು. ॥ ೨೨॥

**ಯೋತ್ಸ್ಯಮಾನಾನವೇಕ್ಷೇಽಹಂ ಯ ಏತೇಽತ್ರ ಸಮಾಗತಾಃ ।**
**ಧಾರ್ತರಾಷ್ಟ್ರಸ್ಯ ದುರ್ಬುದ್ಧೇರ್ಯುದ್ಧೇ ಪ್ರಿಯಚಿಕೀರ್ಷವಃ ॥**

ದುಷ್ಟಬುದ್ಧಿಯುಳ್ಳ ದುರ್ಯೋಧನನಿಗೆ ಯುದ್ಧದಲ್ಲಿ ಹಿತವನ್ನು ಬಯಸುವ ಯಾವ ಯಾವ ರಾಜರುಗಳು ಈ ಸೈನ್ಯದಲ್ಲಿ ಬಂದಿದ್ದಾರೋ ಅಂತಹ ಯುದ್ಧಮಾಡುವವರನ್ನು ನಾನು ನೋಡಿಕೊಳ್ಳುವೆನು. ॥ ೨೩॥

ಸಂಜಯ ಉವಾಚ

**ಏವಮುಕ್ತೋ ಹೃಷೀಕೇಶೋ ಗುಡಾಕೇಶೇನ ಭಾರತ ।**
**ಸೇನಯೋರುಭಯೋರ್ಮಧ್ಯೇ ಸ್ಥಾಪಯಿತ್ವಾ ರಥೋತ್ತಮಮ್**
**ಭೀಷ್ಮದ್ರೋಣಪ್ರಮುಖತಃ ಸರ್ವೇಷಾಂ ಚ ಮಹೀಕ್ಷಿತಾಮ್ ।**
**ಉವಾಚ ಪಾರ್ಥ ಪಶ್ಯೈತಾನ್ ಸಮವೇತಾನ್ ಕುರೂನಿತಿ ॥**

ಸಂಜಯನು ಹೇಳಿದನು – ಹೇ ಧೃತರಾಷ್ಟ್ರ! ಅರ್ಜುನನು ಈ ಪ್ರಕಾರವಾಗಿ ಹೇಳಿದಾಗ ಭಗವಾನ್ ಶ್ರೀಕೃಷ್ಣನು ಎರಡೂ ಸೈನ್ಯಗಳ ಮಧ್ಯದಲ್ಲಿ ಭೀಷ್ಮ ಮತ್ತು

ದ್ರೋಣಾಚಾರ್ಯರ ಎದುರಿಗೆ ಹಾಗೂ ಸಂಪೂರ್ಣ ರಾಜರುಗಳೆದುರಿನಲ್ಲಿ ಉತ್ತಮವಾದ ರಥವನ್ನು ನಿಲ್ಲಿಸಿ ಹೇ ಪಾರ್ಥನೇ! ಯುದ್ಧಕ್ಕಾಗಿ ನೆರೆದಿರುವ ಈ ಕೌರವರನ್ನು ನೋಡು ಈ ಪ್ರಕಾರವಾಗಿ ಹೇಳಿದನು. ॥ ೨೪-೨೫॥

**ತತ್ರಾಪಶ್ಯತ್ಸ್ಥಿತಾನ್ ಪಾರ್ಥಃ ಪಿತೄನಥ ಪಿತಾಮಹಾನ್ ।**
**ಆಚಾರ್ಯಾನ್ಮಾತುಲಾನ್ ಭ್ರಾತೄನ್ ಪುತ್ರಾನ್ ಪೌತ್ರಾನ್ ಸಖೀಂಸ್ತಥಾ**
**ಶ್ವಶುರಾನ್ ಸುಹೃದಶ್ಚೈವ ಸೇನಯೋರುಭಯೋರಪಿ ।**

ಇದಾದ ನಂತರ ಪಾರ್ಥನು ಆ ಎರಡೂ ಸೈನ್ಯಗಳಲ್ಲಿ ಸೇರಿದ್ದ ದೊಡ್ಡಪ್ಪ - ಚಿಕ್ಕಪ್ಪಂದಿರನ್ನು, ಅಜ್ಜ - ಮುತ್ತಜ್ಜರನ್ನು, ಗುರುಗಳನ್ನು, ಸೋದರಮಾವಂದಿರನ್ನು, ಸಹೋದರರನ್ನು, ಮಕ್ಕಳು - ಮೊಮ್ಮಕ್ಕಳನ್ನು, ಹಾಗೂ ಮಿತ್ರರನ್ನು, ಮಾವಂದಿರನ್ನು ಮತ್ತು ಸಹೃದಯರನ್ನೂ ನೋಡಿದನು. ॥ ೨೬ ಮತ್ತು ೨೭ರ ಪೂರ್ವಾರ್ಧ॥

**ತಾನ್ ಸಮೀಕ್ಷ್ಯ ಸ ಕೌಂತೇಯಃ ಸರ್ವಾನ್ಬಂಧೂನವಸ್ಥಿತಾನ್**
**ಕೃಪಯಾ ಪರಯಾವಿಷ್ಟೋ ವಿಷೀದನ್ನಿದಮಬ್ರವೀತ್ ।**

ಅಲ್ಲಿ ಉಪಸ್ಥಿತರಿದ್ದ ಸಂಪೂರ್ಣ ಬಂಧುಗಳನ್ನು ನೋಡಿ ಆ ಕುಂತೀಪುತ್ರನಾದ ಅರ್ಜುನನು ಅತ್ಯಂತ ಕರುಣಾ ಪರವಶನಾಗಿ ಶೋಕಿಸುತ್ತ ಹೀಗೆ ಹೇಳಿದನು. ॥ ೨೭ರ ಉತ್ತರಾರ್ಧ - ೨೮ರ ಪೂರ್ವಾರ್ಧ ॥

ಅರ್ಜುನ ಉವಾಚ

**ದೃಷ್ಟ್ವೇಮಂ ಸ್ವಜನಂ ಕೃಷ್ಣ ಯುಯುತ್ಸುಂ ಸಮುಪಸ್ಥಿತಮ್ ॥**
**ಸೀದಂತಿ ಮಮ ಗಾತ್ರಾಣಿ ಮುಖಂ ಚ ಪರಿಶುಷ್ಯತಿ ।**
**ವೇಪಥುಶ್ಚ ಶರೀರೇ ಮೇ ರೋಮಹರ್ಷಶ್ಚ ಜಾಯತೇ ॥**

ಅರ್ಜುನನು ಹೇಳಿದನು – ಹೇ ಕೃಷ್ಣ! ಯುದ್ಧಕ್ಷೇತ್ರದಲ್ಲಿ ಸಿದ್ಧರಾಗಿ ನಿಂತಿರುವ ಯುದ್ಧಾಭಿಲಾಷಿಗಳಾದ ಈ ಸ್ವಜನ ಸಮುದಾಯವನ್ನು ನೋಡಿ ನನ್ನ ಅಂಗಾಂಗಗಳು ಶಿಥಿಲವಾಗಿ ಹೋಗುತ್ತಿವೆ. ಮುಖವು ಒಣಗಿ ಹೋಗುತ್ತಿದೆ ಹಾಗೂ ನನ್ನ ಶರೀರದಲ್ಲಿ ಕಂಪನ ಮತ್ತು ರೋಮಾಂಚವಾಗುತ್ತಿದೆ. ॥ ೨೮ರ ಉತ್ತರಾರ್ಧ ಮತ್ತು ೨೯॥

**ಗಾಂಡೀವಂ ಸ್ರಂಸತೇ ಹಸ್ತಾತ್ತ್ವಕ್ಚೈವ ಪರಿದಹ್ಯತೇ ।**
**ನ ಚ ಶಕ್ನೋಮ್ಯವಸ್ಥಾತುಂ ಭ್ರಮತೀವ ಚ ಮೇ ಮನಃ ॥ ೩೦॥**

ಕೈಯಿಂದ ಗಾಂಡೀವ ಧನುಸ್ಸು ಜಾರಿ ಬೀಳುತ್ತಿದೆ ಮತ್ತು ಚರ್ಮವೂ ಸಹ ಬಹಳವಾಗಿ ಉರಿಯುತ್ತಿದೆ ಹಾಗೂ ನನ್ನ ಮನಸ್ಸು ಭ್ರಮಿಸಿದಂತೆ ತೋರುತ್ತಿದೆ. ಆದ್ದರಿಂದ ನಾನು ನಿಂತುಕೊಂಡಿರಲೂ ಸಹ ಸಮರ್ಥನಾಗಿಲ್ಲ ॥ ೩೦॥

**ನಿಮಿತ್ತಾನಿ ಚ ಪಶ್ಯಾಮಿ ವಿಪರೀತಾನಿ ಕೇಶವ ।**
**ನ ಚ ಶ್ರೇಯೋऽನುಪಶ್ಯಾಮಿ ಹತ್ವಾ ಸ್ವಜನಮಾಹವೇ ॥ ೩೧॥**

ಹೇ ಕೇಶವ ! ನಾನು ಲಕ್ಷಣಗಳನ್ನು ಸಹ ವಿಪರೀತ ವಾಗಿಯೇ ನೋಡುತ್ತಿದ್ದೇನೆ. ಹಾಗೂ ಯುದ್ಧದಲ್ಲಿ ಸ್ವಜನ ಸಮುದಾಯವನ್ನು ಕೊಂದು ಯಾವ ಶ್ರೇಯಸ್ಸನ್ನೂ ನೋಡುವುದಿಲ್ಲ. ॥ ೩೧॥

**ನ ಕಾಂಕ್ಷೇ ವಿಜಯಂ ಕೃಷ್ಣ ನ ಚ ರಾಜ್ಯಂ ಸುಖಾನಿ ಚ ।**
**ಕಿಂ ನೋ ರಾಜ್ಯೇನ ಗೋವಿಂದ ಕಿಂ ಭೋಗೈರ್ಜೀವಿತೇನ ವಾ**

ಹೇ ಕೃಷ್ಣನೇ! ನಾನಾದರೋ ವಿಜಯವನ್ನಾಗಲೀ, ರಾಜ್ಯವನ್ನಾಗಲೀ ಹಾಗೂ ಸುಖವನ್ನಾಗಲೀ ಇಚ್ಛಿಸುವುದಿಲ್ಲ. ಹೇ ಗೋವಿಂದನೇ! ನಮಗೆ ಇಂತಹ ರಾಜ್ಯದಿಂದ ಯಾವ ಪ್ರಯೋಜನವಿದೆ? ಅಥವಾ ಇಂತಹ ಭೋಗಗಳಿಂದಾಗಲೀ, ಜೀವನದಿಂದಾಗಲೀ ಯಾವ ಲಾಭವಿದೆ? ॥ ೩೨॥

**ಯೇಷಾಮರ್ಥೇ ಕಾಂಕ್ಷಿತಂ ನೋ ರಾಜ್ಯಂ ಭೋಗಾಃ ಸುಖಾನಿ ಚ**
**ತ ಇಮೇಽವಸ್ಥಿತಾ ಯುದ್ಧೇ ಪ್ರಾಣಾಂಸ್ತ್ಯಕ್ತ್ವಾ ಧನಾನಿ ಚ ॥**

ನಾವು ಯಾರಿಗಾಗಿ ರಾಜ್ಯವನ್ನು, ಭೋಗಗಳನ್ನು ಮತ್ತು ಸುಖಾದಿಗಳನ್ನು ಇಚ್ಛಿಸುತ್ತೇವೆಯೋ, ಅಂತಹವರೇ ಆದ ಇವರೆಲ್ಲರೂ ಧನ ಮತ್ತು ಜೀವನದ ಆಸೆಯನ್ನು ತ್ಯಜಿಸಿ ಯುದ್ಧಕ್ಕಾಗಿ ನಿಂತಿದ್ದಾರೆ. ॥ ೩೩॥

**ಆಚಾರ್ಯಾಃ ಪಿತರಃ ಪುತ್ರಾಸ್ತಥೈವ ಚ ಪಿತಾಮಹಾಃ ।**
**ಮಾತುಲಾಃ ಶ್ವಶುರಾಃ ಪೌತ್ರಾಃ ಶ್ಯಾಲಾಃ ಸಂಬಂಧಿನಸ್ತಥಾ ॥**

ಗುರುಗಳೂ, ದೊಡ್ಡಪ್ಪ-ಚಿಕ್ಕಪ್ಪಂದಿರೂ, ಪುತ್ರರು, ಮತ್ತು ಅದೇ ಪ್ರಕಾರವಾಗಿ ಅಜ್ಜಂದಿರು, ಸೋದರ ಮಾವಂದಿರೂ, ಮಾವಂದಿರೂ ಪೌತ್ರರೂ, ಭಾವಮೈದುನರೂ ಹಾಗೆಯೇ ಇನ್ನು ಅನೇಕ ಸಂಬಂಧಿಗಳೂ ಇದ್ದಾರೆ. ॥ ೩೪॥

**ಏತಾನ್ನ ಹಂತುಮಿಚ್ಛಾಮಿ ಘ್ನತೋऽಪಿ ಮಧುಸೂದನ ।**
**ಅಪಿ ತ್ರೈಲೋಕ್ಯರಾಜ್ಯಸ್ಯ ಹೇತೋಃ ಕಿಂ ನು ಮಹೀಕೃತೇ ॥ ೩೫॥**

ಹೇ ಮಧುಸೂದನ ! ನನ್ನನ್ನು ಕೊಂದರೂ ಅಥವಾ ಮೂರು ಲೋಕಗಳ ರಾಜ್ಯ ದೊರಕಿದರೂ ಸಹ ನಾನು ಇವರೆಲ್ಲ ರನ್ನು ಕೊಲ್ಲಲು ಇಚ್ಛಿಸುವುದಿಲ್ಲ. ಮತ್ತೆ ಭೂಮಂಡಲದ ರಾಜ್ಯಕ್ಕಾಗಿಯಾದರೋ ಹೇಳುವುದೇನಿದೆ ? ॥ ೩೫॥

**ನಿಹತ್ಯ ಧಾರ್ತರಾಷ್ಟ್ರಾನ್ನಃ ಕಾ ಪ್ರೀತಿಃ ಸ್ಯಾಜ್ಜನಾರ್ದನ ।**
**ಪಾಪಮೇವಾಶ್ರಯೇದಸ್ಮಾನ್ ಹತ್ವೈತಾನಾತತಾಯಿನಃ ॥ ೩೬॥**

ಹೇ ಜನಾರ್ದನ ! ಧೃತರಾಷ್ಟ್ರನ ಪುತ್ರರನ್ನು ಕೊಲ್ಲುವುದ ರಿಂದ ನಮಗೆ ಯಾವ ಸಂತೋಷವುಂಟಾಗುವುದು? ಈ ಆತತಾಯಿಗಳನ್ನು ಕೊಲ್ಲುವುದರಿಂದಲಾದರೋ ನಮಗೆ ಪಾಪವೇ ತಟ್ಟುವುದು. ॥ ೩೬॥

**ತಸ್ಮಾನ್ನಾರ್ಹಾ ವಯಂ ಹಂತುಂ ಧಾರ್ತರಾಷ್ಟ್ರಾನ್ ಸ್ವಬಾಂಧವಾನ್**
**ಸ್ವಜನಂ ಹಿ ಕಥಂ ಹತ್ವಾ ಸುಖಿನಃ ಸ್ಯಾಮ ಮಾಧವ ॥ ೩೭॥**

ಆದುದರಿಂದ ಹೇ ಮಾಧವನೇ! ನಮ್ಮ ಬಾಂಧವರೇ ಆದ ಧೃತರಾಷ್ಟ್ರನ ಮಕ್ಕಳನ್ನು ಕೊಲ್ಲುವುದು ನಮಗೆ ಯೋಗ್ಯವಲ್ಲ; ಏಕೆಂದರೆ ನಮ್ಮದೇ ಆದ ಕುಟುಂಬವನ್ನು ಕೊಂದು ನಾವು ಹೇಗೆ ಸುಖಿಗಳಾಗುವೆವು? ॥ ೩೭॥

**ಯದ್ಯಪ್ಯೇತೇ ನ ಪಶ್ಯಂತಿ ಲೋಭೋಪಹತಚೇತಸಃ ।**
**ಕುಲಕ್ಷಯಕೃತಂ ದೋಷಂ ಮಿತ್ರದ್ರೋಹೇ ಚ ಪಾತಕಮ್**
**ಕಥಂ ನ ಜ್ಞೇಯಮಸ್ಮಾಭಿಃ ಪಾಪಾದಸ್ಮಾನ್ನಿವರ್ತಿತುಮ್ ।**
**ಕುಲಕ್ಷಯಕೃತಂ ದೋಷಂ ಪ್ರಪಶ್ಯದ್ಭಿರ್ಜನಾರ್ದನ ॥**

ಒಂದು ವೇಳೆ ಲೋಭದಿಂದ ಭ್ರಷ್ಟಚಿತ್ತರಾದ ಈ ಜನರು ಕುಲಕ್ಷಯದಿಂದ ಉತ್ಪನ್ನವಾಗುವ ದೋಷವನ್ನೂ ಮತ್ತು ಮಿತ್ರದ್ರೋಹಮಾಡುವುದರಲ್ಲಿ ಪಾಪವನ್ನು ನೋಡುವುದಿಲ್ಲವಾದರೂ, ಹೇ ಜನಾರ್ದನನೇ! ಕುಲದ ನಾಶದಿಂದ ಉತ್ಪನ್ನವಾಗುವ ದೋಷವನ್ನು ತಿಳಿದಿರುವ ನಾವುಗಳು ಈ ಪಾಪದಿಂದ ಹಿಂಜರಿಯಲು ಏಕೆ ವಿಚಾರಮಾಡಬಾರದು? ॥ ೩೮-೩೯॥

**ಕುಲಕ್ಷಯೇ ಪ್ರಣಶ್ಯಂತಿ ಕುಲಧರ್ಮಾಃ ಸನಾತನಾಃ ।**
**ಧರ್ಮೇ ನಷ್ಟೇ ಕುಲಂ ಕೃತ್ಸ್ನಮಧರ್ಮೋಽಭಿಭವತ್ಯುತ ॥ ೪೦॥**

ಕುಲದ ನಾಶದಿಂದ ಸನಾತನವಾದ ಕುಲಧರ್ಮಗಳು ನಷ್ಟವಾಗುತ್ತವೆ. ಧರ್ಮವು ನಾಶವಾದನಂತರ ಸಂಪೂರ್ಣ ಕುಲದಲ್ಲಿ ಪಾಪವು ಕೂಡ ಬಹಳವಾಗಿ ಆವರಿಸಿಕೊಳ್ಳುತ್ತದೆ.

**ಅಧರ್ಮಾಭಿಭವಾತ್ಕೃಷ್ಣ ಪ್ರದುಷ್ಯಂತಿ ಕುಲಸ್ತ್ರಿಯಃ ।**
**ಸ್ತ್ರೀಷು ದುಷ್ಟಾಸು ವಾರ್ಷ್ಣೇಯ ಜಾಯತೇ ವರ್ಣಸಂಕರಃ ॥**

ಹೇ ಕೃಷ್ಣ! ಪಾಪವು ಅಧಿಕವಾಗಿ ಬೆಳೆಯುವುದರಿಂದ ಕುಲದ ಸ್ತ್ರೀಯರು ಅತ್ಯಂತ ದೂಷಿತರಾಗಿ ಬಿಡುತ್ತಾರೆ ಮತ್ತು ಹೇ ವಾರ್ಷ್ಣೇಯನೇ! ಸ್ತ್ರೀಯರು ದೂಷಿತರಾದ ಬಳಿಕ ವರ್ಣಸಾಂಕರ್ಯವು ಉಂಟಾಗುತ್ತದೆ. ॥ ೪೧॥

**ಸಂಕರೋ ನರಕಾಯೈವ ಕುಲಘ್ನಾನಾಂ ಕುಲಸ್ಯ ಚ ।**
**ಪತಂತಿ ಪಿತರೋ ಹ್ಯೇಷಾಂ ಲುಪ್ತಪಿಂಡೋದಕಕ್ರಿಯಾಃ ॥**

ವರ್ಣಸಾಂಕರ್ಯವು ಕುಲಘಾತುಕರನ್ನೂ ಮತ್ತು ಕುಲವನ್ನೂ ನರಕಕ್ಕೆ ಕೊಂಡೊಯ್ಯಲೆಂದೇ ಆಗುತ್ತದೆ. ಲುಪ್ತವಾದ ಪಿಂಡ ಮತ್ತು ತರ್ಪಣಾದಿಗಳಿಂದ ಅರ್ಥಾತ್ ಶ್ರಾದ್ಧ ಮತ್ತು ಪಿತೃತರ್ಪಣಗಳಿಂದ ವಂಚಿತರಾದ ಇವರ ಪಿತೃಗಳು ಕೂಡ ಅಧೋಗತಿಯನ್ನು ಪಡೆಯುತ್ತಾರೆ. ॥ ೪೨॥

**ದೋಷೈರೇತೈಃ ಕುಲಘ್ನಾನಾಂ ವರ್ಣಸಂಕರಕಾರಕೈಃ ।**
**ಉತ್ಸಾದ್ಯಂತೇ ಜಾತಿಧರ್ಮಾಃ ಕುಲಧರ್ಮಾಶ್ಚ ಶಾಶ್ವತಾಃ ॥ ೪೩॥**

ಈ ವರ್ಣಸಂಕರಕಾರಕವಾದ ದೋಷಗಳಿಂದ ಕುಲಘಾತುಕರ ಸನಾತನವಾದ ಕುಲಧರ್ಮಗಳು ಮತ್ತು ಜಾತಿಧರ್ಮಗಳು ನಾಶವಾಗಿ ಬಿಡುತ್ತವೆ. ॥ ೪೩॥

**ಉತ್ಸನ್ನಕುಲಧರ್ಮಾಣಾಂ ಮನುಷ್ಯಾಣಾಂ ಜನಾರ್ದನ ।**
**ನರಕೇऽನಿಯತಂ ವಾಸೋ ಭವತೀತ್ಯನುಶುಶ್ರುಮ ॥ ೪೪॥**

ಹೇ ಜನಾರ್ದನನೇ! ಯಾರ ಕುಲಧರ್ಮಗಳು ನಾಶವಾಗಿವೆಯೋ ಅಂತಹ ಮನುಷ್ಯರು ಅನಿಶ್ಚಿತಕಾಲದವರೆಗೆ ನರಕದಲ್ಲಿ ವಾಸಿಸುತ್ತಾರೆಂದು ನಾವು ಕೇಳುತ್ತ ಬಂದಿದ್ದೇವೆ.

**ಅಹೋ ಬತ ಮಹತ್ಪಾಪಂ ಕರ್ತುಂ ವ್ಯವಸಿತಾ ವಯಮ್ ।**
**ಯದ್ರಾಜ್ಯಸುಖಲೋಭೇನ ಹಂತುಂ ಸ್ವಜನಮುದ್ಯತಾಃ ॥ ೪೫॥**

ಅಯ್ಯೋ! ಕಷ್ಟವೇ! ಬುದ್ಧಿವಂತರಾಗಿದ್ದೂ ಸಹ ನಾವುಗಳು ಮಹತ್ತಾದ ಪಾಪವನ್ನು ಮಾಡಲು ಸಿದ್ಧರಾಗಿದ್ದೇವಲ್ಲ! ಆದರೆ ರಾಜ್ಯ ಮತ್ತು ಸುಖದ ಲೋಭದಿಂದ ಸ್ವಜನರನ್ನು ಕೊಲ್ಲುವುದಕ್ಕೆ ತೊಡಗಿದ್ದೇವಲ್ಲ! ॥ ೪೫॥

**ಯದಿ ಮಾಮಪ್ರತೀಕಾರಮಶಸ್ತ್ರಂ ಶಸ್ತ್ರಪಾಣಯಃ ।**
**ಧಾರ್ತರಾಷ್ಟ್ರಾ ರಣೇ ಹನ್ಯುಸ್ತನ್ಮೇ ಕ್ಷೇಮತರಂ ಭವೇತ್**

ಒಂದು ವೇಳೆ ಶಸ್ತ್ರರಹಿತನೂ ಹಾಗೂ ಎದುರಿಸದೇ ಇರುವ ನನ್ನನ್ನು ಶಸ್ತ್ರಗಳನ್ನು ಕೈಯಲ್ಲಿ ಹಿಡಿದಿರುವ ಧೃತರಾಷ್ಟ್ರನ ಪುತ್ರರು ಯುದ್ಧದಲ್ಲಿ ಕೊಂದುಹಾಕಿದರೂ ಆ ಕೊಲ್ಲುವಿಕೆಯೂ ಸಹ ನನಗೆ ಹೆಚ್ಚು ಶ್ರೇಯಸ್ಕರವಾದೀತು. ॥ ೪೬॥

ಸಂಜಯ ಉವಾಚ

ಏವಮುಕ್ತ್ವಾರ್ಜುನಃ ಸಂಖ್ಯೇ ರಥೋಪಸ್ಥ ಉಪಾವಿಶತ್ ।
ವಿಸೃಜ್ಯ ಸಶರಂ ಚಾಪಂ ಶೋಕಸಂವಿಗ್ನಮಾನಸಃ ॥ ೪೭॥

ಸಂಜಯನು ಹೇಳಿದನು – ರಣಭೂಮಿಯಲ್ಲಿ ಶೋಕದಿಂದ ಉದ್ವಿಗ್ನ ಮನಸ್ಸುಳ್ಳವನಾದ ಅರ್ಜುನನು ಈ ಪ್ರಕಾರವಾಗಿ ಹೇಳಿ ಬಾಣಸಹಿತ ಧನುಸ್ಸನ್ನು ತ್ಯಾಗಮಾಡಿ ರಥದ ಹಿಂಭಾಗದಲ್ಲಿ ಕುಳಿತುಬಿಟ್ಟನು. ॥ ೪೭॥

*ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು*
*ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ*
*ಅರ್ಜುನವಿಷಾದಯೋಗೋ ನಾಮ ಪ್ರಥಮೋಽಧ್ಯಾಯಃ ॥ ೧॥*

❀ ❀ ❀ ❀ ❀

## ॥ ಅಥ ದ್ವಿತೀಯೋಽಧ್ಯಾಯಃ॥

## ಸಾಂಖ್ಯಯೋಗವು

ಸಂಜಯ ಉವಾಚ

ತಂ ತಥಾ ಕೃಪಯಾವಿಷ್ಟಮಶ್ರುಪೂರ್ಣಾಕುಲೇಕ್ಷಣಮ್ ।
ವಿಷೀದಂತಮಿದಂ ವಾಕ್ಯಮುವಾಚ ಮಧುಸೂದನಃ ॥ ೧॥

ಸಂಜಯನು ಹೇಳಿದನು – ಆ ಪ್ರಕಾರವಾಗಿ ಕರುಣೆಯಿಂದ ವ್ಯಾಪ್ತನಾದ ಮತ್ತು ಕಂಬನಿ ತಂಬಿದ ಹಾಗೂ ವ್ಯಾಕುಲ ಕಣ್ಣುಗಳುಳ್ಳವನಾದ, ಶೋಕಯುಕ್ತನಾದ ಆ ಅರ್ಜುನನನ್ನು ಕುರಿತು ಭಗವಾನ್ ಮಧುಸೂದನನು ಈ ಮಾತನ್ನು ಹೇಳಿದನು. ॥ ೧॥

ಶ್ರೀಭಗವಾನುವಾಚ

**ಕುತಸ್ತ್ವಾ ಕಶ್ಮಲಮಿದಂ ವಿಷಮೇ ಸಮುಪಸ್ಥಿತಮ್ ।**
**ಅನಾರ್ಯಜುಷ್ಟಮಸ್ವರ್ಗ್ಯಮಕೀರ್ತಿಕರಮರ್ಜುನ ॥ ೨॥**

ಭಗವಂತ ಹೇಳಿದನು – ಹೇ ಅರ್ಜುನ! ನಿನಗೆ ಈ ಅಸಮಯದಲ್ಲಿ ಅರ್ಥಾತ್ - ಯುದ್ಧಾರಂಭದ ಸಮಯದಲ್ಲಿ ಈ ಪ್ರಕಾರದ ಮೋಹವು ಯಾವ ಕಾರಣದಿಂದ ಪ್ರಾಪ್ತವಾಯಿತು? ಏಕೆಂದರೆ, ಇದು ಶ್ರೇಷ್ಠ ಪುರುಷರಿಂದ ಆಚರಿಸಲ್ಪಡುವುದಲ್ಲ, ಸ್ವರ್ಗವನ್ನು ಕೊಡುವಂತಹುದೂ ಅಲ್ಲ ಮತ್ತು ಕೀರ್ತಿಯನ್ನುಂಟುಮಾಡುವುದೂ ಅಲ್ಲ. ॥ ೨॥

**ಕ್ಲೈಬ್ಯಂ ಮಾ ಸ್ಮ ಗಮಃ ಪಾರ್ಥ ನೈತತ್ತ್ವಯ್ಯುಪಪದ್ಯತೇ ।**
**ಕ್ಷುದ್ರಂ ಹೃದಯದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ ॥ ೩॥**

ಹೇ ಪಾರ್ಥ! ನಪುಂಸಕತ್ವವನ್ನು ಹೊಂದಬೇಡ. ನಿನಗೆ ಇದು ಉಚಿತವಲ್ಲ. ಹೇ ಪರಂತಪ! ಹೃದಯದ ತುಚ್ಛವಾದ ಈ ದೌರ್ಬಲ್ಯವನ್ನು ತ್ಯಜಿಸಿ ಯುದ್ಧಕ್ಕಾಗಿ ಎದ್ದು ನಿಲ್ಲು.

ಅರ್ಜುನ ಉವಾಚ

**ಕಥಂ ಭೀಷ್ಮಮಹಂ ಸಂಖ್ಯೇ ದ್ರೋಣಂ ಚ ಮಧುಸೂದನ ।**
**ಇಷುಭಿಃ ಪ್ರತಿಯೋತ್ಸ್ಯಾಮಿ ಪೂಜಾರ್ಹಾವರಿಸೂದನ ॥ ೪॥**

ಅರ್ಜುನನು ಹೇಳಿದನು – ಹೇ ಮಧುಸೂದನ! ನಾನು ರಣಭೂಮಿಯಲ್ಲಿ ಬಾಣಗಳಿಂದ ಭೀಷ್ಮಪಿತಾಮಹರ ಮತ್ತು

ದ್ರೋಣಾಚಾರ್ಯರ ವಿರುದ್ಧ ಯಾವ ಪ್ರಕಾರ ಯುದ್ಧ ಮಾಡಲಿ? ಏಕೆಂದರೆ, ಹೇ ಅರಿಸೂದನನೇ! ಅವರಿಬ್ಬರೂ ಪೂಜನೀಯರಾಗಿದ್ದಾರೆ. ॥ ೪॥

**ಗುರೂನಹತ್ವಾ ಹಿ ಮಹಾನುಭಾವಾನ್**
**ಶ್ರೇಯೋ ಭೋಕ್ತುಂ ಭೈಕ್ಷ್ಯಮಪೀಹ ಲೋಕೇ ।**
**ಹತ್ವಾರ್ಥಕಾಮಾಂಸ್ತು ಗುರೂನಿಹೈವ**
**ಭುಂಜೀಯ ಭೋಗಾನ್ ರುಧಿರಪ್ರದಿಗ್ಧಾನ್ ॥ ೫॥**

ಅದಕ್ಕಾಗಿ ಈ ಮಹಾನುಭಾವರಾದ ಗುರುಜನರನ್ನು ಕೊಲ್ಲದೆ, ನಾನು ಈ ಲೋಕದಲ್ಲಿ ಭಿಕ್ಷೆಯ ಅನ್ನವನ್ನು ತಿನ್ನುವುದು ಶ್ರೇಯಸ್ಕರವೆಂದು ಭಾವಿಸುತ್ತೇನೆ. ಏಕೆಂದರೆ ಗುರುಜನರನ್ನು ಕೊಲ್ಲುವುದರಿಂದಲಾದರೋ ಈ ಲೋಕದಲ್ಲಿ ರಕ್ತದಿಂದ ತೊಯ್ದಿರುವ ಅರ್ಥ ಮತ್ತು ಕಾಮರೂಪೀ ಭೋಗಗಳನ್ನೇ ಭೋಗಿಸುವೆನು. ॥ ೫॥

**ನ ಚೈತದ್ವಿದ್ಮಃ ಕತರನ್ನೋ ಗರೀಯೋ**
**ಯದ್ವಾ ಜಯೇಮ ಯದಿ ವಾ ನೋ ಜಯೇಯುಃ ।**
**ಯಾನೇವ ಹತ್ವಾ ನ ಜಿಜೀವಿಷಾಮ-**
**ಸ್ತೇಽವಸ್ಥಿತಾಃ ಪ್ರಮುಖೇ ಧಾರ್ತರಾಷ್ಟ್ರಾಃ ॥ ೬॥**

ನಮಗಾಗಿ ಯುದ್ಧಮಾಡುವುದು ಅಥವಾ ಮಾಡದಿರುವುದು, ಇವೆರಡರಲ್ಲಿ ಯಾವುದು ಶ್ರೇಷ್ಠವೆಂಬುದನ್ನು ನಾವು ಅರಿಯೆವು; ಅಥವಾ ಅವರನ್ನು ನಾವು ಗೆಲ್ಲುವೆವೋ, ನಮ್ಮನ್ನು

ಅವರು ಗೆಲ್ಲುವರೋ ಎಂಬುದನ್ನೂ ಅರಿಯೆವು. ಮತ್ತು ಯಾರನ್ನು ಕೊಂದು ನಾವು ಜೀವಿಸಿರಲು ಇಷ್ಟಪಡುವುದಿಲ್ಲವೋ ಅವರೇ ನಮ್ಮ ಆತ್ಮೀಯರಾದ ಧೃತರಾಷ್ಟ್ರನ ಪುತ್ರರು ನಮ್ಮ ಎದುರು ಪ್ರತಿಸ್ಪರ್ಧಿಗಳಾಗಿ ನಿಂತಿದ್ದಾರೆ. ॥ ೬॥

**ಕಾರ್ಪಣ್ಯದೋಷೋಪಹತಸ್ವಭಾವಃ**
**ಪೃಚ್ಛಾಮಿ ತ್ವಾಂ ಧರ್ಮಸಂಮೂಢಚೇತಾಃ ।**
**ಯಚ್ಛ್ರೇಯಃ ಸ್ಯಾನ್ನಿಶ್ಚಿತಂ ಬ್ರೂಹಿ ತನ್ಮೇ**
**ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಮ್ ॥ ೭॥**

ಆದ್ದರಿಂದ ಹೇಡಿತನರೂಪೀ ದೋಷದಿಂದ ನಷ್ಟವಾಗಿರುವ ಸ್ವಭಾವವುಳ್ಳವನೂ ಹಾಗೂ ಧರ್ಮದ ವಿಷಯದಲ್ಲಿ ಮೋಹಿತ ಚಿತ್ತನಾಗಿರುವ ನಾನು ನಿನ್ನಲ್ಲಿ ಪ್ರಾರ್ಥಿಸುವುದೇನೆಂದರೆ - ಯಾವ ಸಾಧನವು ನಿಶ್ಚಯವಾಗಿ ಶ್ರೇಯಸ್ಕರವಾಗಿದೆಯೋ ಅದನ್ನು ನನಗಾಗಿ ಹೇಳು. ನಾನು ನಿನ್ನ ಶಿಷ್ಯನಾಗಿದ್ದೇನೆ. ಆದುದರಿಂದ, ನಿನ್ನಲ್ಲಿ ಶರಣಾಗಿರುವ ನನಗೆ ಉಪದೇಶವನ್ನು ಮಾಡು. ॥ ೭॥

**ನ ಹಿ ಪ್ರಪಶ್ಯಾಮಿ ಮಮಾಪನುದ್ಯಾದ್**
**ಯಚ್ಛೋಕಮುಚ್ಛೋಷಣಮಿಂದ್ರಿಯಾಣಾಮ್ ।**
**ಅವಾಪ್ಯ ಭೂಮಾವಸಪತ್ನಮೃದ್ಧಂ**
**ರಾಜ್ಯಂ ಸುರಾಣಾಮಪಿ ಚಾಧಿಪತ್ಯಮ್ ॥ ೮॥**

ಏಕೆಂದರೆ ಭೂಮಿಯಲ್ಲಿ ನಿಷ್ಕಂಟಕವಾದ, ಧನಧಾನ್ಯ ಸಮೃದ್ಧವಾದ ರಾಜ್ಯವನ್ನು ಮತ್ತು ದೇವತೆಗಳ ಒಡೆತನವನ್ನು ಪಡೆದರೂ ಸಹ ನನ್ನ ಇಂದ್ರಿಯಗಳನ್ನು ಸೊರಗಿಸುತ್ತಿರುವ ಶೋಕವನ್ನು ದೂರಮಾಡಬಲ್ಲ ಯಾವ ಉಪಾಯವು ನನಗೆ ಕಾಣುವುದಿಲ್ಲ. ॥ ೮॥

ಸಂಜಯ ಉವಾಚ

**ಏವಮುಕ್ತ್ವಾ ಹೃಷೀಕೇಶಂ ಗುಡಾಕೇಶಃ ಪರಂತಪ ।**
**ನ ಯೋತ್ಸ್ಯ ಇತಿ ಗೋವಿಂದಮುಕ್ತ್ವಾ ತೂಷ್ಣೀಂ ಬಭೂವ ಹ**

ಸಂಜಯ ಹೇಳಿದನು – ಹೇ ರಾಜಾ! ನಿದ್ರೆಯನ್ನು ಗೆದ್ದ ಅರ್ಜುನನು ಅಂತರ್ಯಾಮಿಯಾದ ಭಗವಾನ್ ಶ್ರೀಕೃಷ್ಣನಲ್ಲಿ ಈ ಪ್ರಕಾರವಾಗಿ ಹೇಳಿಕೊಂಡು ಭಗವಾನ್ ಶ್ರೀಗೋವಿಂದನಲ್ಲಿ ಯುದ್ಧಮಾಡುವುದಿಲ್ಲ ಎಂದು ಸ್ಪಷ್ಟವಾಗಿ ಹೇಳಿ ಸುಮ್ಮನಾದನು. ॥ ೯॥

**ತಮುವಾಚ ಹೃಷೀಕೇಶಃ ಪ್ರಹಸನ್ನಿವ ಭಾರತ ।**
**ಸೇನಯೋರುಭಯೋರ್ಮಧ್ಯೇ ವಿಷೀದಂತಮಿದಂ ವಚಃ ॥**

ಹೇ ಭರತವಂಶೀ ಧೃತರಾಷ್ಟ್ರ! ಅಂತರ್ಯಾಮಿಯಾದ ಭಗವಾನ್ ಶ್ರೀಕೃಷ್ಣನು ಎರಡೂ ಸೈನ್ಯಗಳ ಮಧ್ಯದಲ್ಲಿ ಶೋಕಿಸುತ್ತಿರುವ ಆ ಅರ್ಜುನನಿಗೆ ನಗುತ್ತಿರುವವನಂತೆ ಈ ಮಾತುಗಳನ್ನು ಹೇಳಿದನು. ॥ ೧೦॥

ಶ್ರೀಭಗವಾನುವಾಚ

**ಅಶೋಚ್ಯಾನನ್ವಶೋಚಸ್ತ್ವಂ ಪ್ರಜ್ಞಾವಾದಾಂಶ್ಚ ಭಾಷಸೇ ।**
**ಗತಾಸೂನಗತಾಸೂಂಶ್ಚ ನಾನುಶೋಚಂತಿ ಪಂಡಿತಾಃ ॥ ೧೧॥**

ಶ್ರೀ ಭಗವಂತನು ಹೇಳಿದನು – ಹೇ ಅರ್ಜುನ! ನೀನು ಯಾರಿಗಾಗಿ ಶೋಕಿಸಬೇಕಾಗಿಲ್ಲವೋ ಅವರಿಗಾಗಿ ಶೋಕಿಸುತ್ತಿರುವೆ ಹಾಗೂ ಪಂಡಿತರಂತೆ ಮಾತುಗಳನ್ನಾಡುತ್ತಿರುವೆ, ಆದರೆ ಯಾರ ಪ್ರಾಣಗಳು ಹೋಗಿರುವವೋ ಅವರಿಗಾಗಿ ಮತ್ತು ಯಾರ ಪ್ರಾಣಗಳು ಹೋಗಿಲ್ಲವೋ ಅವರಿಗಾಗಿಯೂ ಪಂಡಿತರಾದವರು ಶೋಕಿಸುವುದಿಲ್ಲ. ॥ ೧೧॥

**ನ ತ್ವೇವಾಹಂ ಜಾತು ನಾಸಂ ನ ತ್ವಂ ನೇಮೇ ಜನಾಧಿಪಾಃ ।**
**ನ ಚೈವ ನ ಭವಿಷ್ಯಾಮಃ ಸರ್ವೇ ವಯಮತಃ ಪರಮ್ ॥ ೧೨॥**

ನಾನು ಯಾವ ಕಾಲದಲ್ಲಿಯೂ ಇರಲಿಲ್ಲವೆಂಬುದಿಲ್ಲ (ಅಂದರೆ ಯಾವಾಗಲೂ ಇದ್ದೆ). ಹಾಗೆಯೇ ನೀನಾಗಲೀ, ಈ ರಾಜರುಗಳಾಗಲೀ ಇರಲಿಲ್ಲವೆಂಬುದಿಲ್ಲ (ಅಂದರೆ ಇದ್ದರು). ಹಾಗೆಯ ಇನ್ನು ಮುಂದೆಯೂ ನಾವೆಲ್ಲರೂ ಇರುವುದಿಲ್ಲವೆಂಬುದೇ ಇಲ್ಲ (ಅಂದರೆ ಇರುತ್ತೇವೆ). ॥ ೧೨॥

**ದೇಹಿನೋಽಸ್ಮಿನ್ ಯಥಾ ದೇಹೇ ಕೌಮಾರಂ ಯೌವನಂ ಜರಾ**
**ತಥಾ ದೇಹಾಂತರಪ್ರಾಪ್ತಿರ್ಧೀರಸ್ತತ್ರ ನ ಮುಹ್ಯತಿ ॥ ೧೩॥**

ಜೀವಾತ್ಮನಿಗೆ ಈ ದೇಹದಲ್ಲಿ ಬಾಲ್ಯ, ಯೌವನ ಮತ್ತು ವೃದ್ಧಾವಸ್ಥೆಗಳುಂಟಾಗುತ್ತವೆಯೋ ಅಂತೆಯೇ ಬೇರೆ ಶರೀರವು ಪ್ರಾಪ್ತವಾಗುತ್ತದೆ. ಆ ವಿಷಯದಲ್ಲಿ ಧೀರ ಪುರುಷನು ಮೋಹಿತನಾಗುವುದಿಲ್ಲ. ॥ ೧೩॥

**ಮಾತ್ರಾಸ್ಪರ್ಶಾಸ್ತು ಕೌಂತೇಯ ಶೀತೋಷ್ಣಸುಖದುಃಖದಾಃ ।**
**ಆಗಮಾಪಾಯಿನೋಽನಿತ್ಯಾಸ್ತಾಂಸ್ತಿತಿಕ್ಷಸ್ವ ಭಾರತ ॥ ೧೪॥**

ಹೇ ಕುಂತೀಪುತ್ರನೆ! ಶೀತೋಷ್ಣಗಳನ್ನೂ ಮತ್ತು ಸುಖ-ದುಃಖಗಳನ್ನೂ ಕೊಡುವಂತಹ ಇಂದ್ರಿಯ ಮತ್ತು ವಿಷಯಗಳ ಸಂಯೋಗವಾದರೋ ಉತ್ಪತ್ತಿ-ವಿನಾಶಶೀಲ ಮತ್ತು ಅನಿತ್ಯವಾಗಿದೆ; ಆದ್ದರಿಂದ ಎಲೈ ಅರ್ಜುನ! ಅವುಗಳನ್ನು ನೀನು ಸಹಿಸಿಕೋ. ॥ ೧೪॥

**ಯಂ ಹಿ ನ ವ್ಯಥಯಂತ್ಯೇತೇ ಪುರುಷಂ ಪುರುಷರ್ಷಭ ।**
**ಸಮದುಃಖಸುಖಂ ಧೀರಂ ಸೋಽಮೃತತ್ವಾಯ ಕಲ್ಪತೇ ॥ ೧೫॥**

ಏಕೆಂದರೆ, ಹೇ ಪುರುಷಶ್ರೇಷ್ಠನೇ! ಸುಖದುಃಖಗಳನ್ನು ಸಮಾನವಾಗಿ ತಿಳಿಯುವ ಯಾವ ಧೀರ ಪುರುಷನನ್ನು ಈ ಇಂದ್ರಿಯ ಮತ್ತು ವಿಷಯಗಳ ಸಂಯೋಗವು ವ್ಯಾಕುಲಗೊಳಿಸುವುದಿಲ್ಲವೋ ಅವನು ಮೋಕ್ಷಕ್ಕೆ ಯೋಗ್ಯನಾಗುತ್ತಾನೆ.

**ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ ।**
**ಉಭಯೋರಪಿ ದೃಷ್ಟೋಽಂತಸ್ತ್ವನಯೋಸ್ತತ್ತ್ವದರ್ಶಿಭಿಃ ॥**

ಅಸದ್ವಸ್ತುವಿಗಾದರೋ ಇರುವಿಕೆಯು ಇರುವುದಿಲ್ಲ ಮತ್ತು ಸದ್ವಸ್ತುವಿಗೆ ಅಭಾವವೆಂಬುದಿಲ್ಲ ಈ ಪ್ರಕಾರವಾಗಿ ಇವೆರಡರ ತತ್ತ್ವವೂ ತತ್ತ್ವಜ್ಞಾನಿಗಳಾದ ಪುರುಷರ ಮೂಲಕ ನೋಡಲ್ಪಟ್ಟಿದೆ. ॥ ೧೬॥

**ಅವಿನಾಶಿ ತು ತದ್ವಿದ್ಧಿ ಯೇನ ಸರ್ವಮಿದಂ ತತಮ್ ।**
**ವಿನಾಶಮವ್ಯಯಸ್ಯಾಸ್ಯ ನ ಕಶ್ಚಿತ್ಕರ್ತುಮರ್ಹತಿ ॥ ೧೭॥**

ಯಾವುದರಿಂದ ಈ ಸಂಪೂರ್ಣ ದೃಶ್ಯ ಜಗತ್ತು ವ್ಯಾಪ್ತವಾಗಿದೆಯೋ ಅದನ್ನು ನೀನು ನಾಶರಹಿತವಾದುದೆಂದು ತಿಳಿ. ಈ ಅವಿನಾಶಿಯ ವಿನಾಶವನ್ನು ಮಾಡಲು ಯಾರೂ ಕೂಡ ಸಮರ್ಥರಲ್ಲ. ॥ ೧೭॥

**ಅಂತವಂತ ಇಮೇ ದೇಹಾ ನಿತ್ಯಸ್ಯೋಕ್ತಾಃ ಶರೀರಿಣಃ ।**
**ಅನಾಶಿನೋಽಪ್ರಮೇಯಸ್ಯ ತಸ್ಮಾದ್ಯುಧ್ಯಸ್ವ ಭಾರತ ॥ ೧೮॥**

ಈ ನಾಶರಹಿತನೂ, ಅಪ್ರಮೇಯನೂ, ನಿತ್ಯ ಸ್ವರೂಪನೂ ಆಗಿರುವ ಜೀವಾತ್ಮನ ಈ ಎಲ್ಲ ಶರೀರಗಳು ನಾಶವುಳ್ಳವುಗಳೆಂದು ಹೇಳಲಾಗಿದೆ. ಅದಕ್ಕಾಗಿ ಹೇ ಭರತವಂಶೀ ಅರ್ಜುನನೇ! ನೀನು ಯುದ್ಧಮಾಡು. ॥ ೧೮॥

**ಯ ಏನಂ ವೇತ್ತಿ ಹಂತಾರಂ ಯಶ್ಚೈನಂ ಮನ್ಯತೇ ಹತಮ್ ।**
**ಉಭೌ ತೌ ನ ವಿಜಾನೀತೋ ನಾಯಂ ಹಂತಿ ನ ಹನ್ಯತೇ ॥**

ಯಾರು ಈ ಆತ್ಮನನ್ನು ಕೊಲ್ಲುವವನೆಂದು ತಿಳಿಯುತ್ತಾನೋ, ಹಾಗೂ ಯಾರು ಇವನು ಸತ್ತವನೆಂದು ತಿಳಿಯು

ತ್ತಾನೋ - ಅವರಿಬ್ಬರೂ ತಿಳಿದವರಲ್ಲ. ಏಕೆಂದರೆ ಈ ಆತ್ಮನು ವಾಸ್ತವವಾಗಿ ಯಾರನ್ನೂ ಕೊಲ್ಲುವುದೂ ಇಲ್ಲ ಮತ್ತು ಯಾರಿಂದಲೂ ಕೊಲ್ಲಲ್ಪಡುವುದೂ ಇಲ್ಲ. ॥ ೧೯॥

**ನ ಜಾಯತೇ ಮ್ರಿಯತೇ ವಾ ಕದಾಚಿತ್**
**ನಾಯಂ ಭೂತ್ವಾ ಭವಿತಾ ವಾ ನ ಭೂಯಃ ।**
**ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ**
**ನ ಹನ್ಯತೇ ಹನ್ಯಮಾನೇ ಶರೀರೇ ॥ ೨೦॥**

ಈ ಆತ್ಮನು ಯಾವುದೇ ಕಾಲದಲ್ಲಿಯೂ ಹುಟ್ಟುವುದಿಲ್ಲ, ಸಾಯುವುದೂ ಇಲ್ಲ ಹಾಗೂ ಉತ್ಪತ್ತಿಯಾಗಿ ಮತ್ತೆ ಇರುತ್ತಾನೆಂಬುದೂ ಇಲ್ಲ; ಏಕೆಂದರೆ ಇವನು ಜನ್ಮರಹಿತನೂ ನಿತ್ಯನೂ, ಸನಾತನನೂ ಮತ್ತು ಪುರಾತನನೂ ಆಗಿದ್ದಾನೆ, ಶರೀರವು ಕೊಲ್ಲಲ್ಪಟ್ಟರೂ ಕೂಡ ಇವನು ಕೊಲ್ಲಲ್ಪಡುವುದಿಲ್ಲ.

**ವೇದಾವಿನಾಶಿನಂ ನಿತ್ಯಂ ಯ ಏನಮಜಮವ್ಯಯಮ್ ।**
**ಕಥಂ ಸ ಪುರುಷಃ ಪಾರ್ಥ ಕಂ ಘಾತಯತಿ ಹಂತಿ ಕಮ್ ॥**

ಹೇ ಪೃಥಾಪುತ್ರನಾದ ಅರ್ಜುನನೇ! ಯಾವ ಪುರುಷನು ಈ ಆತ್ಮನನ್ನು ನಾಶರಹಿತನೂ, ನಿತ್ಯನೂ ಅಜನ್ಮನೂ ಮತ್ತು ಅವ್ಯಯನೆಂದೂ ತಿಳಿಯುತ್ತಾನೋ, ಆ ಪುರುಷನು ಯಾರನ್ನು ಹೇಗೆ ಕೊಲ್ಲಿಸುತ್ತಾನೆ ಮತ್ತು ಯಾರನ್ನು ಹೇಗೆ ಕೊಲ್ಲುತ್ತಾನೆ?

**ವಾಸಾಂಸಿ ಜೀರ್ಣಾನಿ ಯಥಾ ವಿಹಾಯ**
**ನವಾನಿ ಗೃಹ್ಣಾತಿ ನರೋಽಪರಾಣಿ ।**
**ತಥಾ ಶರೀರಾಣಿ ವಿಹಾಯ ಜೀರ್ಣಾ-**
**ನ್ಯನ್ಯಾನಿ ಸಂಯಾತಿ ನವಾನಿ ದೇಹೀ ॥ ೨೨॥**

ಹೇಗೆ ಮನುಷ್ಯನು ಹಳೆಯದಾದ ವಸ್ತ್ರಗಳನ್ನು ತ್ಯಾಗ ಮಾಡಿ ಬೇರೆಯ, ಹೊಸದಾದ ವಸ್ತ್ರಗಳನ್ನು ಧರಿಸುತ್ತಾನೋ, ಹಾಗೆಯೇ ಜೀವಾತ್ಮನು ಹಳೆಯದಾದ ಶರೀರಗಳನ್ನು ತ್ಯಾಗಮಾಡಿ ಬೇರೆಯಾದ ಹೊಸ ಶರೀರಗಳನ್ನು ಪಡೆಯುತ್ತಾನೆ. ॥ ೨೨॥

**ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ ।**
**ನ ಚೈನಂ ಕ್ಲೇದಯಂತ್ಯಾಪೋ ನ ಶೋಷಯತಿ ಮಾರುತಃ ॥**

ಈ ಆತ್ಮವನ್ನು ಶಸ್ತ್ರಗಳು ಕತ್ತರಿಸಲಾರವು, ಇದನ್ನು ಬೆಂಕಿಯು ಸುಡಲಾರದು, ಇದನ್ನು ಜಲವು ನೆನೆಯಿಸಲಾರದು ಮತ್ತು ವಾಯುವು ಒಣಗಿಸಲಾರದು. ॥ ೨೩॥

**ಅಚ್ಛೇದ್ಯೋಽಯಮದಾಹ್ಯೋಽಯಮಕ್ಲೇದ್ಯೋಽಶೋಷ್ಯ ಏವ ಚ**
**ನಿತ್ಯಃ ಸರ್ವಗತಃ ಸ್ಥಾಣುರಚಲೋಽಯಂ ಸನಾತನಃ ॥ ೨೪॥**

ಏಕೆಂದರೆ ಈ ಆತ್ಮವು ಅಚ್ಛೇದ್ಯವೂ ಅದಾಹ್ಯವೂ, ಅಕ್ಲೇದ್ಯವೂ ಮತ್ತು ನಿಸ್ಸಂದೇಹವಾಗಿ ಅಶೋಷ್ಯವಾಗಿದೆ. ಹಾಗೂ ಈ ಆತ್ಮವು ನಿತ್ಯವೂ, ಸರ್ವವ್ಯಾಪಿಯೂ, ಅಚಲವೂ, ಸ್ಥಿರವಾಗಿದ್ದು ಸನಾತನವಾಗಿದೆ. ॥ ೨೪॥

**ಅವ್ಯಕ್ತೋಽಯಮಚಿಂತ್ಯೋಽಯಮವಿಕಾರ್ಯೋಽಯ ಮುಚ್ಯತೇ।**
**ತಸ್ಮಾದೇವಂ ವಿದಿತ್ವೈನಂ ನಾನುಶೋಚಿತುಮರ್ಹಸಿ ॥ ೨೫॥**

ಈ ಆತ್ಮವು ಅವ್ಯಕ್ತವೂ, ಅಚಿಂತ್ಯವೂ, ಮತ್ತು ವಿಕಾರ ರಹಿತವೂ ಎಂದು ಹೇಳಲಾಗುತ್ತದೆ. ಆದ್ದರಿಂದ ಹೇ ಅರ್ಜುನಾ! ಈ ಆತ್ಮವನ್ನು ಮೇಲೆ ಹೇಳಿದ ಪ್ರಕಾರವಾಗಿ ತಿಳಿದುಕೊಂಡು ನೀನು ಶೋಕಿಸಲು ಯೋಗ್ಯನಲ್ಲ ಅರ್ಥಾತ್ ನಿನಗೆ ಶೋಕಿಸುವುದು ಉಚಿತವಾದುದಲ್ಲ. ॥ ೨೫॥

**ಅಥ ಚೈನಂ ನಿತ್ಯಜಾತಂ ನಿತ್ಯಂ ವಾ ಮನ್ಯಸೇ ಮೃತಮ್ ।**
**ತಥಾಪಿ ತ್ವಂ ಮಹಾಬಾಹೋ ನೈವಂ ಶೋಚಿತು ಮರ್ಹಸಿ ॥**

ಆದರೂ ಒಂದು ವೇಳೆ ನೀನು ಈ ಆತ್ಮವನ್ನು ಸದಾ ಹುಟ್ಟುವವನು ಹಾಗೂ ಸದಾ ಸಾಯುವವನೂ ಎಂದು ತಿಳಿದಿದ್ದರೂ ಕೂಡ ಹೇ ಮಹಾಬಾಹುವೇ! ನೀನು ಈ ಪ್ರಕಾರವಾಗಿ ಶೋಕಿಸುವುದಕ್ಕೆ ಯೋಗ್ಯನಲ್ಲ. ॥ ೨೬॥

**ಜಾತಸ್ಯ ಹಿ ಧ್ರುವೋ ಮೃತ್ಯುರ್ಧ್ರುವಂ ಜನ್ಮ ಮೃತಸ್ಯ ಚ ।**
**ತಸ್ಮಾದಪರಿಹಾರ್ಯೇಽರ್ಥೇ ನ ತ್ವಂ ಶೋಚಿತುಮರ್ಹಸಿ ॥**

ಏಕೆಂದರೆ ಈ ಅಭಿಪ್ರಾಯಕ್ಕನುಸಾರವಾಗಿ ಹುಟ್ಟಿದವನ ಮರಣವು ನಿಶ್ಚಿತವಾಗಿದೆ ಮತ್ತು ಸತ್ತವನ ಹುಟ್ಟು ನಿಶ್ಚಿತವಾಗಿದೆ. ಆದ್ದರಿಂದಲೂ ಕೂಡ ಈ ಪರಿಹಾರೋಪಾಯವಿಲ್ಲದ ವಿಷಯದಲ್ಲಿ ನೀನು ಶೋಕಪಡಲು ಯೋಗ್ಯನಲ್ಲ. ॥ ೨೭॥

**ಅವ್ಯಕ್ತಾದೀನಿ ಭೂತಾನಿ ವ್ಯಕ್ತಮಧ್ಯಾನಿ ಭಾರತ ।**
**ಅವ್ಯಕ್ತನಿಧನಾನ್ಯೇವ ತತ್ರ ಕಾ ಪರಿದೇವನಾ ॥ ೨೮॥**

ಹೇ ಅರ್ಜುನನೇ! ಸಂಪೂರ್ಣ ಪ್ರಾಣಿಗಳು ಹುಟ್ಟುವ ಮೊದಲು ಅಪ್ರಕಟವಾಗಿದ್ದುವು ಮತ್ತು ಸತ್ತನಂತರವೂ ಅಪ್ರಕಟ ವಾಗುತ್ತವೆ, ಕೇವಲ ಮಧ್ಯದಲ್ಲಿ ಮಾತ್ರ ಪ್ರಕಟ ವಾಗಿವೆ, ಮತ್ತೆ ಇಂತಹ ಸ್ಥಿತಿಯಲ್ಲಿ ಏಕೆ ಶೋಕಿಸಬೇಕು?

**ಆಶ್ಚರ್ಯವತ್ಪಶ್ಯತಿ ಕಶ್ಚಿದೇನಮಾಶ್ಚರ್ಯವದ್ವದತಿ ತಥೈವ ಚಾನ್ಯಃ**
**ಆಶ್ಚರ್ಯವಚ್ಚೈನಮನ್ಯಃ ಶೃಣೋತಿ ಶ್ರುತ್ವಾಪ್ಯೇನಂ ವೇದ ನ ಚೈವ ಕಶ್ಚಿತ್**

ಯಾರೋ ಒಬ್ಬ ಮಹಾಪುರುಷನು ಈ ಆತ್ಮವನ್ನು ಆಶ್ಚರ್ಯದಂತೆ ನೋಡುತ್ತಾನೆ ಮತ್ತು ಹಾಗೆಯೇ ಬೇರೆ ಯಾರೊ ಮಹಾಪುರುಷನೇ ಇದರ ತತ್ತ್ವವನ್ನು ಆಶ್ಚರ್ಯ ದಂತೆ ವರ್ಣಿಸುತ್ತಾನೆ, ಬೇರೆ ಯಾರೋ ಅಧಿಕಾರಿ ಪುರುಷನು ಇದನ್ನು ಆಶ್ಚರ್ಯದಂತೆ ಕೇಳುತ್ತಾನೆ ಮತ್ತು ಕೆಲವರಾದರೋ ಕೇಳಿಯೂ ಕೂಡ ಇದನ್ನು ಅರಿಯಲಾರರು. ॥ ೨೯॥

**ದೇಹೀ ನಿತ್ಯಮವಧ್ಯೋಽಯಂ ದೇಹೇ ಸರ್ವಸ್ಯ ಭಾರತ ।**
**ತಸ್ಮಾತ್ಸರ್ವಾಣಿ ಭೂತಾನಿ ನ ತ್ವಂ ಶೋಚಿತುಮರ್ಹಸಿ ॥ ೩೦॥**

ಹೇ ಅರ್ಜುನನೇ! ಈ ಆತ್ಮವು ಎಲ್ಲರ ಶರೀರಗಳಲ್ಲಿ ಸದಾ ಅವಧ್ಯವಾಗಿದೆ. ಈ ಕಾರಣದಿಂದಾಗಿ ಸಂಪೂರ್ಣ ಪ್ರಾಣಿಗಳಿಗಾಗಿ ನೀನು ಶೋಕಿಸುವುದು ಸರಿಯಲ್ಲ. ॥ ೩೦॥

**ಸ್ವಧರ್ಮಮಪಿ ಚಾವೇಕ್ಷ್ಯ ನ ವಿಕಂಪಿತುಮರ್ಹಸಿ ।**
**ಧರ್ಮ್ಯಾದ್ಧಿ ಯುದ್ಧಾಚ್ಛ್ರೇಯೋಽನ್ಯತ್ಕ್ಷತ್ರಿಯಸ್ಯ ನ ವಿದ್ಯತೇ**

ಹಾಗೆಯೇ ಸ್ವಧರ್ಮವನ್ನು ನೋಡಿದರೂ ನೀನು ಭಯಪಡಲು ಯೋಗ್ಯನಲ್ಲ ಅಂದರೆ ನೀನು ಭಯಪಡಬಾರದು ಏಕೆಂದರೆ ಕ್ಷತ್ರಿಯನಾದವನಿಗೆ ಧರ್ಮಯುಕ್ತವಾದ ಯುದ್ಧದಿಂದ ಮಿಗಿಲಾದ ಶ್ರೇಯಸ್ಕರವಾದ ಕರ್ತವ್ಯವು ಬೇರೆ ಯಾವುದೂ ಇಲ್ಲ. ॥ ೩೧॥

**ಯದೃಚ್ಛಯಾ ಚೋಪಪನ್ನಂ ಸ್ವರ್ಗದ್ವಾರಮಪಾವೃತಮ್ ।**
**ಸುಖಿನಃ ಕ್ಷತ್ರಿಯಾಃ ಪಾರ್ಥ ಲಭಂತೇ ಯುದ್ಧಮೀದೃಶಮ್ ॥**

ಹೇ ಪಾರ್ಥನೇ! ತನ್ನಿಂದತಾನೇ ಪ್ರಾಪ್ತವಾದ ಮತ್ತು ತೆರೆದಿರುವ ಸ್ವರ್ಗದ ದ್ವಾರದಂತಿರುವ ಈ ಪ್ರಕಾರದ ಯುದ್ಧವನ್ನು ಭಾಗ್ಯಶಾಲಿಯಾದ ಕ್ಷತ್ರಿಯರೇ ಪಡೆಯುತ್ತಾರೆ.

**ಅಥ ಚೇತ್ತ್ವಮಿಮಂ ಧರ್ಮ್ಯಂ ಸಂಗ್ರಾಮಂ ನ ಕರಿಷ್ಯಸಿ ।**
**ತತಃ ಸ್ವಧರ್ಮಂ ಕೀರ್ತಿಂ ಚ ಹಿತ್ವಾ ಪಾಪಮವಾಪ್ಸ್ಯಸಿ ॥ ೩೩॥**

ಏಕೆಂದರೆ, ಒಂದು ವೇಳೆ ನೀನು ಈ ಧರ್ಮಯುಕ್ತವಾದ ಯುದ್ಧವನ್ನು ಮಾಡದಿದ್ದರೆ ಸ್ವಧರ್ಮವನ್ನು ಮತ್ತು ಕೀರ್ತಿಯನ್ನು ಕಳೆದುಕೊಂಡು ಪಾಪವನ್ನು ಪಡೆಯುವೆ. ॥ ೩೩॥

**ಅಕೀರ್ತಿಂ ಚಾಪಿ ಭೂತಾನಿ ಕಥಯಿಷ್ಯಂತಿ ತೇऽವ್ಯಯಾಮ್ ।**
**ಸಮ್ಭಾವಿತಸ್ಯ ಚಾಕೀರ್ತಿರ್ಮರಣಾದತಿರಿಚ್ಯತೇ ॥ ३४॥**

ಹಾಗೂ ಬಹುಕಾಲದವರೆಗೆ ಇರುವ ನಿನ್ನ ಅಪಕೀರ್ತಿಯನ್ನು ಎಲ್ಲ ಜನರೂ ಕೂಡ ಆಡಿಕೊಳ್ಳುವರು ಮತ್ತು ಮರ್ಯಾದಸ್ಥನಿಗೆ ಈ ಅಪಕೀರ್ತಿಯು ಮರಣಕ್ಕಿಂತಲೂ ಹೆಚ್ಚಿನದಾಗಿದೆ. ॥ ३४॥

**ಭಯಾದ್ರಣಾದುಪರತಂ ಮಂಸ್ಯಂತೇ ತ್ವಾಂ ಮಹಾರಥಾಃ ।**
**ಯೇಷಾಂ ಚ ತ್ವಂ ಬಹುಮತೋ ಭೂತ್ವಾ ಯಾಸ್ಯಸಿ ಲಾಘವಮ್**

ಮತ್ತು ಯಾರ ದೃಷ್ಟಿಯಲ್ಲಿ ನೀನು ಮೊದಲು ಬಹಳ ಸಮ್ಮಾನಿತನಾಗಿದ್ದೆಯೋ ಅವರು ನಿನ್ನನ್ನು ತುಚ್ಛವಾಗಿ ಕಾಣುವರು; ಅಷ್ಟೇ ಅಲ್ಲ ಆ ಮಹಾರಥರು ನಿನ್ನನ್ನು ಭಯದ ಕಾರಣದಿಂದಾಗಿ ಯುದ್ಧದಿಂದ ಹಿಮ್ಮೆಟ್ಟಿದವನೆಂದು ತಿಳಿಯುವರು.

**ಅವಾಚ್ಯವಾದಾಂಶ್ಚ ಬಹೂನ್ ವದಿಷ್ಯಂತಿ ತವಾಹಿತಾಃ ।**
**ನಿಂದಂತಸ್ತವ ಸಾಮರ್ಥ್ಯಂ ತತೋ ದುಃಖತರಂ ನು ಕಿಮ್ ॥**

ನಿನ್ನ ವೈರಿಗಳು ನಿನ್ನ ಸಾಮರ್ಥ್ಯವನ್ನು ನಿಂದಿಸುತ್ತಾ ನಿನ್ನ ಬಗ್ಗೆ ಹೇಳಬಾರದ ಮಾತುಗಳನ್ನು ಬಹಳವಾಗಿ ಹೇಳುವರು; ಅದಕ್ಕಿಂತ ಹೆಚ್ಚಿನದಾದ ದುಃಖವು ಮತ್ತೆ ಯಾವುದಿರಬಹುದು?

**ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ ಜಿತ್ವಾ ವಾ ಭೋಕ್ಷ್ಯಸೇ ಮಹೀಮ್**
**ತಸ್ಮಾದುತ್ತಿಷ್ಠ ಕೌಂತೇಯ ಯುದ್ಧಾಯ ಕೃತನಿಶ್ಚಯಃ ॥ ३७॥**

ಒಂದೋ ನೀನು ಯುದ್ಧದಲ್ಲಿ ಕೊಲ್ಲಲ್ಪಟ್ಟು ಸ್ವರ್ಗವನ್ನು ಪಡೆಯುವೆ ಅಥವಾ ಯುದ್ಧದಲ್ಲಿ ಗೆದ್ದು ಪೃಥ್ವಿಯ ರಾಜ್ಯವನ್ನು ಭೋಗಿಸುವೆ ಈ ಕಾರಣದಿಂದ ಹೇ ಅರ್ಜುನನೇ! ನೀನು ಯುದ್ಧಕ್ಕಾಗಿ ನಿಶ್ಚಯಮಾಡಿ ಎದ್ದು ನಿಲ್ಲು. ॥ ೩೭॥

**ಸುಖದುಃಖೇ ಸಮೇ ಕೃತ್ವಾ ಲಾಭಾಲಾಭೌ ಜಯಜಯೌ ।**
**ತತೋ ಯುದ್ಧಾಯ ಯುಜ್ಯಸ್ವ ನೈವಂ ಪಾಪಮವಾಪ್ಸ್ಯಸಿ ॥**

ಜಯ-ಪರಾಜಯ, ಲಾಭ-ಹಾನಿ ಮತ್ತು ಸುಖ-ದುಃಖ ಗಳನ್ನು ಸಮಾನವಾಗಿ ತಿಳಿದುಕೊಂಡು, ಅನಂತರ ಯುದ್ಧಕ್ಕೆ ಸಿದ್ಧನಾಗು, ಈ ಪ್ರಕಾರ ಯುದ್ಧ ಮಾಡುವುದರಿಂದ ನೀನು ಪಾಪವನ್ನು ಹೊಂದುವುದಿಲ್ಲ. ॥ ೩೮॥

**ಏಷಾ ತೇಽಭಿಹಿತಾ ಸಾಂಖ್ಯೇ ಬುದ್ಧಿರ್ಯೋಗೇ ತ್ವಿಮಾಂ ಶೃಣು।**
**ಬುದ್ಧ್ಯಾ ಯುಕ್ತೋ ಯಯಾ ಪಾರ್ಥ ಕರ್ಮಬಂಧಂ ಪ್ರಹಾಸ್ಯಸಿ**

ಹೇ ಪಾರ್ಥನೇ! ಈ ಬುದ್ಧಿಯು ನಿನಗೆ ಜ್ಞಾನಯೋಗದ ವಿಷಯದಲ್ಲಿ ಹೇಳಲ್ಪಟ್ಟಿತು, ಮತ್ತು ಈಗ ನೀನು ಅದನ್ನು ಕರ್ಮಯೋಗದ ವಿಷಯದಲ್ಲಿ ಕೇಳು. ಇಂತಹ ಸಮಬುದ್ಧಿಯಿಂದ ಯುಕ್ತನಾಗಿ ನೀನು ಕರ್ಮಗಳ ಬಂಧನವನ್ನು ಸಂಪೂರ್ಣವಾಗಿ ಕಳೆದುಕೊಳ್ಳುವೆ, ಅಂದರೆ ಕರ್ಮಬಂಧನದಿಂದ ಬಿಡುಗಡೆ ಹೊಂದುವೆ. ॥ ೩೯॥

**ನೇಹಾಭಿಕ್ರಮನಾಶೋಽಸ್ತಿ ಪ್ರತ್ಯವಾಯೋ ನ ವಿದ್ಯತೇ ।**
**ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್ ॥**

ಈ ಕರ್ಮಯೋಗದಲ್ಲಿ ಉಪಕ್ರಮ ಅರ್ಥಾತ್ ಬೀಜದ ನಾಶವಾಗುವುದಿಲ್ಲ ಮತ್ತು ಇದರಲ್ಲಿ ವಿರುದ್ಧವಾದ ಫಲರೂಪೀ ದೋಷವೂ ಕೂಡ ಇಲ್ಲ. ಅಲ್ಲದೆ ಈ ಕರ್ಮಯೋಗ ರೂಪೀ ಧರ್ಮದ ಸ್ವಲ್ಪವಾದ ಸಾಧನವೂ ಕೂಡ ಜನ್ಮ-ಮೃತ್ಯುರೂಪವಾದ ಮಹಾನ್ ಭಯದಿಂದ ರಕ್ಷಿಸುತ್ತದೆ. ॥ ೪೦॥

**ವ್ಯವಸಾಯಾತ್ಮಿಕಾ ಬುದ್ಧಿರೇಕೇಹ ಕುರುನಂದನ ।**
**ಬಹುಶಾಖಾ ಹ್ಯನಂತಾಶ್ಚ ಬುದ್ಧಯೋಽವ್ಯವಸಾಯಿನಾಮ್ ॥**

ಹೇ ಅರ್ಜುನನೇ! ಈ ಕರ್ಮಯೋಗದಲ್ಲಿ ನಿಶ್ಚಯಾತ್ಮಕವಾದ ಬುದ್ಧಿಯು ಒಂದೇ ಇರುತ್ತದೆ; ಆದರೆ, ಅಸ್ಥಿರವಾದ ವಿಚಾರವುಳ್ಳ, ವಿವೇಕಹೀನ, ಸಕಾಮರಾದ ಮನುಷ್ಯರ ಬುದ್ಧಿಗಳು ನಿಶ್ಚಯವಾಗಿಯೂ ಬಹುಭೇದ ವುಳ್ಳವುಗಳಾಗಿ ಅನಂತವಾಗಿರುತ್ತವೆ. ॥ ೪೧॥

**ಯಾಮಿಮಾಂ ಪುಷ್ಪಿತಾಂ ವಾಚಂ ಪ್ರವದಂತ್ಯವಿಪಶ್ಚಿತಃ ।**
**ವೇದವಾದರತಾಃ ಪಾರ್ಥ ನಾನ್ಯದಸ್ತೀತಿ ವಾದಿನಃ ॥ ೪೨॥**
**ಕಾಮಾತ್ಮಾನಃ ಸ್ವರ್ಗಪರಾ ಜನ್ಮಕರ್ಮಫಲಪ್ರದಾಮ್ ।**
**ಕ್ರಿಯಾವಿಶೇಷಬಹುಲಾಂ ಭೋಗೈಶ್ವರ್ಯಗತಿಂ ಪ್ರತಿ ॥ ೪೩॥**

**ಭೋಗೈಶ್ವರ್ಯಪ್ರಸಕ್ತಾನಾಂ ತಯಾಪಹೃತಚೇತಸಾಮ್ ।**
**ವ್ಯವಸಾಯಾತ್ಮಿಕಾ ಬುದ್ಧಿಃ ಸಮಾಧೌ ನ ವಿಧೀಯತೇ ॥ ೪೪॥**

ಹೇ ಅರ್ಜುನನೇ! ಯಾರು ಭೋಗಗಳಲ್ಲಿ ತನ್ಮಯರಾಗಿದ್ದಾರೋ, ಯಾರು ಕರ್ಮಫಲವನ್ನು ಪ್ರಶಂಸಿಸುವ ವೇದವಾಕ್ಯಗಳಲ್ಲಿ ಪ್ರೀತಿಯನ್ನಿಡುತ್ತಾರೋ, ಯಾರ ಬುದ್ಧಿಯಲ್ಲಿ ಸ್ವರ್ಗವೇ ಪರಮಪ್ರಾಪ್ಯವಸ್ತುವಾಗಿದೆಯೋ ಮತ್ತು ಸ್ವರ್ಗಕ್ಕಿಂತ ಮಿಗಿಲಾದ ಎರಡನೇ ವಸ್ತುವೇ ಇಲ್ಲ - ಹೀಗೆ ಹೇಳುವವರಿದ್ದಾರೋ ಆ ಅವಿವೇಕಿ ಜನರು ಈ ಪ್ರಕಾರದ ಯಾವ ಪುಷ್ಪಿತವಾದ ಅರ್ಥಾತ್ ತೋರಿಕೆಗೆ ಮಾತ್ರ ಶೋಭೆಯಿಂದ ಕೂಡಿದ ವಾಣಿಯನ್ನು ಹೇಳುತ್ತಿರುತ್ತಾರೋ, ಅದು ಜನ್ಮ-ರೂಪೀ-ಕರ್ಮಫಲವನ್ನು ಕೊಡುವುದಾಗಿಯೂ ಮತ್ತು ಭೋಗ ಹಾಗೂ ಐಶ್ವರ್ಯದ ಪ್ರಾಪ್ತಿಗಾಗಿ ನಾನಾ ಪ್ರಕಾರದ, ಬಹಳಷ್ಟು ಕ್ರಿಯೆಗಳ ವರ್ಣನೆಯನ್ನು ಮಾಡುವುದಾಗಿದೆಯೋ ಆ ವಾಣಿಯ ಮೂಲಕ ಯಾರ ಚಿತ್ತವು ಅಪಹರಿಸಲ್ಪಟ್ಟಿದೆಯೋ, ಯಾರು ಭೋಗ ಮತ್ತು ಐಶ್ವರ್ಯದಲ್ಲಿ ಅತ್ಯಂತ ಆಸಕ್ತರಾಗಿದ್ದಾರೋ - ಆ ಪುರುಷರಿಗೆ ಪರಮಾತ್ಮನಲ್ಲಿ ನಿಶ್ಚಯಾತ್ಮಿಕಾ ಬುದ್ಧಿಯು ಇರುವುದಿಲ್ಲ. ॥ ೪೨-೪೩-೪೪॥

**ತ್ರೈಗುಣ್ಯವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ ।**
**ನಿರ್ದ್ವಂದ್ವೋ ನಿತ್ಯಸತ್ತ್ವಸ್ಥೋ ನಿರ್ಯೋಗಕ್ಷೇಮ ಆತ್ಮವಾನ್**

ಹೇ ಅರ್ಜುನನೇ! ವೇದಗಳು ಮೇಲೆ ಹೇಳಿದ ಪ್ರಕಾರ ಮೂರೂ ಗುಣಗಳ ಕಾರ್ಯರೂಪವಾದ ಸಮಸ್ತ ಭೋಗಗಳನ್ನು ಮತ್ತು ಅವುಗಳ ಸಾಧನೆಗಳನ್ನು ಪ್ರತಿಪಾದಿಸುತ್ತವೆ; ಆದ್ದರಿಂದ ನೀನು ಆ ಭೋಗಗಳು ಮತ್ತು ಅವುಗಳ ಸಾಧನೆಗಳಲ್ಲಿ ಆಸಕ್ತಿಹೀನನಾಗಿ, ಹರ್ಷ-ಶೋಕಾದಿ ದ್ವಂದ್ವಗಳಿಂದ ರಹಿತನಾಗಿ, ನಿತ್ಯವಸ್ತುವಾದ ಪರಮಾತ್ಮನಲ್ಲಿ ಸ್ಥಿತನಾಗಿ ಯೋಗಕ್ಷೇಮವನ್ನು ಬಯಸದವನೂ ಮತ್ತು ಸ್ವಾಧೀನ ಅಂತಃಕರಣವುಳ್ಳವನೂ ಆಗು. ॥ ೪೫॥

**ಯಾವಾನರ್ಥ ಉದಪಾನೇ ಸರ್ವತಃ ಸಂಪ್ಲುತೋದಕೇ ।**
**ತಾವಾನ್ ಸರ್ವೇಷು ವೇದೇಷು ಬ್ರಾಹ್ಮಣಸ್ಯ ವಿಜಾನತಃ ॥**

ಎಲ್ಲ ಕಡೆಗಳಿಂದಲೂ ತುಂಬಿತುಳುಕುವ ಜಲಾಶಯವು ದೊರಕಿದಾಗ ಚಿಕ್ಕ ಜಲಾಶಯದಿಂದ ಮನುಷ್ಯನಿಗೆ ಎಷ್ಟು ಪ್ರಯೋಜನವಿರುತ್ತದೆಯೋ, ಬ್ರಹ್ಮವನ್ನು ತತ್ತ್ವಶಃ ತಿಳಿದಿರುವ ಬ್ರಾಹ್ಮಣನಿಗೆ ಸಮಸ್ತ ವೇದಗಳಲ್ಲಿ ಅಷ್ಟೇ ಪ್ರಯೋಜನವಿರುತ್ತದೆ. (ಹೇಗೆಂದರೆ ಬ್ರಹ್ಮಾನಂದ ಪ್ರಾಪ್ತಿಯಾದ ಮೇಲೆ ಆನಂದಕ್ಕಾಗಿ ವೇದಗಳ ಆವಶ್ಯಕತೆ ಇರುವುದಿಲ್ಲ.) ॥ ೪೬॥

**ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ ।**
**ಮಾ ಕರ್ಮಫಲಹೇತುರ್ಭೂರ್ಮಾ ತೇ ಸಂಗೋಽಸ್ತ್ವಕರ್ಮಣಿ ॥**

ನಿನಗೆ ಕರ್ಮಮಾಡುವುದರಲ್ಲಿಯೇ ಅಧಿಕಾರವಿದೆ, ಅದರ ಫಲಗಳಲ್ಲಿ ಎಂದಿಗೂ ಇಲ್ಲ. ಅದಕ್ಕಾಗಿ ನೀನು ಕರ್ಮಗಳ ಫಲಕ್ಕೆ ಕಾರಣನಾಗಬೇಡ. ಅರ್ಥಾತ್ ಫಲಾಪೇಕ್ಷೆ ಇಲ್ಲದೆ ಕರ್ತವ್ಯ ಬುದ್ಧಿಯಿಂದ ಕರ್ಮಗಳನ್ನು ಮಾಡು. ಹಾಗೂ, ನಿನಗೆ ಕರ್ಮಮಾಡದೇ ಇರುವುದರಲ್ಲಿ ಕೂಡ ಆಸಕ್ತಿಯಿಲ್ಲದಿರಲಿ. ॥ ೪೭॥

**ಯೋಗಸ್ಥಃ ಕುರು ಕರ್ಮಾಣಿ ಸಂಗಂ ತ್ಯಕ್ತ್ವಾ ಧನಂಜಯ ।**
**ಸಿದ್ಧ್ಯಸಿದ್ಧ್ಯೋಃ ಸಮೋ ಭೂತ್ವಾ ಸಮತ್ವಂ ಯೋಗ ಉಚ್ಯತೇ**

ಹೇ ಧನಂಜಯನೇ! ನೀನು ಆಸಕ್ತಿಯನ್ನು ತ್ಯಜಿಸಿ ಹಾಗೂ ಸಿದ್ಧಿ-ಅಸಿದ್ಧಿಗಳಲ್ಲಿ ಸಮಬುದ್ಧಿಯುಳ್ಳವನಾಗಿ, ಯೋಗ ದಲ್ಲಿ ಸ್ಥಿತನಾಗಿದ್ದು ಕರ್ತವ್ಯ ಕರ್ಮಗಳನ್ನು ಮಾಡು, ಸಮತ್ವವೇ ಯೋಗವೆನಿಸಿಕೊಳ್ಳುತ್ತದೆ. ॥ ೪೮॥

**ದೂರೇಣ ಹ್ಯವರಂ ಕರ್ಮ ಬುದ್ಧಿಯೋಗಾದ್ಧನಂಜಯ ।**
**ಬುದ್ಧೌ ಶರಣಮನ್ವಿಚ್ಛ ಕೃಪಣಾಃ ಫಲಹೇತವಃ ॥ ೪೯॥**

ಈ ಸಮತ್ವರೂಪವಾದ ಬುದ್ಧಿಯೋಗಕ್ಕಿಂತ ಸಕಾಮ ಕರ್ಮವು ಅತ್ಯಂತ ಕೆಳಮಟ್ಟದ್ದಾಗಿದೆ. ಅದಕ್ಕಾಗಿ ಹೇ ಧನಂಜಯನೇ! ನೀನು ಸಮಬುದ್ಧಿಯಲ್ಲಿಯೇ ರಕ್ಷಣೆಯ ಉಪಾಯ ವನ್ನು ಹುಡುಕು ಅರ್ಥಾತ್ ಬುದ್ಧಿಯೋಗದ ಆಶ್ರಯವನ್ನೇ ಪಡೆ; ಏಕೆಂದರೆ, ಫಲಕ್ಕೆ ಕಾರಣರಾಗುವವರು ಅತ್ಯಂತ ದೀನರಾಗಿ ದ್ದಾರೆ. ॥ ೪೯॥

**ಬುದ್ಧಿಯುಕ್ತೋ ಜಹಾತೀಹ ಉಭೇ ಸುಕೃತದುಷ್ಕೃತೇ ।**
**ತಸ್ಮಾದ್ಯೋಗಾಯ ಯುಜ್ಯಸ್ವ ಯೋಗಃ ಕರ್ಮಸು ಕೌಶಲಮ್**

ಸಮಬುದ್ಧಿಯುಳ್ಳ ಪುರುಷನು ಪುಣ್ಯ ಮತ್ತು ಪಾಪಗಳೆರಡನ್ನೂ ಇದೇ ಲೋಕದಲ್ಲಿ ತ್ಯಜಿಸುತ್ತಾನೆ ಅರ್ಥಾತ್, ಅವುಗಳಿಂದ ಮುಕ್ತನಾಗುತ್ತಾನೆ. ಆದ್ದರಿಂದ ನೀನು ಸಮತ್ವರೂಪೀ ಯೋಗದಲ್ಲಿ ತೊಡಗು. ಈ ಸಮತ್ವರೂಪೀ ಯೋಗವೇ ಕರ್ಮಗಳಲ್ಲಿ ಕುಶಲತೆಯಾಗಿದೆ ಅರ್ಥಾತ್ ಕರ್ಮಬಂಧನದಿಂದ ಬಿಡುಗಡೆ ಹೊಂದುವ ಉಪಾಯವಾಗಿದೆ. ॥ ೫೦॥

**ಕರ್ಮಜಂ ಬುದ್ಧಿಯುಕ್ತಾ ಹಿ ಫಲಂ ತ್ಯಕ್ತ್ವಾ ಮನೀಷಿಣಃ ।**
**ಜನ್ಮಬಂಧವಿನಿರ್ಮುಕ್ತಾಃ ಪದಂ ಗಚ್ಛಂತ್ಯನಾಮಯಮ್ ॥**

ಏಕೆಂದರೆ, ಸಮಬುದ್ಧಿಯಿಂದಯುಕ್ತರಾದ ಜ್ಞಾನಿಗಳು ಕರ್ಮಗಳಿಂದ ಉಂಟಾಗುವ ಫಲವನ್ನು ತ್ಯಾಗಮಾಡಿ ಜನ್ಮರೂಪೀ ಬಂಧನದಿಂದ ಮುಕ್ತರಾಗಿ ನಿರ್ವಿಕಾರ ಪರಮಪದವನ್ನು ಹೊಂದುತ್ತಾರೆ. ॥ ೫೧॥

**ಯದಾ ತೇ ಮೋಹಕಲಿಲಂ ಬುದ್ಧಿರ್ವ್ಯತಿತರಿಷ್ಯತಿ ।**
**ತದಾ ಗಂತಾಸಿ ನಿರ್ವೇದಂ ಶ್ರೋತವ್ಯಸ್ಯ ಶ್ರುತಸ್ಯ ಚ ॥**

ಯಾವ ಕಾಲದಲ್ಲಿ ನಿನ್ನ ಬುದ್ಧಿಯು ಮೋಹರೂಪೀ ಕೆಸರನ್ನು ಚೆನ್ನಾಗಿ ದಾಟಿಬಿಡುವುದೋ ಆ ಸಮಯದಲ್ಲಿ ನೀನು ಕೇಳಿರುವ, ಕೇಳಿಬರುವ ಈ ಲೋಕ ಮತ್ತು

ಪರಲೋಕ ಸಂಬಂಧವಾದ ಎಲ್ಲ ಭೋಗಗಳಿಂದ ವೈರಾಗ್ಯ ವನ್ನು ಪಡೆಯುವೆ. ॥ ೫೨॥

**ಶ್ರುತಿವಿಪ್ರತಿಪನ್ನಾ ತೇ ಯದಾ ಸ್ಥಾಸ್ಯತಿ ನಿಶ್ಚಲಾ ।**
**ಸಮಾಧಾವಚಲಾ ಬುದ್ಧಿಸ್ತದಾ ಯೋಗಮವಾಪ್ಸ್ಯಸಿ ॥ ೫೩॥**

ಬಗೆ-ಬಗೆಯ ವಚನಗಳನ್ನು ಕೇಳುವುದರಿಂದ ವಿಚಲಿತ ವಾಗಿರುವ ನಿನ್ನ ಬುದ್ಧಿಯು ಯಾವಾಗ ಪರಮಾತ್ಮನಲ್ಲಿ ಅಚಲ ಮತ್ತು ಸ್ಥಿರವಾಗಿ ನಿಲ್ಲುವುದೋ ಆಗ ನೀನು ಯೋಗವನ್ನು ಪಡೆಯುವೆ ಅರ್ಥಾತ್ ಪರಮಾತ್ಮನೊಡನೆ ನಿನ್ನ ನಿತ್ಯ ಸಂಯೋಗವು ಉಂಟಾಗುವುದು. ॥ ೫೩॥

ಅರ್ಜುನ ಉವಾಚ

**ಸ್ಥಿತಪ್ರಜ್ಞಸ್ಯ ಕಾ ಭಾಷಾ ಸಮಾಧಿಸ್ಥಸ್ಯ ಕೇಶವ ।**
**ಸ್ಥಿತಧೀಃ ಕಿಂ ಪ್ರಭಾಷೇತ ಕಿಮಾಸೀತ ವ್ರಜೇತ ಕಿಮ್ ॥**

ಅರ್ಜುನನು ಹೇಳಿದನು – ಹೇ ಕೇಶವಾ! ಸಮಾಧಿಸ್ಥ ನಾಗಿ ಪರಮಾತ್ಮನನ್ನು ಪಡೆದಿರುವ ಸ್ಥಿರಬುದ್ಧಿಯುಳ್ಳ ಪುರುಷನ ಲಕ್ಷಣಗಳೇನು? ಆ ಸ್ಥಿರಬುದ್ಧಿಯ ಪುರುಷನು ಹೇಗೆ ಮಾತನಾಡು ತ್ತಾನೆ, ಹೇಗೆ ಕುಳಿತಿರುತ್ತಾನೆ ಮತ್ತು ಹೇಗೆ ನಡೆಯುತ್ತಾನೆ?

ಶ್ರೀಭಗವಾನುವಾಚ

**ಪ್ರಜಹಾತಿ ಯದಾ ಕಾಮಾನ್ ಸರ್ವಾನ್ ಪಾರ್ಥ ಮನೋಗತಾನ್ ।**
**ಆತ್ಮನ್ಯೇವಾತ್ಮನಾ ತುಷ್ಟಃ ಸ್ಥಿತಪ್ರಜ್ಞಸ್ತದೋಚ್ಯತೇ ॥ ೫೫॥**

ಭಗವಂತನು ಹೇಳಿದನು – ಹೇ ಅರ್ಜುನನೇ! ಯಾವ ಕಾಲದಲ್ಲಿ ಈ ಪುರುಷನು ಮನಸ್ಸಿನಲ್ಲಿರುವ ಎಲ್ಲ ಕಾಮನೆಗಳನ್ನು ಸಂಪೂರ್ಣವಾಗಿ ತ್ಯಜಿಸುತ್ತಾನೋ ಮತ್ತು ಆತ್ಮನಿಂದ ಆತ್ಮನಲ್ಲಿಯೇ ಸಂತುಷ್ಟನಾಗಿರುತ್ತಾನೋ ಆ ಕಾಲದಲ್ಲಿ ಅವನು ಸ್ಥಿತಪ್ರಜ್ಞನೆಂದು ಹೇಳಲ್ಪಡುತ್ತಾನೆ. ॥ ೫೫॥

**ದುಃಖೇಷ್ವನುದ್ವಿಗ್ನಮನಾಃ ಸುಖೇಷು ವಿಗತಸ್ಪೃಹಃ ।**
**ವೀತರಾಗಭಯಕ್ರೋಧಃ ಸ್ಥಿತಧೀರ್ಮುನಿರುಚ್ಯತೇ ॥ ೫೬॥**

ದುಃಖಗಳು ಪ್ರಾಪ್ತಿಯಾದ ಮೇಲೆ ಯಾರ ಮನಸ್ಸಿನಲ್ಲಿ ಉದ್ವೇಗವು ಉಂಟಾಗುವುದಿಲ್ಲವೋ, ಸುಖಗಳ ಪ್ರಾಪ್ತಿಯಲ್ಲಿ ಯಾರು ಸರ್ವಥಾ ನಿಸ್ಪೃಹರಾಗಿರುತ್ತಾರೋ ಹಾಗೂ ಯಾರ ರಾಗ, ಭಯ ಮತ್ತು ಕ್ರೋಧಗಳು ನಷ್ಟವಾಗಿ ಹೋಗಿವೆಯೋ ಅಂತಹ ಮುನಿಯು ಸ್ಥಿರಬುದ್ಧಿಯವನೆಂದು ಹೇಳಲ್ಪಡುತ್ತಾನೆ.

**ಯಃ ಸರ್ವತ್ರಾನಭಿಸ್ನೇಹಸ್ತತ್ತತ್ಪ್ರಾಪ್ಯ ಶುಭಾಶುಭಮ್ ।**
**ನಾಭಿನಂದತಿ ನ ದ್ವೇಷ್ಟಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೫೭॥**

ಯಾವ ಪುರುಷನು ಸರ್ವತ್ರ ಸ್ನೇಹರಹಿತನಾಗಿದ್ದು ಆಯಾಯಾ ಶುಭಾಶುಭ ವಸ್ತುಗಳನ್ನು ಪಡೆದುಕೊಂಡು ಪ್ರಸನ್ನನಾಗುವುದಿಲ್ಲವೋ ಮತ್ತು ದ್ವೇಷಿಸುವುದಿಲ್ಲವೋ ಅವನ ಬುದ್ಧಿಯು ಸ್ಥಿರವಾಗಿದೆ. ॥ ೫೭॥

**ಯದಾ ಸಂಹರತೇ ಚಾಯಂ ಕೂರ್ಮೋಽಂಗಾನೀವ ಸರ್ವಶಃ**
**ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥**

ಮತ್ತು ಆಮೆಯು ಎಲ್ಲ ಕಡೆಯಿಂದ ತನ್ನ ಅಂಗಗಳನ್ನು ಹೇಗೆ ಒಳಕ್ಕೆ ಸೆಳೆದುಕೊಳ್ಳುತ್ತದೆಯೋ ಹಾಗೆಯೇ ಯಾವಾಗ ಈ ಪುರುಷನು ಇಂದ್ರಿಯಗಳ ವಿಷಯಗಳಿಂದ ಇಂದ್ರಿಯಗಳನ್ನು ಎಲ್ಲ ಪ್ರಕಾರದಿಂದ ಹಿಂದಕ್ಕೆಳೆದು ಕೊಳ್ಳುತ್ತಾನೆಯೋ ಆಗ ಅವನ ಬುದ್ಧಿಯು ಸ್ಥಿರವಾಗಿದೆಯೆಂದು ತಿಳಿಯಬೇಕು.

**ವಿಷಯಾ ವಿನಿವರ್ತಂತೇ ನಿರಾಹಾರಸ್ಯ ದೇಹಿನಃ ।**
**ರಸವರ್ಜಂ ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ ॥ ೫೯॥**

ಇಂದ್ರಿಯಗಳ ಮೂಲಕ ವಿಷಯಗಳನ್ನು ಗ್ರಹಿಸದಿರುವ ಪುರುಷನಲ್ಲಿ ಕೂಡ ಕೇವಲ ವಿಷಯಗಳಾದರೋ ನಿವೃತ್ತಿಯಾಗಿ ಬಿಡುತ್ತವೆ, ಆದರೆ ಅವುಗಳಲ್ಲಿರುವ ಆಸಕ್ತಿಯು ನಿವೃತ್ತಿಯಾಗುವುದಿಲ್ಲ. ಆದರೆ ಈ ಸ್ಥಿತಪ್ರಜ್ಞಪುರುಷನ ಆಸಕ್ತಿಯು ಕೂಡ ಪರಮಾತ್ಮನ ಸಾಕ್ಷಾತ್ಕಾರಮಾಡಿಕೊಂಡು ನಿವೃತ್ತಿ ಹೊಂದುತ್ತದೆ. ॥ ೫೯॥

**ಯತತೋ ಹ್ಯಪಿ ಕೌಂತೇಯ ಪುರುಷಸ್ಯ ವಿಪಶ್ಚಿತಃ ।**
**ಇಂದ್ರಿಯಾಣಿ ಪ್ರಮಾಥೀನಿ ಹರಂತಿ ಪ್ರಸಭಂ ಮನಃ ॥ ೬೦॥**

ಹೇ ಅರ್ಜುನನೇ! ಆಸಕ್ತಿಯು ನಾಶವಾಗದಿರುವ ಕಾರಣ ಈ ಪ್ರಮಥನ ಸ್ವಭಾವವುಳ್ಳ ಇಂದ್ರಿಯಗಳು.

ಪ್ರಯತ್ನಿಸುತ್ತಿರುವ ಬುದ್ಧಿವಂತನಾದ ಪುರುಷನ ಮನಸ್ಸನ್ನು ಕೂಡ ಬಲವಂತನಾಗಿ ಅಪಹರಿಸಿಕೊಳ್ಳುತ್ತವೆ. ॥ ೬೦॥

**ತಾನಿ ಸರ್ವಾಣಿ ಸಂಯಮ್ಯ ಯುಕ್ತ ಆಸೀತ ಮತ್ಪರಃ ।**
**ವಶೇ ಹಿ ಯಸ್ಯೇಂದ್ರಿಯಾಣಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೬೧॥**

ಅದಕ್ಕಾಗಿ ಸಾಧಕನು ಆ ಸಂಪೂರ್ಣ ಇಂದ್ರಿಯಗಳನ್ನು ವಶಪಡಿಸಿಕೊಂಡು, ಸಮಾಹಿತಚಿತ್ತನಾಗಿ ನನ್ನ ಪರಾಯಣನಾಗಿ, ಧ್ಯಾನದಲ್ಲಿ ಕುಳಿತುಕೊಳ್ಳಲಿ. ಏಕೆಂದರೆ, ಯಾವ ಪುರುಷನ ಇಂದ್ರಿಯಗಳು ವಶದಲ್ಲಿ ಇರುತ್ತವೆಯೋ ಅವನ ಬುದ್ಧಿಯು ಸ್ಥಿರವಾಗಿರುತ್ತದೆ. ॥ ೬೧॥

**ಧ್ಯಾಯತೋ ವಿಷಯಾನ್ ಪುಂಸಃ ಸಂಗಸ್ತೇಷೂಪಜಾಯತೇ ।**
**ಸಂಗಾತ್ಸಂಜಾಯತೇ ಕಾಮಃ ಕಾಮಾತ್ಕ್ರೋಧೋಽಭಿಜಾಯತೇ ॥**

ವಿಷಯಗಳನ್ನು ಚಿಂತಿಸುವ ಪುರುಷನಿಗೆ ಆ ವಿಷಯಗಳಲ್ಲಿ ಆಸಕ್ತಿಯುಂಟಾಗುತ್ತದೆ. ಆಸಕ್ತಿಯಿಂದಾಗಿ ಆ ವಿಷಯಗಳ ಕಾಮನೆ ಉಂಟಾಗುತ್ತದೆ ಮತ್ತು ಕಾಮನೆಯಲ್ಲಿ ವಿಘ್ನವುಂಟಾಗುವುದರಿಂದ ಕ್ರೋಧವು ಉತ್ಪನ್ನವಾಗುತ್ತದೆ. ॥ ೬೨॥

**ಕ್ರೋಧಾದ್ಭವತಿ ಸಮ್ಮೋಹಃ ಸಮ್ಮೋಹಾತ್ಸ್ಮೃತಿವಿಭ್ರಮಃ ।**
**ಸ್ಮೃತಿಭ್ರಂಶಾದ್ ಬದ್ಧಿನಾಶೋ ಬುದ್ಧಿನಾಶಾತ್ಪ್ರಣಶ್ಯತಿ ॥ ೬೩॥**

ಕ್ರೋಧದಿಂದ ಅತ್ಯಂತ ಮೂಢಭಾವವು ಉಂಟಾಗುತ್ತದೆ, ಮೂಢಭಾವದಿಂದ ಸ್ಮೃತಿಯಲ್ಲಿ ಭ್ರಮೆಯುಂಟಾಗುತ್ತದೆ, ಸ್ಮೃತಿಯಲ್ಲಿ ಭ್ರಮೆಯುಂಟಾಗುವುದರಿಂದ ಬುದ್ಧಿ

ಅರ್ಥಾತ್ ಜ್ಞಾನಶಕ್ತಿಯು ನಾಶವಾಗಿ ಹೋಗುತ್ತದೆ ಮತ್ತು ಬುದ್ಧಿನಾಶವಾಗುವುದರಿಂದ ಈ ಪುರುಷನು ತನ್ನ ಸ್ಥಿತಿಯಿಂದ ಜಾರಿ ಬೀಳುತ್ತಾನೆ. ॥ ೬೩॥

**ರಾಗದ್ವೇಷವಿಯುಕ್ತೈಸ್ತು ವಿಷಯಾನಿಂದ್ರಿಯೈಶ್ಚರನ್ ।**
**ಆತ್ಮವಶ್ಯೈರ್ವಿಧೇಯಾತ್ಮಾ ಪ್ರಸಾದಮಧಿಗಚ್ಛತಿ ॥ ೬೪॥**

ಆದರೆ, ಅಂತಃಕರಣವನ್ನು ತನ್ನ ಅಧೀನವಾಗಿ ಮಾಡಿಕೊಂಡಿರುವ ಸಾಧಕನು ತನ್ನ ವಶದಲ್ಲಿ ಮಾಡಿಕೊಂಡಿರುವ, ರಾಗ-ದ್ವೇಷರಹಿತವಾದ ಇಂದ್ರಿಯಗಳ ಮೂಲಕ ವಿಷಯಗಳಲ್ಲಿ ವಿಚರಿಸುತ್ತ ಅಂತಃಕರಣದ ಪ್ರಸನ್ನತೆಯನ್ನು ಪಡೆಯುತ್ತಾನೆ. ॥ ೬೪॥

**ಪ್ರಸಾದೇ ಸರ್ವದುಃಖಾನಾಂ ಹಾನಿರಸ್ಯೋಪಜಾಯತೇ ।**
**ಪ್ರಸನ್ನಚೇತಸೋ ಹ್ಯಾಶು ಬುದ್ಧಿಃ ಪರ್ಯವತಿಷ್ಠತೇ ॥ ೬೫॥**

ಅಂತಃಕರಣದಲ್ಲಿ ಆಧ್ಯಾತ್ಮಿಕ ಪ್ರಸನ್ನತೆ ಉಂಟಾದ ಮೇಲೆ ಇವನ ಸಂಪೂರ್ಣ ದುಃಖಗಳ ಅಭಾವವು ಉಂಟಾಗುತ್ತದೆ ಮತ್ತು ಆ ಪ್ರಸನ್ನಚಿತ್ತನಾದ ಕರ್ಮಯೋಗಿಯ ಬುದ್ಧಿಯು ಶೀಘ್ರವೇ ಎಲ್ಲ ಕಡೆಯಿಂದ ಹಿಮ್ಮೆಟ್ಟಿ ಓರ್ವ ಪರಮಾತ್ಮನಲ್ಲಿಯೇ ಚೆನ್ನಾಗಿ ಸ್ಥಿರವಾಗುತ್ತದೆ. ॥ ೬೫॥

**ನಾಸ್ತಿ ಬುದ್ಧಿರಯುಕ್ತಸ್ಯ ನ ಚಾಯುಕ್ತಸ್ಯ ಭಾವನಾ ।**
**ನ ಚಾಭಾವಯತಃ ಶಾಂತಿರಶಾಂತಸ್ಯ ಕುತಃ ಸುಖಮ್ ॥**

ಮನಸ್ಸು ಮತ್ತು ಇಂದ್ರಿಯಗಳನ್ನು ಗೆಲ್ಲದಿರುವ ಪುರುಷನಲ್ಲಿ ನಿಶ್ಚಯಾತ್ಮಿಕಾ ಬುದ್ಧಿಯು ಇರುವುದಿಲ್ಲ ಮತ್ತು ಆ ಅಯುಕ್ತ ಮನುಷ್ಯನ ಅಂತಃಕರಣದಲ್ಲಿ ಭಾವನೆಯೂ ಇರುವುದಿಲ್ಲ. ಹಾಗೆಯೇ ಭಾವನಾಹೀನನಾದ ಮನುಷ್ಯನಿಗೆ ಶಾಂತಿಯು ಸಿಗುವುದಿಲ್ಲ ಮತ್ತು ಶಾಂತಿರಹಿತನಾದ ಮನುಷ್ಯನಿಗೆ ಸುಖವು ಹೇಗೆ ಸಿಗಬಲ್ಲದು? ॥ ೬೬॥

**ಇಂದ್ರಿಯಾಣಾಂ ಹಿ ಚರತಾಂ ಯನ್ಮನೋಽನು ವಿಧೀಯತೇ**
**ತದಸ್ಯ ಹರತಿ ಪ್ರಜ್ಞಾಂ ವಾಯುರ್ನಾವಮಿವಾಂಭಸಿ ॥ ೬೭॥**

ಏಕೆಂದರೆ - ಹೇಗೆ ನೀರಿನಲ್ಲಿ ಚಲಿಸುವ ನಾವೆಯನ್ನು ವಾಯುವು ಅಪಹರಿಸುತ್ತದೋ, ಹಾಗೆಯೇ - ವಿಷಯಗಳಲ್ಲಿ ಚರಿಸುತ್ತಿರುವ ಇಂದ್ರಿಯಗಳಲ್ಲಿ ಮನಸ್ಸು ಯಾವ ಇಂದ್ರಿಯದ ಜೊತೆಯಲ್ಲಿ ಇರುತ್ತದೆಯೋ ಆ ಒಂದೇ ಇಂದ್ರಿಯವು ಈ ಅಯುಕ್ತಪುರುಷನ ಬುದ್ಧಿಯನ್ನು ಅಪಹರಿಸುತ್ತದೆ. ॥ ೬೭॥

**ತಸ್ಮಾದ್ಯಸ್ಯ ಮಹಾಬಾಹೋ ನಿಗೃಹೀತಾನಿ ಸರ್ವಶಃ ।**
**ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥**

ಆದಕ್ಕಾಗಿ ಹೇ ಮಹಾಬಾಹುವೇ! ಯಾವ ಪುರುಷನ ಇಂದ್ರಿಯಗಳು, ಇಂದ್ರಿಯಗಳ ವಿಷಯಗಳಿಂದ ಎಲ್ಲಾ ಪ್ರಕಾರವಾಗಿ ನಿಗ್ರಹಿಸಲ್ಪಟ್ಟವೆಯೋ, ಅವನ ಬುದ್ಧಿಯು ಸ್ಥಿರವಾಗಿದೆ. ॥ ೬೮॥

**ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ ।**
**ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ ॥**

ಸಂಪೂರ್ಣ ಪ್ರಾಣಿಗಳಿಗಾಗಿ ಯಾವುದು ರಾತ್ರಿಗೆ ಸಮಾನವಾಗಿದೆಯೋ ಆ ನಿತ್ಯಜ್ಞಾನಸ್ವರೂಪವಾದ ಪರಮಾನಂದದ ಪ್ರಾಪ್ತಿಯಲ್ಲಿ ಸ್ಥಿತಪ್ರಜ್ಞನಾದ ಯೋಗಿಯು ಎಚ್ಚರಿರುತ್ತಾನೆ ಮತ್ತು ಯಾವ ನಾಶವಾಗುವ ಸಾಂಸಾರಿಕ ಸುಖದ ಪ್ರಾಪ್ತಿಯಲ್ಲಿ ಎಲ್ಲ ಪ್ರಾಣಿಗಳು ಎಚ್ಚರವಾಗಿರುತ್ತವೆಯೋ ಪರಮಾತ್ಮ ತತ್ತ್ವವನ್ನು ಅರಿತಿರುವ ಮುನಿಗೆ ಅದು ರಾತ್ರಿಗೆ ಸಮಾನವಾಗಿದೆ. ॥ ೬೯ ॥

**ಆಪೂರ್ಯಮಾಣಮಚಲಪ್ರತಿಷ್ಠಂ**
**ಸಮುದ್ರಮಾಪಃ ಪ್ರವಿಶಂತಿ ಯದ್ವತ್**
**ತದ್ವತ್ಕಾಮಾ ಯಂ ಪ್ರವಿಶಂತಿ ಸರ್ವೇ**
**ಸ ಶಾಂತಿಮಾಪ್ನೋತಿ ನ ಕಾಮಕಾಮೀ ॥ ೭೦ ॥**

ಯಾವ ರೀತಿಯಲ್ಲಿ ನಾನಾ ನದಿಗಳ ಜಲವು ಯಾವಾಗ ಎಲ್ಲಕಡೆಯಿಂದ ಪರಿಪೂರ್ಣವಾದ ಅಚಲ ಪ್ರತಿಷ್ಠೆಯುಳ್ಳ ಸಮುದ್ರದಲ್ಲಿ, ಅದನ್ನು ವಿಚಲಿತವಾಗಿಸದೆಯೇ ಸೇರಿಹೋಗುತ್ತವೆಯೋ ಹಾಗೆಯೇ ಎಲ್ಲ ಭೋಗಗಳು ಸ್ಥಿತಪ್ರಜ್ಞಪುರುಷನಲ್ಲಿ ಯಾವ ಪ್ರಕಾರವಾದ ವಿಕಾರವನ್ನೂ ಉಂಟುಮಾಡದೆಯೇ ಸೇರಿಹೋಗುತ್ತವೆ, ಆ ಪುರುಷನು ಪರಮಶಾಂತಿಯನ್ನು

ಪಡೆಯುತ್ತಾನೆ – ಭೋಗಗಳನ್ನು ಬಯಸುವವನು ಪಡೆಯುವುದಿಲ್ಲ. ॥ ೭೦॥

**ವಿಹಾಯ ಕಾಮಾನ್ಯಃ ಸರ್ವಾನ್ಪುಮಾಂಶ್ಚರತಿ ನಿಃಸ್ಪೃಹಃ ।**
**ನಿರ್ಮಮೋ ನಿರಹಂಕಾರಃ ಸ ಶಾಂತಿಮಧಿಗಚ್ಛತಿ ॥ ೭೧॥**

ಯಾವ ಪುರುಷನು ಸಂಪೂರ್ಣವಾಗಿ ಎಲ್ಲಾ ಕಾಮನೆಗಳನ್ನು ತ್ಯಜಿಸಿ, ಮಮತಾರಹಿತನೂ, ಅಹಂಕಾರರಹಿತನೂ, ಸ್ಪೃಹಾರಹಿತನೂ ಆಗಿ ವಿಚರಿಸುತ್ತಾನೋ ಅವನೇ ಶಾಂತಿಯನ್ನು ಪಡೆದಿದ್ದಾನೆ. ॥ ೭೧॥

**ಏಷಾ ಬ್ರಾಹ್ಮೀ ಸ್ಥಿತಿಃ ಪಾರ್ಥ ನೈನಾಂ ಪ್ರಾಪ್ಯ ವಿಮುಹ್ಯತಿ ।**
**ಸ್ಥಿತ್ವಾಸ್ಯಾಮಂತಕಾಲೇಽಪಿ ಬ್ರಹ್ಮನಿರ್ವಾಣಮೃಚ್ಛತಿ ॥ ೭೨॥**

ಹೇ ಅರ್ಜುನನೇ! ಇದು ಬ್ರಹ್ಮವನ್ನು ಪಡೆದುಕೊಂಡ ಪುರುಷನ ಸ್ಥಿತಿಯಾಗಿದೆ. ಇದನ್ನು ಪಡೆದ ಯೋಗಿಯು ಎಂದೂ ಮೋಹಿತನಾಗುವುದಿಲ್ಲ, ಮತ್ತು ಅಂತ್ಯಕಾಲದಲ್ಲಿ ಕೂಡ ಈ ಬ್ರಾಹ್ಮೀ ಸ್ಥಿತಿಯಲ್ಲಿ ಸ್ಥಿತನಾಗಿದ್ದು ಬ್ರಹ್ಮಾನಂದವನ್ನು ಪಡೆಯುತ್ತಾನೆ. ॥ ೭೨॥

*ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು*
*ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ*
*ಸಾಂಖ್ಯಯೋಗೋ ನಾಮ ದ್ವಿತೀಯೋಽಧ್ಯಾಯಃ ॥ ೨ ॥*



# ॥ ಅಥ ತೃತೀಯೋಽಧ್ಯಾಯವು॥
# ಕರ್ಮಯೋಗವು

ಅರ್ಜುನ ಉವಾಚ

**ಜ್ಯಾಯಸೀ ಚೇತ್ಕರ್ಮಣಸ್ತೇ ಮತಾ ಬುದ್ಧಿರ್ಜನಾರ್ದನ ।**
**ತತ್ಕಿಂ ಕರ್ಮಣಿ ಘೋರೇ ಮಾಂ ನಿಯೋಜಯಸಿ ಕೇಶವ ॥**

ಅರ್ಜುನನು ಹೇಳಿದನು – ಹೇ ಜನಾರ್ದನನೇ! ಒಂದು ವೇಳೆ ನಿನಗೆ ಕರ್ಮಕ್ಕಿಂತ ಜ್ಞಾನವು ಶ್ರೇಷ್ಠವೆಂದು ಮಾನ್ಯವಾದರೆ ಹೇ ಕೇಶವನೇ! ಮತ್ತೇಕೆ ನನ್ನನ್ನು ಭಯಂಕರವಾದ ಕರ್ಮದಲ್ಲಿ ತೊಡಗಿಸುತ್ತೀಯೆ? ॥ ೧॥

**ವ್ಯಾಮಿಶ್ರೇಣೇವ ವಾಕ್ಯೇನ ಬುದ್ಧಿಂ ಮೋಹಯಸೀವ ಮೇ ।**
**ತದೇಕಂ ವದ ನಿಶ್ಚಿತ್ಯ ಯೇನ ಶ್ರೇಯೋಽಹಮಾಪ್ನುಯಾಮ್**

ನೀನು ಗೊಂದಲದಂತಿರುವ ವಚನಗಳಿಂದ ನನ್ನ ಬುದ್ಧಿಯನ್ನು ಮೋಹಗೊಳಿಸುತ್ತಿರುವಂತೆ ಕಾಣುತ್ತದೆ. ಆದ್ದರಿಂದ ಯಾವುದರಿಂದ ನಾನು ಶ್ರೇಯಸ್ಸನ್ನು ಹೊಂದುವೆನೋ ಆ ಒಂದು ಮಾತನ್ನು ನಿಶ್ಚಯಿಸಿ ಹೇಳು. ॥ ೨॥

ಶ್ರೀಭಗವಾನುವಾಚ

**ಲೋಕೇಽಸ್ಮಿನ್ದ್ವಿವಿಧಾ ನಿಷ್ಠಾ ಪುರಾ ಪ್ರೋಕ್ತಾ ಮಯಾನಘ ।**
**ಜ್ಞಾನಯೋಗೇನ ಸಾಂಖ್ಯಾನಾಂ ಕರ್ಮಯೋಗೇನ ಯೋಗಿನಾಮ್**

ಭಗವಂತನು ಹೇಳಿದನು – ಹೇ ನಿಷ್ಪಾಪನೇ! ಈ ಲೋಕದಲ್ಲಿ ಎರಡು ಪ್ರಕಾರದ ನಿಷ್ಠೆಗಳು ನನ್ನ ಮೂಲಕ ಮೊದಲು ಹೇಳಲಾಗಿವೆ. ಅವುಗಳಲ್ಲಿ ಸಾಂಖ್ಯಯೋಗಿಗಳ ನಿಷ್ಠೆಯು ಜ್ಞಾನಯೋಗದಿಂದ ಮತ್ತು ಯೋಗಿಗಳ ನಿಷ್ಠೆಯು ಕರ್ಮಯೋಗದಿಂದ ಇರುತ್ತದೆ. ।।೩।।

**ನ ಕರ್ಮಣಾಮನಾರಂಭಾನ್ನೈಷ್ಕರ್ಮ್ಯಂ ಪುರುಷೋಽಶ್ನುತೇ ।**
**ನ ಚ ಸಂನ್ಯಸನಾದೇವ ಸಿದ್ಧಿಂ ಸಮಧಿಗಚ್ಛತಿ ॥ ೪॥**

ಮನುಷ್ಯನು ಕರ್ಮಗಳನ್ನು ಆಚರಿಸದೆ ಅರ್ಥಾತ್ - ಕರ್ಮಾಚರಣೆ ಮಾಡದೆ ನಿಷ್ಕರ್ಮತೆಯನ್ನು ಅಂದರೆ ಯೋಗನಿಷ್ಠೆಯನ್ನು ಪಡೆಯಲಾರನು, ಮತ್ತು ಕೇವಲ ಕರ್ಮಗಳ ತ್ಯಾಗಮಾತ್ರದಿಂದ ಸಿದ್ಧಿ ಎಂದರೆ ಸಾಂಖ್ಯನಿಷ್ಠೆಯನ್ನೂ ಪಡೆಯಲಾರನು. ॥ ೪॥

**ನ ಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್ ।**
**ಕಾರ್ಯತೇ ಹ್ಯವಶಃ ಕರ್ಮ ಸರ್ವಃ ಪ್ರಕೃತಿಜೈರ್ಗುಣೈಃ ॥ ೫॥**

ನಿಸ್ಸಂದೇಹವಾಗಿ ಯಾವ ಮನುಷ್ಯನಾದರೂ ಯಾವುದೇ ಕಾಲದಲ್ಲಿ, ಕ್ಷಣ ಮಾತ್ರವೂ ಸಹ ಕರ್ಮವನ್ನು ಮಾಡದೇ ಇರಲಾರನು; ಏಕೆಂದರೆ, ಎಲ್ಲ ಮನುಷ್ಯ ಸಮುದಾಯವು ಪ್ರಕೃತಿಜನ್ಯವಾದ ಗುಣಗಳ ಮೂಲಕ ಪರವಶವಾಗಿ ಕರ್ಮಮಾಡುವುದಕ್ಕೆ ಬಾಧ್ಯನನ್ನಾಗಿ ಮಾಡಲ್ಪಡುತ್ತದೆ. ॥ ೫॥

**ಕರ್ಮೇಂದ್ರಿಯಾಣಿ ಸಂಯಮ್ಯ ಯ ಆಸ್ತೇ ಮನಸಾ ಸ್ಮರನ್ ।**
**ಇಂದ್ರಿಯಾರ್ಥಾನ್ವಿಮೂಢಾತ್ಮಾ ಮಿಥ್ಯಾಚಾರಃ ಸ ಉಚ್ಯತೇ ॥**

ಯಾವ ಮೂಢಬುದ್ಧಿಯುಳ್ಳ ಮನುಷ್ಯನು ಸಮಸ್ತ ಇಂದ್ರಿಯಗಳನ್ನು ಹಠಪೂರ್ವಕವಾಗಿ (ಮೇಲ್ನೋಟಕ್ಕೆ) ತಡೆದು ಮನಸ್ಸಿನಲ್ಲಿ ಇಂದ್ರಿಯಗಳ ವಿಷಯಗಳನ್ನು ಚಿಂತಿಸುತ್ತ ಇರುತ್ತಾನೋ ಅವನು ಮಿಥ್ಯಾಚಾರಿ ಅರ್ಥಾತ್ ಡಾಂಭಿಕ ನೆಂದು ಹೇಳಲ್ಪಡುತ್ತಾನೆ. ॥ ೬॥

**ಯಸ್ತ್ವಿಂದ್ರಿಯಾಣಿ ಮನಸಾ ನಿಯಮ್ಯಾರಭತೇಽರ್ಜುನ ।**
**ಕರ್ಮೇಂದ್ರಿಯೈಃ ಕರ್ಮಯೋಗಮಸಕ್ತಃ ಸ ವಿಶಿಷ್ಯತೇ ॥ ೭॥**

ಆದರೆ ಹೇ ಅರ್ಜುನನೆ! ಯಾವ ಪುರುಷನು ಮನಸ್ಸಿನಿಂದ ಇಂದ್ರಿಯಗಳನ್ನು ವಶಪಡಿಸಿಕೊಂಡು ಅನಾಸಕ್ತನಾಗಿ, ಸಮಸ್ತ ಇಂದ್ರಿಯಗಳ ಮೂಲಕ ಕರ್ಮಯೋಗದ ಆಚರಣೆಯನ್ನು ಮಾಡುತ್ತಾನೋ ಅವನೇ ಶ್ರೇಷ್ಠನಾಗಿದ್ದಾನೆ. ॥ ೭॥

**ನಿಯತಂ ಕುರು ಕರ್ಮ ತ್ವಂ ಕರ್ಮ ಜ್ಯಾಯೋ ಹ್ಯಕರ್ಮಣಃ ।**
**ಶರೀರಯಾತ್ರಾಪಿ ಚ ತೇ ನ ಪ್ರಸಿದ್ಧ್ಯೇದಕರ್ಮಣಃ ॥ ೮॥**

ನೀನು ಶಾಸ್ತ್ರವಿಹಿತವಾದ ಕರ್ತವ್ಯ ಕರ್ಮವನ್ನು ಮಾಡು; ಏಕೆಂದರೆ ಕರ್ಮ ಮಾಡದೇ ಇರುವುದಕ್ಕಿಂತ ಕರ್ಮಮಾಡುವುದು ಶ್ರೇಷ್ಠವಾಗಿದೆ ಹಾಗೂ ಕರ್ಮ ಮಾಡದೇ ಇರುವುದರಿಂದ ನಿನ್ನ ಶರೀರ ನಿರ್ವಾಹವೂ ಸಹ ಸಿದ್ಧವಾಗಲಾರದು.

**ಯಜ್ಞಾರ್ಥಾತ್ಕರ್ಮಣೋಽನ್ಯತ್ರ ಲೋಕೋಽಯಂ ಕರ್ಮಬಂಧನಃ।**
**ತದರ್ಥಂ ಕರ್ಮ ಕೌಂತೇಯ ಮುಕ್ತಸಂಗಃ ಸಮಾಚರ ॥ ೯॥**

ಯಜ್ಞದ ನಿಮಿತ್ತವಾಗಿ ಮಾಡಲ್ಪಡುವ ಕರ್ಮಗಳಲ್ಲದೆ ಬೇರೆಯಾದ ಕರ್ಮಗಳಲ್ಲಿ ತೊಡಗಿದ್ದುಕೊಂಡೇ ಈ ಮನುಷ್ಯ ಸಮುದಾಯವು ಕರ್ಮಗಳಿಂದ ಬಂಧಿತವಾಗಿದೆ. ಆದ್ದರಿಂದ ಹೇ ಅರ್ಜುನನೇ! ನೀನು ಆಸಕ್ತಿ ರಹಿತನಾಗಿ ಆ ಯಜ್ಞದ ನಿಮಿತ್ತವಾಗಿಯೇ ಚೆನ್ನಾಗಿ ಕರ್ತವ್ಯಕರ್ಮವನ್ನು ಮಾಡು.

**ಸಹಯಜ್ಞಾಃ ಪ್ರಜಾಃ ಸೃಷ್ಟ್ವಾ ಪುರೋವಾಚ ಪ್ರಜಾಪತಿಃ ।**
**ಅನೇನ ಪ್ರಸವಿಷ್ಯಧ್ವಮೇಷ ವೋಽಸ್ತ್ವಿಷ್ಟಕಾಮಧುಕ್ ॥ ೧೦॥**

ಪ್ರಜಾಪತಿ ಬ್ರಹ್ಮನು ಕಲ್ಪದ ಆದಿಯಲ್ಲಿ ಯಜ್ಞಸಹಿತವಾಗಿ ಪ್ರಜೆಗಳನ್ನು ರಚಿಸಿ ಅವರಿಗೆ - ನೀವುಗಳು ಈ ಯಜ್ಞದ ಮೂಲಕ ವೃದ್ಧಿಯನ್ನು ಪಡೆಯಿರಿ ಮತ್ತು ಈ ಯಜ್ಞವು ನಿಮ್ಮಗಳಿಗೆ ಇಚ್ಛಿಸಿದ ಭೋಗಗಳನ್ನು ಪ್ರದಾನ ಮಾಡುವಂತಹುದಾಗಲಿ ಎಂದು ಹೇಳಿದನು. ॥ ೧೦॥

**ದೇವಾನ್ಭಾವಯತಾನೇನ ತೇ ದೇವಾ ಭಾವಯಂತು ವಃ ।**
**ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ ॥ ೧೧॥**

ನೀವುಗಳು ಈ ಯಜ್ಞದ ಮೂಲಕ ದೇವತೆಗಳನ್ನು ತೃಪ್ತಿಪಡಿಸಿರಿ ಮತ್ತು ಆ ದೇವತೆಗಳು ನಿಮ್ಮಗಳ ಉನ್ನತಿ ಮಾಡಲಿ. ಈ ಪ್ರಕಾರವಾಗಿ ನಿಃಸ್ವಾರ್ಥಭಾವದಿಂದ ಒಬ್ಬರು

ಇನ್ನೊಬ್ಬರನ್ನು ತೃಪ್ತಿಪಡಿಸುತ್ತಾ ನೀವುಗಳು ಪರಮ ಶ್ರೇಯಸ್ಸನ್ನು ಪಡೆಯುವಿರಿ. ॥ ೧೧॥

**ಇಷ್ಟಾನ್‌ಭೋಗಾನ್ಹಿ ವೋ ದೇವಾ ದಾಸ್ಯಂತೇ ಯಜ್ಞಭಾವಿತಾಃ ।**
**ತೈರ್ದತ್ತಾನಪ್ರದಾಯೈಭ್ಯೋ ಯೋ ಭುಂಕ್ತೇ ಸ್ತೇನ ಏವ ಸಃ ॥**

ಯಜ್ಞದ ಮೂಲಕ ತೃಪ್ತರಾದ ದೇವತೆಗಳು ನಿಮ್ಮಗಳಿಗೆ ಬೇಡದಿದ್ದರೂ ಇಚ್ಛಿಸಿದ ಭೋಗಗಳನ್ನು ನಿಶ್ಚಯವಾಗಿಯೂ ಕೊಡುತ್ತಿರುವರು. ಈ ಪ್ರಕಾರವಾಗಿ ಆ ದೇವತೆಗಳ ಮೂಲಕ ಕೊಡಲ್ಪಟ್ಟ ಭೋಗಗಳನ್ನು ಯಾವ ಪುರುಷನು ಅವರಿಗೆ ಏನನ್ನೂ ಕೊಡದೆ ತಾನೇ ಭೋಗಿಸುತ್ತಾನೋ ಅವನು ಕಳ್ಳನೇ ಆಗಿದ್ದಾನೆ. ॥ ೧೨॥

**ಯಜ್ಞಶಿಷ್ಟಾಶಿನಃ ಸಂತೋ ಮುಚ್ಯಂತೇ ಸರ್ವಕಿಲ್ಬಿಷೈಃ ।**
**ಭುಂಜತೇ ತೇ ತ್ವಘಂ ಪಾಪಾ ಯೇ ಪಚಂತ್ಯಾತ್ಮಕಾರಣಾತ್ ॥**

ಯಜ್ಞದಲ್ಲಿ ಉಳಿದ ಅನ್ನವನ್ನು ಸೇವಿಸುವ ಶ್ರೇಷ್ಠ ಪುರುಷರು ಎಲ್ಲ ಪಾಪಗಳಿಂದ ಮುಕ್ತರಾಗುತ್ತಾರೆ ಮತ್ತು ಯಾವ ಪಾಪೀ ಜನರು ತಮ್ಮ ಶರೀರ ಪೋಷಣೆಗಾಗಿಯೇ ಅನ್ನವನ್ನು ತಯಾರಿಸುತ್ತಾರೋ ಅವರಾದರೋ ಪಾಪವನ್ನೇ ತಿನ್ನುತ್ತಾರೆ.

**ಅನ್ನಾದ್ಭವಂತಿ ಭೂತಾನಿ ಪರ್ಜನ್ಯಾದನ್ನಸಂಭವಃ ।**
**ಯಜ್ಞಾದ್ಭವತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ ॥ ೧೪॥**

**ಕರ್ಮ ಬ್ರಹ್ಮೋದ್ಭವಂ ವಿದ್ಧಿ ಬ್ರಹ್ಮಾಕ್ಷರಸಮುದ್ಭವಮ್ ।**
**ತಸ್ಮಾತ್ಸರ್ವಗತಂ ಬ್ರಹ್ಮ ನಿತ್ಯಂ ಯಜ್ಞೇ ಪ್ರತಿಷ್ಠಿತಮ್ ॥ ೧೫॥**

ಸಂಪೂರ್ಣ ಪ್ರಾಣಿಗಳು ಅನ್ನದಿಂದ ಉತ್ಪನ್ನವಾಗುತ್ತವೆ, ಅನ್ನದ ಉತ್ಪತ್ತಿಯು ವೃಷ್ಟಿಯಿಂದ ಆಗುತ್ತದೆ, ವೃಷ್ಟಿಯು ಯಜ್ಞದಿಂದ ಆಗುತ್ತದೆ ಮತ್ತು ಯಜ್ಞವು ವಿಹಿತವಾದ ಕರ್ಮಗಳಿಂದ ಉತ್ಪನ್ನವಾಗುತ್ತದೆ. ಕರ್ಮಗಳ ಸಮುದಾಯವು ವೇದದಿಂದ ಉತ್ಪನ್ನವಾದುದೆಂದೂ, ವೇದವು ಅವಿನಾಶಿಯಾದ ಪರಮಾತ್ಮನಿಂದ ಉತ್ಪನ್ನವಾದುದೆಂದೂ ನೀನು ತಿಳಿ. ಇದರಿಂದ ಸರ್ವವ್ಯಾಪಿಯೂ, ಪರಮ ಅಕ್ಷರನೂ ಆದ ಪರಮಾತ್ಮನು ಸದಾ ಯಜ್ಞದಲ್ಲಿ ಪ್ರತಿಷ್ಠಿತನಾಗಿದ್ದಾನೆಂದು ಸಿದ್ಧವಾಗುತ್ತದೆ.

**ಏವಂ ಪ್ರವರ್ತಿತಂ ಚಕ್ರಂ ನಾನುವರ್ತಯತೀಹ ಯಃ ।**
**ಅಘಾಯುರಿಂದ್ರಿಯಾರಾಮೋ ಮೋಘಂ ಪಾರ್ಥ ಸ ಜೀವತಿ**

ಹೇ ಪಾರ್ಥನೇ! ಯಾವ ಮನುಷ್ಯನು ಈ ಲೋಕದಲ್ಲಿ ಈ ಪ್ರಕಾರವಾಗಿ ಪರಂಪರೆಯಿಂದ ಪ್ರಚಲಿತವಾಗಿರುವ ಸೃಷ್ಟಿಚಕ್ರಕ್ಕೆ ಅನುಕೂಲವಾಗಿ ವರ್ತಿಸುವುದಿಲ್ಲವೋ ಅರ್ಥಾತ್ ತನ್ನ ಕರ್ತವ್ಯ ಪಾಲನೆ ಮಾಡುವುದಿಲ್ಲವೋ, ಅವನು ಇಂದ್ರಿಯಗಳ ಮೂಲಕ ಭೋಗಗಳಲ್ಲಿ ರಮಿಸುವ ಪಾಪಾಯುವಾದ ಪುರುಷನು ವ್ಯರ್ಥವಾಗಿಯೇ ಜೀವಿಸುತ್ತಾನೆ. ॥ ೧೬॥

**ಯಸ್ತ್ವಾತ್ಮರತಿರೇವ ಸ್ಯಾದಾತ್ಮತೃಪ್ತಶ್ಚ ಮಾನವಃ ।**
**ಆತ್ಮನ್ಯೇವ ಚ ಸಂತುಷ್ಟಸ್ತಸ್ಯ ಕಾರ್ಯಂ ನ ವಿದ್ಯತೇ ॥ ೧೭॥**

ಆದರೆ ಯಾವ ಮನುಷ್ಯನು ಆತ್ಮನಲ್ಲಿಯೇ ರಮಮಾಣನಾಗಿರುವನೋ, ಆತ್ಮನಲ್ಲಿಯೇ ತೃಪ್ತನಾಗಿರುವನೋ ಹಾಗೂ ಆತ್ಮನಲ್ಲಿಯೇ ಸಂತುಷ್ಟನಾಗಿರುತ್ತಾನೋ ಅವನಿಗಾಗಿ ಯಾವ ಕರ್ತವ್ಯವೂ ಇರುವುದಿಲ್ಲ. ॥ ೧೭॥

**ನೈವ ತಸ್ಯ ಕೃತೇನಾರ್ಥೋ ನಾಕೃತೇನೇಹ ಕಶ್ಚನ ।**
**ನ ಚಾಸ್ಯ ಸರ್ವಭೂತೇಷು ಕಶ್ಚಿದರ್ಥವ್ಯಪಾಶ್ರಯಃ ॥ ೧೮॥**

ಆ ಮಹಾಪುರುಷನಿಗೆ ಈ ಜಗತ್ತಿನಲ್ಲಿ ಕರ್ಮಮಾಡುವುದರಿಂದ ಯಾವುದೇ ಪ್ರಯೋಜನವೂ ಇರುವುದಿಲ್ಲ. ಮತ್ತು ಕರ್ಮಗಳನ್ನು ಮಾಡದಿರುವುದರಿಂದಲೂ ಯಾವ ಪ್ರಯೋಜನವೂ ಇರುವುದಿಲ್ಲ. ಹಾಗೂ ಸಂಪೂರ್ಣ ಪ್ರಾಣಿಗಳಲ್ಲಿ ಕೂಡ ಇವನಿಗೆ ಕಿಂಚಿನ್ಮಾತ್ರವೂ ಸಹ ಸ್ವಾರ್ಥದ ಸಂಬಂಧವೂ ಇರುವುದಿಲ್ಲ. ॥ ೧೮॥

**ತಸ್ಮಾದಸಕ್ತಃ ಸತತಂ ಕಾರ್ಯಂ ಕರ್ಮ ಸಮಾಚಾರ ।**
**ಅಸಕ್ತೋ ಹ್ಯಾಚರನ್ಕರ್ಮ ಪರಮಾಪ್ನೋತಿ ಪೂರುಷಃ ॥ ೧೯॥**

ಆದ್ದರಿಂದ ನೀನು ನಿರಂತರವಾಗಿ ಆಸಕ್ತಿರಹಿತನಾಗಿ ಸದಾಕಾಲ ಕರ್ತವ್ಯ ಕರ್ಮವನ್ನು ಚೆನ್ನಾಗಿ ಮಾಡುತ್ತಿರು.

ಏಕೆಂದರೆ ಆಸಕ್ತಿ ರಹಿತನಾಗಿ ಕರ್ಮವನ್ನು ಮಾಡುತ್ತಿರುವ ಮನುಷ್ಯನು ಪರಮಾತ್ಮನನ್ನು ಪಡೆಯುತ್ತಾನೆ ॥ ೧೯॥

**ಕರ್ಮಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ ।**
**ಲೋಕಸಂಗ್ರಹಮೇವಾಪಿ ಸಂಪಶ್ಯನ್ಕರ್ತುಮರ್ಹಸಿ ॥ ೨೦॥**

ಜನಕಾದಿ ಜ್ಞಾನಿಜನರೂ ಕೂಡ ಆಸಕ್ತಿರಹಿತವಾದ ಕರ್ಮದ ಮೂಲಕವೇ ಪರಮಸಿದ್ಧಿಯನ್ನು ಪಡೆದಿದ್ದರು. ಆದ್ದರಿಂದ ಲೋಕಸಂಗ್ರಹವನ್ನು ದೃಷ್ಟಿಯಲ್ಲಿಟ್ಟುಕೊಂಡು ಸಹ ನೀನು ಕರ್ಮಮಾಡುವುದಕ್ಕೇ ಯೋಗ್ಯನಾಗಿದ್ದೀಯೆ, ಅರ್ಥಾತ್ - ನೀನು ಕರ್ಮಮಾಡುವುದೇ ಉಚಿತವಾಗಿದೆ.

**ಯದ್ಯದಾಚರತಿ ಶ್ರೇಷ್ಠಸ್ತತ್ತದೇವೇತರೋ ಜನಃ ।**
**ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ॥ ೨೧॥**

ಶ್ರೇಷ್ಠಪುರುಷರು ಯಾವ ಯಾವ ಆಚರಣೆಗಳನ್ನು ಮಾಡುತ್ತಾರೋ, ಇತರ ಪುರುಷರೂ ಕೂಡ ಹಾಗೆ ಹಾಗೆಯೇ ಆಚರಣೆಗಳನ್ನು ಮಾಡುತ್ತಾರೆ. ಅವರು ಯಾವುದನ್ನು ಪ್ರಮಾಣವೆಂದು ಮಾಡಿತೋರಿಸುತ್ತಾರೋ ಸಮಸ್ತ ಮನುಷ್ಯ ಸಮುದಾಯವು ಅದಕ್ಕನುಸಾರವಾಗಿಯೇ ವರ್ತಿಸಲು ತೊಡಗುತ್ತದೆ. ॥ ೨೧॥

**ನ ಮೇ ಪಾರ್ಥಾಸ್ತಿ ಕರ್ತವ್ಯಂ ತ್ರಿಷು ಲೋಕೇಷು ಕಿಂಚನ ।**
**ನಾನವಾಪ್ತಮವಾಪ್ತವ್ಯಂ ವರ್ತ ಏವ ಚ ಕರ್ಮಣಿ ॥ ೨೨॥**

ಹೇ ಅರ್ಜುನನೇ! ನನಗೆ ಈ ಮೂರೂ ಲೋಕಗಳಲ್ಲಿ ಯಾವುದೇ ಕರ್ತವ್ಯವು ಇಲ್ಲ ಮತ್ತು ಪಡೆಯಲು ಯೋಗ್ಯವಾದ ಯಾವುದೇ ವಸ್ತುವು ಅಪ್ರಾಪ್ತವಾಗಿದೆ ಎಂಬುದಿಲ್ಲ. ಆದರೂ ಸಹ ನಾನು ಕರ್ಮದಲ್ಲಿಯೇ ವರ್ತಿಸುತ್ತಿರುತ್ತೇನೆ. ॥ ೨೨॥

**ಯದಿ ಹ್ಯಹಂ ನ ವರ್ತೇಯಂ ಜಾತು ಕರ್ಮಣ್ಯತಂದ್ರಿತಃ ।**
**ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ ॥**

ಏಕೆಂದರೇ, ಹೇ ಪಾರ್ಥನೇ! ಒಂದು ವೇಳೆ ಯಾವಾಗಲಾದರೂ ನಾನು ಎಚ್ಚರವಾಗಿದ್ದುಕೊಂಡು ಕರ್ಮಗಳಲ್ಲಿ ವರ್ತಿಸದಿದ್ದರೆ ದೊಡ್ಡ ಹಾನಿಯುಂಟಾಗುವುದು ; ಏಕೆಂದರೆ ಮನುಷ್ಯರು ಎಲ್ಲ ಪ್ರಕಾರದಿಂದ ನನ್ನ ಮಾರ್ಗವನ್ನೇ ಅನುಸರಿಸುತ್ತಾರೆ. ॥ ೨೩॥

**ಉತ್ಸೀದೇಯುರಿಮೇ ಲೋಕಾ ನ ಕುರ್ಯಾಂ ಕರ್ಮ ಚೇದಹಮ್।**
**ಸಂಕರಸ್ಯ ಚ ಕರ್ತಾ ಸ್ಯಾಮುಪಹನ್ಯಾಮಿಮಾಃ ಪ್ರಜಾಃ ॥**

ಅದಕ್ಕಾಗಿ ಒಂದು ವೇಳೆ ನಾನು ಕರ್ಮವನ್ನು ಮಾಡದಿದ್ದರೆ ಈ ಎಲ್ಲ ಮನುಷ್ಯರೂ ನಷ್ಟ-ಭ್ರಷ್ಟರಾಗಿಬಿಡುವರು, ಮತ್ತು ನಾನು ವರ್ಣಸಂಕರತೆಯನ್ನು ಉಂಟುಮಾಡುವವನಾಗುವೆನು; ಹಾಗೂ ಸಮಸ್ತ ಪ್ರಜೆಗಳನ್ನು ನಾಶ ಮಾಡುವವನಾಗುವೆನು. ॥ ೨೪॥

**ಸಕ್ತಾಃ ಕರ್ಮಣ್ಯವಿದ್ವಾಂಸೋ ಯಥಾ ಕುರ್ವಂತಿ ಭಾರತ ।**
**ಕುರ್ಯಾದ್ವಿದ್ವಾಂಸ್ತಥಾಸಕ್ತಶ್ಚಿಕೀರ್ಷುರ್ಲೋಕಸಂಗ್ರಹಮ್ ॥**

ಹೇ ಭಾರತ! (ಅರ್ಜುನ) ಕರ್ಮದಲ್ಲಿ ಆಸಕ್ತರಾದ ಅಜ್ಞಾನೀಜನರು ಯಾವ ಪ್ರಕಾರ ಕರ್ಮವನ್ನು ಮಾಡುತ್ತಾರೋ, ಆಸಕ್ತಿರಹಿತನಾದ ವಿದ್ವಾಂಸನೂ ಕೂಡ ಲೋಕಸಂಗ್ರಹವನ್ನು ಮಾಡಲಿಚ್ಛಿಸುತ್ತಾ ಅದೇ ಪ್ರಕಾರ ಕರ್ಮವನ್ನು ಮಾಡಲಿ.

**ನ ಬುದ್ಧಿಭೇದಂ ಜನಯೇದಜ್ಞಾನಾಂ ಕರ್ಮಸಂಗಿನಾಮ್ ।**
**ಜೋಷಯೇತ್ಸರ್ವಕರ್ಮಾಣಿ ವಿದ್ವಾನ್ಯುಕ್ತಃ ಸಮಾಚರನ್ ॥**

ಪರಮಾತ್ಮನ ಸ್ವರೂಪದಲ್ಲಿ ಅಚಲವಾಗಿ ಸ್ಥಿತರಾದ ಜ್ಞಾನೀ ಪುರುಷರು - ಶಾಸ್ತ್ರವಿಹಿತವಾದ ಕರ್ಮಗಳಲ್ಲಿ ಆಸಕ್ತಿಯುಳ್ಳ ಅಜ್ಞಾನಿಗಳ ಬುದ್ಧಿಯಲ್ಲಿ ಭ್ರಮೆಯನ್ನು, ಅರ್ಥಾತ್ ಕರ್ಮಗಳಲ್ಲಿ ಅಶ್ರದ್ಧೆಯನ್ನು ಉಂಟುಮಾಡಬಾರದು. ಆದರೆ ಸ್ವಯಂ ಶಾಸ್ತ್ರವಿಹಿತ ಸಮಸ್ತ ಕರ್ಮಗಳನ್ನು ಚೆನ್ನಾಗಿ ಮಾಡುತ್ತಾ ಅವರಿಂದಲೂ ಅದೇ ಪ್ರಕಾರವಾಗಿ ಮಾಡಿಸಬೇಕು. ॥ ೨೬॥

**ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ ।**
**ಅಹಂಕಾರವಿಮೂಢಾತ್ಮಾ ಕರ್ತಾಹಮಿತಿ ಮನ್ಯತೇ ॥ ೨೭॥**

ವಾಸ್ತವವಾಗಿ ಸಮಸ್ತ ಕರ್ಮಗಳು ಎಲ್ಲ ಪ್ರಕಾರದಿಂದಲೂ ಪ್ರಕೃತಿಯ ಗುಣಗಳ ಮೂಲಕವೇ ಮಾಡಲ್ಪಡುತ್ತವೆ. ಆದರೂ ಕೂಡ ಯಾರ ಅಂತಃಕರಣವು ಅಹಂಕಾರದಿಂದ ಮೋಹಿತವಾಗಿದೆಯೋ ಅಂತಹ ಅಜ್ಞಾನಿಯು ನಾನು ಕರ್ತೃವಾಗಿದ್ದೇನೆ ಎಂದು ತಿಳಿಯುತ್ತಾನೆ. ॥ ೨೭॥

**ತತ್ತ್ವವಿತ್ತು ಮಹಾಬಾಹೋ ಗುಣಕರ್ಮ ವಿಭಾಗಯೋಃ ।**
**ಗುಣಾ ಗುಣೇಷು ವರ್ತಂತ ಇತಿ ಮತ್ವಾ ನ ಸಜ್ಜತೇ ॥ ೨೮॥**

ಆದರೆ ಹೇ ಮಹಾಬಾಹುವೇ! ಗುಣವಿಭಾಗ ಮತ್ತು ಕರ್ಮವಿಭಾಗದ ತತ್ತ್ವವನ್ನು ಬಲ್ಲ ಜ್ಞಾನಯೋಗಿಯು ಸಂಪೂರ್ಣವಾಗಿ ಗುಣಗಳೇ ಗುಣಗಳಲ್ಲಿ ವರ್ತಿಸುತ್ತಿವೆ ಯೆಂದು ತಿಳಿದುಕೊಂಡು ಅವುಗಳಲ್ಲಿ ಆಸಕ್ತನಾಗುವುದಿಲ್ಲ.

**ಪ್ರಕೃತೇರ್ಗುಣಸಮ್ಮೂಢಾಃ ಸಜ್ಜಂತೇ ಗುಣಕರ್ಮಸು ।**
**ತಾನಕೃತ್ಸ್ನವಿದೋ ಮಂದಾನ್ಕೃತ್ಸ್ನವಿನ್ನ ವಿಚಾಲಯೇತ್ ॥ ೨೯॥**

ಪ್ರಕೃತಿಯ ಗುಣಗಳಿಂದ ಅತ್ಯಂತ ಮೋಹಿತರಾದ ಮನುಷ್ಯರು ಗುಣಗಳಲ್ಲಿ ಮತ್ತು ಕರ್ಮಗಳಲ್ಲಿ ಆಸಕ್ತರಾಗಿರು ತ್ತಾರೆ. ಪೂರ್ಣವಾಗಿ ತಿಳಿಯದಿರುವ ಮಂದಬುದ್ಧಿಯುಳ್ಳ ಆ ಅಜ್ಞಾನಿಗಳನ್ನು ಪೂರ್ಣವಾಗಿ ತಿಳಿದ ಜ್ಞಾನಿಯು ವಿಚಲಿತ ಗೊಳಿಸಬಾರದು. ॥ ೨೯॥

**ಮಯಿ ಸರ್ವಾಣಿ ಕರ್ಮಾಣಿ ಸಂನ್ಯಸ್ಯಾಧ್ಯಾತ್ಮಚೇತಸಾ ।**
**ನಿರಾಶೀರ್ನಿರ್ಮಮೋ ಭೂತ್ವಾ ಯುಧ್ಯಸ್ವ ವಿಗತಜ್ವರಃ ॥ ೩೦॥**

ಅಂತರ್ಯಾಮಿ ಪರಮಾತ್ಮನಾದ ನನ್ನಲ್ಲಿ ತೊಡಗಿಸಿರುವ ಚಿತ್ತದ ಮೂಲಕ ಸಂಪೂರ್ಣ ಕರ್ಮಗಳನ್ನು ನನ್ನಲ್ಲಿ ಅರ್ಪಿಸಿ, ಆಶಾರಹಿತನೂ, ಮಮತಾರಹಿತನೂ ಮತ್ತು ಸಂತಾಪ ರಹಿತನೂ ಆಗಿ ಯುದ್ಧಮಾಡು. ॥ ೩೦॥

**ಯೇ ಮೇ ಮತಮಿದಂ ನಿತ್ಯಮನುತಿಷ್ಠಂತಿ ಮಾನವಾಃ ।**
**ಶ್ರದ್ಧಾವಂತೋಽನಸೂಯಂತೋ ಮುಚ್ಯಂತೇ ತೇಽಪಿ ಕರ್ಮಭಿಃ ॥**

ಯಾವ ಮನುಷ್ಯರು ದೋಷದೃಷ್ಟಿರಹಿತರಾಗಿ ಮತ್ತು ಶ್ರದ್ಧಾಯುಕ್ತರಾಗಿ ನನ್ನ ಈ ಸಿದ್ಧಾಂತವನ್ನು ಸದಾ ಅನುಸರಣೆ ಮಾಡುತ್ತಾರೋ ಅವರೂ ಕೂಡ ಸಂಪೂರ್ಣ ಕರ್ಮಗಳಿಂದ ಬಿಡುಗಡೆಯನ್ನು ಹೊಂದುತ್ತಾರೆ. ॥ ೩೧॥

**ಯೇ ತ್ವೇತದಭ್ಯಸೂಯಂತೋ ನಾನುತಿಷ್ಠಂತಿ ಮೇ ಮತಮ್।**
**ಸರ್ವಜ್ಞಾನವಿಮೂಢಾಂಸ್ತಾನ್ ವಿದ್ಧಿ ನಷ್ಟಾನಚೇತಸಃ ॥ ೩೨॥**

ಆದರೆ ಯಾವ ಮನುಷ್ಯರು ನನ್ನಲ್ಲಿ ದೋಷಾರೋಪಣೆ ಮಾಡುತ್ತಾ ನನ್ನ ಈ ಸಿದ್ಧಾಂತಕ್ಕನುಸಾರವಾಗಿ ನಡೆಯುವುದಿಲ್ಲವೋ ಆ ಮೂರ್ಖರನ್ನು ನೀನು ಸಮಸ್ತ ಜ್ಞಾನಗಳಲ್ಲಿ ಮೋಹಿತರು ಮತ್ತು ನಷ್ಟಹೊಂದಿದವರೆಂದು ತಿಳಿದುಕೋ.

**ಸದೃಶಂ ಚೇಷ್ಟತೇ ಸ್ವಸ್ಯಾಃ ಪ್ರಕೃತೇರ್ಜ್ಞಾನವಾನಪಿ ।**
**ಪ್ರಕೃತಿಂ ಯಾಂತಿ ಭೂತಾನಿ ನಿಗ್ರಹಃ ಕಿಂ ಕರಿಷ್ಯತಿ ॥ ೩೩॥**

ಎಲ್ಲ ಪ್ರಾಣಿಗಳು ಪ್ರಕೃತಿಯನ್ನು ಪಡೆಯುತ್ತವೆ ಅರ್ಥಾತ್ ತಮ್ಮ ಸ್ವಭಾವಕ್ಕೆ ಪರವಶವಾಗಿ ಕರ್ಮಮಾಡುತ್ತವೆ, ಜ್ಞಾನಿಯೂ ಸಹ ತನ್ನ ಪ್ರಕೃತಿಗೆ ಅನುಸಾರವಾಗಿ ಕ್ರಿಯೆಗಳನ್ನು ಮಾಡುತ್ತಾನೆ. ಮತ್ತೆ ಇದರಲ್ಲಿ ಯಾರ ಹಠವು ಏನು ಮಾಡಬಲ್ಲದು? ॥ ೩೩॥

**ಇಂದ್ರಿಯಸ್ಯೇಂದ್ರಿಯಸ್ಯಾರ್ಥೇ ರಾಗದ್ವೇಷೌ ವ್ಯವಸ್ಥಿತೌ ।**
**ತಯೋರ್ನ ವಶಮಾಗಚ್ಛೇತ್ತೌ ಹ್ಯಸ್ಯ ಪರಿಪಂಥಿನೌ ॥ ೩೪॥**

ಇಂದ್ರಿಯ-ಇಂದ್ರಿಯದ ಅರ್ಥದಲ್ಲಿ ಅರ್ಥಾತ್ ಪ್ರತಿಯೊಂದು ಇಂದ್ರಿಯದ ವಿಷಯದಲ್ಲಿ ರಾಗ ಮತ್ತು ದ್ವೇಷಗಳು ಅಡಗಿದ್ದು ಸ್ಥಿತವಾಗಿರುತ್ತವೆ. ಮನುಷ್ಯನು ಅವೆರಡರ ವಶನಾಗಬಾರದು. ಏಕೆಂದರೆ ಅವೆರಡೇ ಅವನ ಶ್ರೇಯಸ್ಸಿನ ಮಾರ್ಗದಲ್ಲಿ ವಿಘ್ನವನ್ನುಂಟುಮಾಡುವ ಮಹಾ ಶತ್ರುಗಳಾಗಿವೆ. ॥ ೩೪॥

**ಶ್ರೇಯಾನ್ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್।**
**ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ॥**

ಒಳ್ಳೆಯ ಪ್ರಕಾರದಿಂದ ಆಚರಣೆಗೆ ತರಲಾಗಿರುವ ಇನ್ನೊಬ್ಬರ ಧರ್ಮಕ್ಕಿಂತ ಗುಣರಹಿತವಾದರೂ ತನ್ನ ಧರ್ಮವು ಅತಿ ಉತ್ತಮವಾಗಿದೆ. ತನ್ನ ಧರ್ಮದಲ್ಲಾದರೋ ಸಾಯುವುದೂ ಕೂಡ ಶ್ರೇಯಸ್ಕರವಾಗಿದೆ ಮತ್ತು ಬೇರೆಯವರ ಧರ್ಮವು ಭಯವನ್ನುಂಟುಮಾಡುವುದಾಗಿದೆ.

ಅರ್ಜುನ ಉವಾಚ

**ಅಥ ಕೇನ ಪ್ರಯುಕ್ತೋಽಯಂ ಪಾಪಂ ಚರತಿ ಪೂರುಷಃ ।**
**ಅನಿಚ್ಛನ್ನಪಿ ವಾರ್ಷ್ಣೇಯ ಬಲಾದಿವ ನಿಯೋಜಿತಃ ॥**

ಅರ್ಜುನನು ಹೇಳಿದನು - ಹೇ ಕೃಷ್ಣಾ! ಹಾಗಾದರೆ ಈ ಮನುಷ್ಯನು ಸ್ವತಃ ಇಚ್ಛಿಸದಿದ್ದರೂ ಕೂಡ ಬಲವಂತವಾಗಿ

ತೊಡಗಿಸಲ್ಪಟ್ಟವನಂತೆ ಯಾವುದರಿಂದ ಪ್ರೇರಿತನಾಗಿ ಪಾಪದ ಆಚರಣೆಯನ್ನು ಮಾಡುತ್ತಾನೆ? ॥ ೩೬॥

*ಶ್ರೀಭಗವಾನುವಾಚ*

**ಕಾಮ ಏಷ ಕ್ರೋಧ ಏಷ ರಜೋಗುಣಸಮುದ್ಭವಃ ।**
**ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ ವೈರಿಣಮ್ ॥**

ಭಗವಂತನು ಹೇಳಿದನು – ರಜೋಗುಣದಿಂದ ಉತ್ಪನ್ನವಾದ ಈ ಕಾಮವೇ ಕ್ರೋಧವಾಗಿದೆ. ಇದು ಬಹಳ ತಿನ್ನುವವನು ಅರ್ಥಾತ್ ಭೋಗಗಳಿಂದ ಬೇಸರಪಡದಿರುವವನು ಮತ್ತು ಮಹಾಪಾಪಿಯಾಗಿದೆ. ಇದನ್ನೇ ನೀನು ಈ ವಿಷಯದಲ್ಲಿ ವೈರಿಯೆಂದು ತಿಳಿ. ॥ ೩೭॥

**ಧೂಮೇನಾವ್ರಿಯತೇ ವಹ್ನಿರ್ಯಥಾऽದರ್ಶೋ ಮಲೇನ ಚ।**
**ಯಥೋಲ್ಬೇನಾವೃತೋ ಗರ್ಭಸ್ತಥಾ ತೇನೇದಮಾವೃತಮ್ ॥**

ಯಾವ ಪ್ರಕಾರವಾಗಿ ಹೊಗೆಯಿಂದ ಅಗ್ನಿಯು ಮತ್ತು ಕೊಳೆಯಿಂದ ಕನ್ನಡಿಯು ಮುಚ್ಚಲ್ಪಡುತ್ತವೆಯೋ ಹಾಗೂ ಯಾವ ಪ್ರಕಾರವಾಗಿ ಜರಾಯು ಎಂಬ ಪೊರೆಯಿಂದ ಗರ್ಭವು ಮುಚ್ಚಲ್ಪಟ್ಟಿರುತ್ತದೆಯೋ ಹಾಗೆಯೇ ಆ ಕಾಮದ ಮೂಲಕ ಈ ಜ್ಞಾನವು ಮುಚ್ಚಲ್ಪಟ್ಟಿರುತ್ತದೆ. ॥ ೩೮॥

**ಆವೃತಂ ಜ್ಞಾನಮೇತೇನ ಜ್ಞಾನಿನೋ ನಿತ್ಯವೈರಿಣಾ ।**
**ಕಾಮರೂಪೇಣ ಕೌಂತೇಯ ದುಷ್ಪೂರೇಣಾನಲೇನ ಚ ॥**

ಮತ್ತು ಹೇ ಅರ್ಜುನನೇ! ಇದು ಅಗ್ನಿಗೆ ಸಮಾನವಾಗಿ ಎಂದಿಗೂ ಪೂರ್ಣವಾಗದಿರುವ, ಕಾಮರೂಪೀ ಜ್ಞಾನಿಗಳ ನಿತ್ಯವೈರಿಯ ಮೂಲಕ ಮನುಷ್ಯನ ಜ್ಞಾನವು ಮುಚ್ಚಲ್ಪಟ್ಟಿದೆ.

**ಇಂದ್ರಿಯಾಣಿ ಮನೋ ಬುದ್ಧಿರಸ್ಯಾಧಿಷ್ಠಾನಮುಚ್ಯತೇ ।**
**ಏತೈರ್ವಿಮೋಹಯತ್ಯೇಷ ಜ್ಞಾನಮಾವೃತ್ಯ ದೇಹಿನಮ್ ॥ ೪೦॥**

ಇಂದ್ರಿಯಗಳು, ಮನಸ್ಸು ಮತ್ತು ಬುದ್ಧಿ– ಇವೆಲ್ಲ ಇದರ ವಾಸಸ್ಥಾನವೆಂದು ಹೇಳಲ್ಪಡುತ್ತವೆ. ಈ ಕಾಮವು ಮನಸ್ಸು, ಬುದ್ಧಿ ಮತ್ತು ಇಂದ್ರಿಯಗಳ ಮೂಲಕವೇ ಜ್ಞಾನವನ್ನು ಆವರಿಸಿ ಜೀವಾತ್ಮನನ್ನು ಮೋಹ ಗೊಳಿಸುತ್ತದೆ. ॥ ೪೦॥

**ತಸ್ಮಾತ್ತ್ವಮಿಂದ್ರಿಯಾಣ್ಯಾದೌ ನಿಯಮ್ಯ ಭರತರ್ಷಭ ।**
**ಪಾಪ್ಮಾನಂ ಪ್ರಜಹಿ ಹ್ಯೇನಂ ಜ್ಞಾನವಿಜ್ಞಾನನಾಶನಮ್ ॥ ೪೧॥**

ಆದಕಾರಣ ಹೇ ಅರ್ಜುನನೇ! ನೀನು ಮೊದಲು ಇಂದ್ರಿಯಗಳನ್ನು ವಶಪಡಿಸಿಕೊಂಡು ಈ ಜ್ಞಾನ ಮತ್ತು ವಿಜ್ಞಾನವನ್ನು ನಾಶಪಡಿಸುವ ಮಹಾಪಾಪಿಯಾದ ಕಾಮವನ್ನು ಅವಶ್ಯವಾಗಿ, ಬಲಪೂರ್ವಕವಾಗಿ ಕೊಂದುಬಿಡು. ॥ ೪೧॥

**ಇಂದ್ರಿಯಾಣಿ ಪರಾಣ್ಯಾಹುರಿಂದ್ರಿಯೇಭ್ಯಃ ಪರಂ ಮನಃ ।**
**ಮನಸಸ್ತು ಪರಾ ಬುದ್ಧಿರ್ಯೋ ಬುದ್ಧೇಃ ಪರತಸ್ತು ಸಃ ॥ ೪೨॥**

ಇಂದ್ರಿಯಗಳು ಸ್ಥೂಲಶರೀರಕ್ಕಿಂತ, ಶ್ರೇಷ್ಠ ಬಲಶಾಲಿ ಮತ್ತು ಸೂಕ್ಷ್ಮವೆಂದು ಹೇಳುತ್ತಾರೆ; ಈ ಇಂದ್ರಿಯಗಳಿಗಿಂತ

ಶ್ರೇಷ್ಠವಾದುದು ಮನಸ್ಸು, ಮನಸ್ಸಿಗಿಂತಲೂ ಶ್ರೇಷ್ಠವಾದುದು ಬುದ್ಧಿಯಾಗಿದೆ ಮತ್ತು ಯಾವುದು ಬುದ್ಧಿಗಿಂತಲೂ ಕೂಡ ಅತ್ಯಂತ ಶ್ರೇಷ್ಠವಾಗಿದೆಯೋ ಅದೇ ಆತ್ಮವಾಗಿದೆ. ॥ ೪೨॥

**ಏವಂ ಬುದ್ಧೇಃ ಪರಂ ಬುದ್ಧ್ವಾ ಸಂಸ್ತಭ್ಯಾತ್ಮಾನಮಾತ್ಮನಾ ।**
**ಜಹಿ ಶತ್ರುಂ ಮಹಾಬಾಹೋ ಕಾಮರೂಪಂ ದುರಾಸದಮ್**

ಈ ಪ್ರಕಾರವಾಗಿ ಬುದ್ಧಿಗಿಂತ ಪರ ಅರ್ಥಾತ್ ಸೂಕ್ಷ್ಮವೂ, ಬಲಶಾಲಿಯೂ ಮತ್ತು ಅತ್ಯಂತ ಶ್ರೇಷ್ಠವಾದ ಆತ್ಮವನ್ನು ಅರಿತುಕೊಂಡು ಮತ್ತು ಬುದ್ಧಿಯ ಮೂಲಕ ಮನಸ್ಸನ್ನು ವಶಪಡಿಸಿಕೊಂಡು ಹೇ ಮಹಾಬಾಹುವೇ ! ನೀನು ಈ ಕಾಮರೂಪೀ ದುರ್ಜಯವಾದ ಶತ್ರುವನ್ನು ಕೊಂದು ಹಾಕು.

*ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು*
*ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ*
*ಕರ್ಮಯೋಗೋ ನಾಮ ತೃತೀಯೋಽಧ್ಯಾಯಃ ॥ ೩॥*

❀ ❀ ❀ ❀ ❀

## ॥ ಅಥ ಚತುರ್ಥೋಽಧ್ಯಾಯಃ॥

## ಜ್ಞಾನಕರ್ಮಸಂನ್ಯಾಸಯೋಗವು

*ಶ್ರೀಭಗವಾನುವಾಚ*

**ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನಹಮವ್ಯಯಮ್ ।**
**ವಿವಸ್ವಾನ್ಮನವೇ ಪ್ರಾಹ ಮನುರಿಕ್ಷ್ವಾಕವೇಽಬ್ರವೀತ್ ॥ ೧॥**

ಶ್ರೀಭಗವಂತನು ಹೇಳಿದನು - ನಾನು ಈ ಅವಿನಾಶಿಯಾದ ಯೋಗವನ್ನು ಸೂರ್ಯನಿಗೆ ಹೇಳಿದ್ದೆ. ಸೂರ್ಯನು ತನ್ನ ಪುತ್ರನಾದ ವೈವಸ್ವತ ಮನುವಿಗೆ ಹೇಳಿದನು ಮತ್ತು ಮನುವು ತನ್ನ ಪುತ್ರನಾದ ರಾಜಾ ಇಕ್ಷ್ವಾಕುವಿಗೆ ಹೇಳಿದನು.

**ಏವಂ ಪರಂಪರಾಪ್ರಾಪ್ತಮಿಮಂ ರಾಜರ್ಷಯೋ ವಿದುಃ ।**
**ಸ ಕಾಲೇನೇಹ ಮಹತಾ ಯೋಗೋ ನಷ್ಟಃ ಪರಂತಪ ॥ ೨॥**

ಹೇ ಪರಂತಪ ಅರ್ಜುನನೇ! ಈ ಪ್ರಕಾರವಾಗಿ ಪರಂಪರೆಯಿಂದ ಪ್ರಾಪ್ತವಾದ ಈ ಯೋಗವನ್ನು ರಾಜರ್ಷಿಗಳು ತಿಳಿದರು. ಆದರೆ ಅದರ ನಂತರ ಆ ಯೋಗವು ಬಹಳ ಕಾಲದಿಂದ ಈ ಭೂಲೋಕದಲ್ಲಿ ಲುಪ್ತಪ್ರಾಯವಾಗಿ ಹೋಯಿತು. ॥ ೨॥

**ಸ ಏವಾಯಂ ಮಯಾ ತೇಽದ್ಯ ಯೋಗಃ ಪ್ರೋಕ್ತಃ ಪುರಾತನಃ**
**ಭಕ್ತೋಽಸಿ ಮೇ ಸಖಾ ಚೇತಿ ರಹಸ್ಯಂ ಹ್ಯೇತದುತ್ತಮಮ್ ॥**

ನೀನು ನನ್ನ ಭಕ್ತನೂ, ಪ್ರಿಯಸಖನೂ ಆಗಿರುವೆ, ಆದ್ದರಿಂದ ಅದೇ ಈ ಪುರಾತನವಾದ ಯೋಗವನ್ನು ಇಂದು ನಾನು ನಿನಗೆ ಹೇಳಿದ್ದೇನೆ; ಏಕೆಂದರೆ ಇದು ಬಹಳ ಉತ್ತಮವಾದ ರಹಸ್ಯವಾಗಿದೆ ಅರ್ಥಾತ್ ಗುಪ್ತವಾಗಿಡಲು ಯೋಗ್ಯವಾದ ವಿಷಯವಾಗಿದೆ. ॥ ೩॥

ಅರ್ಜುನ ಉವಾಚ

**ಅಪರಂ ಭವತೋ ಜನ್ಮ ಪರಂ ಜನ್ಮ ವಿವಸ್ವತಃ ।**
**ಕಥಮೇತದ್ವಿಜಾನೀಯಾಂ ತ್ವಮಾದೌ ಪ್ರೋಕ್ತವಾನಿತಿ ॥ ೪॥**

ಅರ್ಜುನನು ಹೇಳಿದನು - ನಿನ್ನ ಜನ್ಮವಾದರೋ ಅರ್ವಾಚೀನವಾದುದು ಅರ್ಥಾತ್ ಇತ್ತೀಚಿನದ್ದಾಗಿದೆ ಮತ್ತು ಸೂರ್ಯನ ಜನ್ಮವು ಬಹಳ ಪ್ರಾಚೀನವಾದುದು. ಅರ್ಥಾತ್ ಕಲ್ಪದ ಆದಿಯಲ್ಲಿ ಆಗಿಹೋಗಿತ್ತು. ಹಾಗಿರುವಾಗ ಕಲ್ಪದ ಆದಿಯಲ್ಲಿ ನೀನೇ ಸೂರ್ಯನಿಗೆ ಈ ಯೋಗವನ್ನು ಹೇಳಿದ್ದೆಯೆಂದು ನಾನು ಹೇಗೆ ತಿಳಿದುಕೊಳ್ಳಲಿ? ॥ ೪॥

ಶ್ರೀಭಗವಾನುವಾಚ

**ಬಹೂನಿ ಮೇ ವ್ಯತೀತಾನಿ ಜನ್ಮಾನಿ ತವ ಚಾರ್ಜುನ ।**
**ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರಂತಪ ॥ ೫॥**

ಶ್ರೀಭಗವಂತನು ಹೇಳಿದನು - ಹೇ ಪರಂತಪ ಅರ್ಜುನನೆ! ನನ್ನ ಮತ್ತು ನಿನ್ನ ಅನೇಕ ಜನ್ಮಗಳು ಆಗಿ ಹೋಗಿವೆ. ಅವೆಲ್ಲಗಳ ಅರಿವು ನಿನಗಿಲ್ಲ, ನನಗಿದೆ.

**ಅಜೋಽಪಿ ಸನ್ನವ್ಯಯಾತ್ಮಾ ಭೂತಾನಾಮೀಶ್ವರೋಽಪಿ ಸನ್।**
**ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮ್ಯಾತ್ಮಮಾಯಯಾ ॥ ೬॥**

ನಾನು ಅಜನ್ಮನು ಮತ್ತು ಅವಿನಾಶಿ ಸ್ವರೂಪನಾಗಿದ್ದರೂ ಸಮಸ್ತ ಪ್ರಾಣಿಗಳ ಈಶ್ವರ (ಒಡೆಯ)ನಾಗಿದ್ದರೂ ಸಹ - ನನ್ನ ಪ್ರಕೃತಿಯನ್ನು ಅಧೀನವಾಗಿಸಿಕೊಂಡು ನನ್ನ ಯೋಗ ಮಾಯೆಯಿಂದ ಪ್ರಕಟನಾಗುತ್ತೇನೆ. ॥ ೬॥

**ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।**
**ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್ ॥ ೭॥**

ಹೇ ಭರತವಂಶೀಯ ಅರ್ಜುನನೇ! ಯಾವ-ಯಾವ ಕಾಲದಲ್ಲಿ ಧರ್ಮದ ಹಾನಿ ಮತ್ತು ಅಧರ್ಮದ ವೃದ್ಧಿಯಾಗುತ್ತದೆಯೋ, ಆವಾಗಲೆಲ್ಲಾ ನಾನು ನನ್ನ ಸ್ವರೂಪವನ್ನು ರಚಿಸುತ್ತೇನೆ, ಅರ್ಥಾತ್ ಸಾಕಾರರೂಪದಿಂದ ಜನರ ಮುಂದೆ ಪ್ರಕಟನಾಗುತ್ತೇನೆ. ॥ ೭॥

**ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್ ।**
**ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥**

ಸಾಧುಪುರುಷರನ್ನು ಉದ್ಧಾರಮಾಡುವುದಕ್ಕಾಗಿಯೂ, ಪಾಪಕರ್ಮ ಮಾಡುವವರನ್ನು ವಿನಾಶಪಡಿಸಲಿಕ್ಕಾಗಿಯೂ ಮತ್ತು ಧರ್ಮವನ್ನು ಚೆನ್ನಾಗಿ ಸ್ಥಾಪಿಸುವುದಕ್ಕಾಗಿಯೂ ನಾನು ಯುಗ ಯುಗಗಳಲ್ಲಿ ಪ್ರಕಟವಾಗುತ್ತೇನೆ. ॥ ೮॥

**ಜನ್ಮ ಕರ್ಮ ಚ ಮೇ ದಿವ್ಯಮೇವಂ ಯೋ ವೇತ್ತಿ ತತ್ತ್ವತಃ ।**
**ತ್ಯಕ್ತ್ವಾ ದೇಹಂ ಪುನರ್ಜನ್ಮ ನೈತಿ ಮಾಮೇತಿ ಸೋಽರ್ಜುನ ॥**

ಹೇ ಅರ್ಜುನನೇ! ನನ್ನ ಜನ್ಮ ಮತ್ತು ಕರ್ಮಗಳು ದಿವ್ಯ ಅರ್ಥಾತ್ ನಿರ್ಮಲ ಮತ್ತು ಅಲೌಕಿಕವಾಗಿವೆ. ಈ ಪ್ರಕಾರವಾಗಿ ಯಾವ ಮನುಷ್ಯನು ತತ್ತ್ವದಿಂದ ತಿಳಿದುಕೊಳ್ಳುತ್ತಾನೋ ಅವನು ಶರೀರವನ್ನು ತ್ಯಾಗಮಾಡಿ ಪುನರ್ಜನ್ಮವನ್ನು ಪಡೆಯುವುದಿಲ್ಲ. ಆದರೆ, ನನ್ನನ್ನೇ ಪಡೆಯುತ್ತಾನೆ. ॥ ೯॥

**ವೀತರಾಗಭಯಕ್ರೋಧಾ ಮನ್ಮಯಾ ಮಾಮುಪಾಶ್ರಿತಾಃ ।**
**ಬಹವೋ ಜ್ಞಾನತಪಸಾ ಪೂತಾ ಮದ್ಭಾವಮಾಗತಾಃ ॥ ೧೦॥**

ಮೊದಲು ಯಾರ ರಾಗ, ಭಯ ಮತ್ತು ಕ್ರೋಧ ಸರ್ವಥಾ ನಷ್ಟವಾಗಿದೆಯೋ ಮತ್ತು ಯಾರು ನನ್ನಲ್ಲಿ ಅನನ್ಯ ಪ್ರೇಮ ಪೂರ್ವಕ ಸ್ಥಿತರಾಗಿದ್ದಾರೋ ಅಂತಹ ನನ್ನ ಆಶ್ರಿತ ರಾಗಿರುವ, ಅನೇಕ ಭಕ್ತರು ಹಿಂದಿನ ಶ್ಲೋಕದಲ್ಲಿ ತಿಳಿಸಿರುವ ಜ್ಞಾನರೂಪೀ ತಪಸ್ಸಿನಿಂದ ಪವಿತ್ರರಾಗಿ ನನ್ನ ಸ್ವರೂಪವನ್ನು ಹೊಂದಿದ್ದಾರೆ. ॥ ೧೦॥

**ಯೇ ಯಥಾಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಮ್**
**ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ ॥**

ಹೇ ಅರ್ಜುನನೇ!, ಯಾವ ಭಕ್ತರು ನನ್ನನ್ನು ಯಾವ ಭಾವದಿಂದ ಭಜಿಸುತ್ತಾರೋ ಅವರನ್ನು ನಾನು ಕೂಡ ಅದೇ ಭಾವದಿಂದ ಭಜಿಸುತ್ತೇನೆ; ಏಕೆಂದರೆ ಮನುಷ್ಯರೆಲ್ಲರೂ ಎಲ್ಲ ಪ್ರಕಾರದಿಂದ ನನ್ನ ಮಾರ್ಗವನ್ನೇ ಅನುಸರಿಸುತ್ತಾರೆ.

**ಕಾಂಕ್ಷಂತಃ ಕರ್ಮಣಾಂ ಸಿದ್ಧಿಂ ಯಜಂತ ಇಹ ದೇವತಾಃ ।**
**ಕ್ಷಿಪ್ರಂ ಹಿ ಮಾನುಷೇ ಲೋಕೇ ಸಿದ್ಧಿರ್ಭವತಿ ಕರ್ಮಜಾ ॥**

ಈ ಮನುಷ್ಯಲೋಕದಲ್ಲಿ ಕರ್ಮಗಳ ಫಲವನ್ನು ಬಯಸುವ ಜನರು ದೇವತೆಗಳ ಪೂಜೆಯನ್ನು ಮಾಡುತ್ತಿರುತ್ತಾರೆ; ಏಕೆಂದರೆ ಅವರಿಗೆ ಕರ್ಮದಿಂದ ಉತ್ಪನ್ನವಾಗುವ ಸಿದ್ಧಿಯು ಶೀಘ್ರವಾಗಿ ಸಿಗುತ್ತದೆ. ॥ ೧೨॥

**ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ ।**
**ತಸ್ಯ ಕರ್ತಾರಮಪಿ ಮಾಂ ವಿದ್ಧ್ಯಕರ್ತಾರಮವ್ಯಯಮ್ ॥**

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ - ಈ ನಾಲ್ಕು ವರ್ಣಗಳ ಸಮೂಹವು ಗುಣ ಮತ್ತು ಕರ್ಮಗಳ ವಿಭಾಗಪೂರ್ವಕವಾಗಿ ನನ್ನ ಮೂಲಕ ರಚಿಸಲ್ಪಟ್ಟಿದೆ. ಈ ಪ್ರಕಾರವಾಗಿ ಆ ಸೃಷ್ಟಿರಚನಾದಿ ಕರ್ಮದ ಕರ್ತೃವಾದರೂ ಕೂಡ, ಅವಿನಾಶೀ ಪರಮೇಶ್ವರನಾದ ನನ್ನನ್ನು ನೀನು ವಾಸ್ತವವಾಗಿ ಕರ್ತೃವಲ್ಲವೆಂದೇ ತಿಳಿ. ॥ ೧೩॥

**ನ ಮಾಂ ಕರ್ಮಾಣಿ ಲಿಂಪಂತಿ ನ ಮೇ ಕರ್ಮಫಲೇ ಸ್ಪೃಹಾ।**
**ಇತಿ ಮಾಂ ಯೋಽಭಿಜಾನಾತಿ ಕರ್ಮಭಿರ್ನ ಸ ಬದ್ಧ್ಯತೇ ॥**

ಕರ್ಮಗಳ ಫಲದಲ್ಲಿ ನನಗೆ ಸ್ಪೃಹೆಯು ಇರುವುದಿಲ್ಲ, ಅದಕ್ಕಾಗಿ ನನಗೆ ಕರ್ಮಗಳು ಅಂಟಿಕೊಳ್ಳುವುದಿಲ್ಲ - ಈ ಪ್ರಕಾರವಾಗಿ ಯಾರು ನನ್ನನ್ನು ತತ್ತ್ವದಿಂದ ತಿಳಿದುಕೊಳ್ಳುತ್ತಾನೋ ಅವನು ಕೂಡ ಕರ್ಮಗಳಿಂದ ಬಂಧಿತನಾಗುವುದಿಲ್ಲ.

**ಏವಂ ಜ್ಞಾತ್ವಾ ಕೃತಂ ಕರ್ಮ ಪೂರ್ವೈರಪಿ ಮುಮುಕ್ಷುಭಿಃ ।**
**ಕುರು ಕರ್ಮೈವ ತಸ್ಮಾತ್ತ್ವಂ ಪೂರ್ವೈಃ ಪೂರ್ವತರಂ ಕೃತಮ್ ॥**

ಪೂರ್ವಕಾಲದ ಮುಮುಕ್ಷುಗಳು ಕೂಡ ಈ ಪ್ರಕಾರವಾಗಿ ತಿಳಿದೇ ಕರ್ಮಗಳನ್ನು ಮಾಡಿದ್ದಾರೆ. ಆದ್ದರಿಂದ ನೀನೂ ಕೂಡ ಪೂರ್ವಜರ ಮೂಲಕ ಸದಾಕಾಲ ಮಾಡಲ್ಪಡುತ್ತಾ ಬಂದಿರುವ ಕರ್ಮಗಳನ್ನೇ ಮಾಡು. ॥ ೧೫॥

**ಕಿಂ ಕರ್ಮ ಕಿಮಕರ್ಮೇತಿ ಕವಯೋಽಪ್ಯತ್ರ ಮೋಹಿತಾಃ ।**
**ತತ್ತೇ ಕರ್ಮ ಪ್ರವಕ್ಷ್ಯಾಮಿ ಯಜ್ಜ್ಞಾತ್ವಾಮೋಕ್ಷ್ಯಸೇಽಶುಭಾತ್ ॥**

ಕರ್ಮವು ಯಾವುದು ಮತ್ತು ಅಕರ್ಮವು ಯಾವುದು? – ಈ ಪ್ರಕಾರವಾಗಿ ಇದರ ನಿರ್ಣಯ ಮಾಡುವಲ್ಲಿ ಬುದ್ಧಿವಂತರಾದ ಪುರುಷರು ಸಹ ಮೋಹಿತರಾಗುತ್ತಾರೆ. ಆದ್ದರಿಂದ ಆ ಕರ್ಮತತ್ತ್ವವನ್ನು ನಾನು ನಿನಗೆ ಚೆನ್ನಾಗಿ ತಿಳಿಯ ಹೇಳುವೆನು. ಅದನ್ನು ತಿಳಿದುಕೊಂಡ ನೀನು ಅಶುಭದಿಂದ ಅರ್ಥಾತ್ ಕರ್ಮ ಬಂಧನದಿಂದ ಮುಕ್ತನಾಗಿಬಿಡುವೆ. ॥ ೧೬॥

**ಕರ್ಮಣೋ ಹ್ಯಪಿ ಬೋದ್ಧವ್ಯಂ ಬೋದ್ಧವ್ಯಂ ಚ ವಿಕರ್ಮಣಃ**
**ಅಕರ್ಮಣಶ್ಚ ಬೋದ್ಧವ್ಯಂ ಗಹನಾ ಕರ್ಮಣೋ ಗತಿಃ ॥**

ಕರ್ಮದ ಸ್ವರೂಪವನ್ನು ಕೂಡ ತಿಳಿಯಬೇಕು ಮತ್ತು ಅಕರ್ಮದ ಸ್ವರೂಪವನ್ನೂ ಕೂಡ ತಿಳಿಯಬೇಕು. ಹಾಗೆಯೇ ವಿಕರ್ಮದ ಸ್ವರೂಪವನ್ನೂ ಸಹ ತಿಳಿಯಬೇಕು; ಏಕೆಂದರೆ ಕರ್ಮದ ಗತಿಯು ಗಹನವಾಗಿದೆ. ॥ ೧೭॥

**ಕರ್ಮಣ್ಯಕರ್ಮ ಯಃ ಪಶ್ಯೇದಕರ್ಮಣಿ ಚ ಕರ್ಮ ಯಃ ।**
**ಸ ಬುದ್ಧಿಮಾನ್ ಮನುಷ್ಯೇಷು ಸ ಯುಕ್ತಃ ಕೃತ್ಸ್ನಕರ್ಮಕೃತ್ ॥**

ಯಾವ ಮನುಷ್ಯನು ಕರ್ಮದಲ್ಲಿ ಅಕರ್ಮವನ್ನು ನೋಡುತ್ತಾನೋ ಮತ್ತು ಯಾರು ಅಕರ್ಮದಲ್ಲಿ ಕರ್ಮವನ್ನು ನೋಡುತ್ತಾನೋ ಅವನು ಮನುಷ್ಯರಲ್ಲಿ ಬುದ್ಧಿವಂತನಾಗಿ

ದ್ದಾನೆ ಮತ್ತು ಆ ಯೋಗಿಯು ಸಮಸ್ತ ಕರ್ಮಗಳನ್ನು ಮಾಡುವವನಾಗಿದ್ದಾನೆ. ॥ ೧೮॥

**ಯಸ್ಯ ಸರ್ವೇ ಸಮಾರಂಭಾಃ ಕಾಮಸಂಕಲ್ಪವರ್ಜಿತಾಃ ।**
**ಜ್ಞಾನಾಗ್ನಿದಗ್ಧಕರ್ಮಾಣಂ ತಮಾಹುಃ ಪಂಡಿತಂ ಬುಧಾಃ ॥**

ಯಾರ ಸಂಪೂರ್ಣ ಶಾಸ್ತ್ರಸಮ್ಮತವಾದ ಕರ್ಮಗಳು ಕಾಮನೆ ಮತ್ತು ಸಂಕಲ್ಪವಿಲ್ಲದೆ ಇರುತ್ತವೆಯೋ ಹಾಗೂ ಯಾರ ಸಮಸ್ತ ಕರ್ಮಗಳು ಜ್ಞಾನರೂಪೀ ಅಗ್ನಿಯ ಮೂಲಕ ಭಸ್ಮವಾಗಿಹೋಗಿವೆಯೋ, ಆ ಮಹಾಪುರುಷನನ್ನು ಜ್ಞಾನಿಜನರೂ ಸಹ ಪಂಡಿತನೆಂದು ಹೇಳುತ್ತಾರೆ. ॥ ೧೯॥

**ತ್ಯಕ್ತ್ವಾ ಕರ್ಮಫಲಾಸಂಗಂ ನಿತ್ಯತೃಪ್ತೋ ನಿರಾಶ್ರಯಃ ।**
**ಕರ್ಮಣ್ಯಭಿಪ್ರವೃತ್ತೋಽಪಿ ನೈವ ಕಿಂಚಿತ್ಕರೋತಿ ಸಃ ॥ ೨೦॥**

ಯಾವ ಪುರುಷನು ಸಮಸ್ತ ಕರ್ಮಗಳಲ್ಲಿ ಮತ್ತು ಅವುಗಳ ಫಲದಲ್ಲಿ ಆಸಕ್ತಿಯನ್ನು ಸರ್ವಥಾ ತ್ಯಾಗಮಾಡಿ ಜಗತ್ತಿನ ಆಶ್ರಯದಿಂದ ರಹಿತನಾಗಿದ್ದಾನೆಯೋ ಮತ್ತು ಪರಮಾತ್ಮನಲ್ಲಿ ನಿತ್ಯತೃಪ್ತನಾಗಿದ್ದಾನೆಯೋ ಅವನು ಕರ್ಮಗಳಲ್ಲಿ ಚೆನ್ನಾಗಿ ವರ್ತಿಸುತ್ತಿದ್ದರೂ ಕೂಡ ವಾಸ್ತವವಾಗಿ ಏನನ್ನೂ ಮಾಡುವುದಿಲ್ಲ.

**ನಿರಾಶೀರ್ಯತಚಿತ್ತಾತ್ಮಾ ತ್ಯಕ್ತಸರ್ವಪರಿಗ್ರಹಃ ।**
**ಶಾರೀರಂ ಕೇವಲಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಮ್ ॥**

ಯಾರಿಗೆ ಯಾವುದೇ ಪ್ರಕಾರದ ಆಸೆಯಿಲ್ಲವೋ, ಯಾರು ಅಂತಃಕರಣ ಮತ್ತು ಇಂದ್ರಿಯಗಳ ಸಹಿತ ಶರೀರ ವನ್ನು ಗೆದ್ದಿರುವನೋ, ಯಾರು ಸಮಸ್ತ ಭೋಗ ಸಾಮಗ್ರಿ ಗಳನ್ನು ತ್ಯಜಿಸಿದ್ದಾನೋ, ಅಂತಹ ಸಾಂಖ್ಯಯೋಗಿಯು ಕೇವಲ ಶರೀರ ಸಂಬಂಧವಾದ ಕರ್ಮಗಳನ್ನು ಮಾಡುತ್ತಾ ಇದ್ದರೂ ಪಾಪವನ್ನು ಪಡೆಯುವುದಿಲ್ಲ. ॥ ೨೧॥

**ಯದೃಚ್ಛಾಲಾಭಸಂತುಷ್ಟೋ ದ್ವಂದ್ವಾತೀತೋ ವಿಮತ್ಸರಃ ।**
**ಸಮಃ ಸಿದ್ಧಾವಸಿದ್ಧೌ ಚ ಕೃತ್ವಾಪಿ ನ ನಿಬಧ್ಯತೇ ॥ ೨೨॥**

ಯಾರು ತಾನು ಇಚ್ಛಿಸದೆ, ತಾನೇ ತಾನಾಗಿ ಪ್ರಾಪ್ತವಾದ ಪದಾರ್ಥದಲ್ಲಿ ಸದಾ ಸಂತುಷ್ಟನಾಗಿರುತ್ತಾನೋ, ಯಾರಲ್ಲಿ ಈರ್ಷ್ಯೆಯು ಸಂಪೂರ್ಣ ಅಭಾವವಾಗಿ ಹೋಗಿದೆಯೋ, ಯಾರು ಹರ್ಷ-ಶೋಕ ಮೊದಲಾದ ದ್ವಂದ್ವಗಳಿಂದ ಸರ್ವಥಾ ಅತೀತನಾಗಿದ್ದಾನೋ ಅಂತಹ ಸಿದ್ಧಿ ಮತ್ತು ಅಸಿದ್ಧಿಯಲ್ಲಿ ಸಮಚಿತ್ತನಾಗಿರುವ ಕರ್ಮಯೋಗಿಯು ಕರ್ಮ ವನ್ನು ಮಾಡುತ್ತಿದ್ದರೂ ಕೂಡ ಅವುಗಳಿಂದ ಬಂಧಿತನಾಗು ವುದಿಲ್ಲ. ॥ ೨೨॥

**ಗತಸಂಗಸ್ಯ ಮುಕ್ತಸ್ಯ ಜ್ಞಾನಾವಸ್ಥಿತಚೇತಸಃ ।**
**ಯಜ್ಞಾಯಾಚರತಃ ಕರ್ಮ ಸಮಗ್ರಂ ಪ್ರವಿಲೀಯತೇ ॥ ೨೩॥**

ಯಾರ ಆಸಕ್ತಿಯು ಸರ್ವಥಾ ನಷ್ಟವಾಗಿ ಹೋಗಿದೆಯೋ, ಯಾರು ದೇಹಾಭಿಮಾನ ಮತ್ತು ಮಮತಾರಹಿತನಾಗಿ

ಹೋಗಿದ್ದಾನೋ, ಯಾರ ಚಿತ್ತವು ನಿರಂತರವಾಗಿ ಪರಮಾತ್ಮನ ಜ್ಞಾನದಲ್ಲಿ ನೆಲೆನಿಂತಿದೆಯೋ, ಕೇವಲ ಯಜ್ಞಸಂಪಾದನೆಗಾಗಿ ಕರ್ಮಮಾಡುವಂತಹ - ಮನುಷ್ಯನ ಸಮಗ್ರ ಕರ್ಮವು ಪೂರ್ಣವಾಗಿ ವಿಲೀನ ವಾಗುತ್ತದೆ. ॥ ೨೩॥

**ಬ್ರಹ್ಮಾರ್ಪಣಂ ಬ್ರಹ್ಮ ಹವಿರ್ಬ್ರಹ್ಮಾಗ್ನೌ ಬ್ರಹ್ಮಣಾ ಹುತಮ್।**
**ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮಕರ್ಮಸಮಾಧಿನಾ ॥ ೨೪॥**

ಯಾವ ಯಜ್ಞದಲ್ಲಿ ಅರ್ಪಣ ಅರ್ಥಾತ್ 'ಸ್ರುವ' ಮೊದಲಾದವುಗಳು ಸಹ ಬ್ರಹ್ಮವಾಗಿದೆಯೋ ಮತ್ತು ಹವನ ಮಾಡಲ್ಪಡಲು ಯೋಗ್ಯವಾದ ದ್ರವ್ಯವೂ ಸಹ ಬ್ರಹ್ಮವಾಗಿದೆಯೋ ಹಾಗೂ ಬ್ರಹ್ಮರೂಪನಾದ ಕರ್ತೃವಿನ ಮೂಲಕ ಬ್ರಹ್ಮರೂಪವಾದ ಅಗ್ನಿಯಲ್ಲಿ ಆಹುತಿ ಕೊಡುವ ರೂಪವಾದ ಕ್ರಿಯೆಯೂ ಸಹ ಬ್ರಹ್ಮವಾಗಿದೆಯೋ ಆ ಬ್ರಹ್ಮಕರ್ಮದಲ್ಲಿ ಸ್ಥಿತನಾಗಿರುವ ಯೋಗಿಯ ಮೂಲಕ ಪಡೆಯಲು ಯೋಗ್ಯವಾದ ಫಲವೂ ಸಹ ಬ್ರಹ್ಮವೇ ಆಗಿದೆ. ॥ ೨೪॥

**ದೈವಮೇವಾಪರೇ ಯಜ್ಞಂ ಯೋಗಿನಃ ಪರ್ಯುಪಾಸತೇ ।**
**ಬ್ರಹ್ಮಾಗ್ನಾವಪರೇ ಯಜ್ಞಂ ಯಜ್ಞೇನೈವೋಪಜುಹ್ವತಿ ॥ ೨೫॥**

ಬೇರೆ ಯೋಗೀಜನರು ದೇವತೆಗಳ ಪೂಜಾ-ರೂಪವಾದ ಯಜ್ಞವನ್ನೇ ಚೆನ್ನಾಗಿ ಅನುಷ್ಠಾನವನ್ನು ಮಾಡುತ್ತಾರೆ ಮತ್ತು ಬೇರೆ ಯೋಗೀಜನರು ಪರಬ್ರಹ್ಮ ಪರಮಾತ್ಮ

ರೂಪವಾದ ಅಗ್ನಿಯಲ್ಲಿ ಅಭೇದದರ್ಶನರೂಪೀ ಯಜ್ಞದ ಮೂಲಕವೇ ಆತ್ಮರೂಪೀ ಯಜ್ಞದ ಹವನವನ್ನು ಮಾಡುತ್ತಾರೆ.

**ಶ್ರೋತ್ರಾದೀನೀಂದ್ರಿಯಾಣ್ಯನ್ಯೇ ಸಂಯಮಾಗ್ನಿಷು ಜುಹ್ವತಿ ।**
**ಶಬ್ದಾದೀನ್ ವಿಷಯಾನನ್ಯ ಇಂದ್ರಿಯಾಗ್ನಿಷು ಜುಹ್ವತಿ ॥ ೨೬॥**

ಅನ್ಯ ಯೋಗಿಜನರು ಶ್ರವಣೇಂದ್ರಿಯಾದಿ ಸಮಸ್ತ ಇಂದ್ರಿಯಗಳನ್ನು ಸಂಯಮರೂಪೀ ಅಗ್ನಿಗಳಲ್ಲಿ ಹೋಮ ಮಾಡುತ್ತಾರೆ ಮತ್ತು ಬೇರೆ ಯೋಗಿಜನರು ಶಬ್ದಾದಿ ಸಮಸ್ತ ವಿಷಯಗಳನ್ನು ಇಂದ್ರಿಯರೂಪೀ ಅಗ್ನಿಗಳಲ್ಲಿ ಹವನ ಮಾಡುತ್ತಾರೆ. ॥ ೨೬॥

**ಸರ್ವಾಣೀಂದ್ರಿಯಕರ್ಮಾಣಿ ಪ್ರಾಣಕರ್ಮಾಣಿ ಚಾಪರೇ ।**
**ಆತ್ಮಸಂಯಮಯೋಗಾಗ್ನೌ ಜುಹ್ವತಿ ಜ್ಞಾನದೀಪಿತೇ ॥ ೨೭॥**

ಬೇರೆ ಯೋಗಿಜನರು ಇಂದ್ರಿಯಗಳ ಸಂಪೂರ್ಣ ಕ್ರಿಯೆಗಳನ್ನು ಮತ್ತು ಪ್ರಾಣಗಳ ಸಮಸ್ತ ಕ್ರಿಯೆಗಳನ್ನು ಜ್ಞಾನದಿಂದ ಪ್ರಕಾಶಿತವಾದ ಆತ್ಮಸಂಯಮಯೋಗರೂಪೀ ಅಗ್ನಿಯಲ್ಲಿ ಹವನ ಮಾಡುತ್ತಾರೆ. ॥ ೨೭॥

**ದ್ರವ್ಯಯಜ್ಞಾಸ್ತಪೋಯಜ್ಞಾ ಯೋಗಯಜ್ಞಾಸ್ತಥಾಪರೇ ।**
**ಸ್ವಾಧ್ಯಾಯಜ್ಞಾನಯಜ್ಞಾಶ್ಚ ಯತಯಃ ಸಂಶಿತವ್ರತಾಃ ॥ ೨೮॥**

ಕೆಲವು ಪುರುಷರು ದ್ರವ್ಯಸಂಬಂಧವಾದ ಯಜ್ಞವನ್ನು ಮಾಡುವವರಾಗಿದ್ದಾರೆ. ಎಷ್ಟೋ ಪುರುಷರು ತಪಸ್ಯಾರೂಪ

ವಾದ ಯಜ್ಞವನ್ನು ಮಾಡುವವರಾಗಿದ್ದಾರೆ ಹಾಗೂ ಎಷ್ಟೋ ಪುರುಷರು ಅಷ್ಟಾಂಗಯೋಗರೂಪೀ ಯಜ್ಞವನ್ನು ಮಾಡುವವರಾಗಿದ್ದಾರೆ ಮತ್ತು ಎಷ್ಟೋ ಪುರುಷರು ಅಹಿಂಸಾದಿ ತೀಕ್ಷ್ಣವ್ರತಗಳಿಂದ ಕೂಡಿದವರಾಗಿ ಯತ್ನಶೀಲರಾದ ಆ ಪುರುಷರು ಸ್ವಾಧ್ಯಾಯರೂಪೀ ಜ್ಞಾನಯಜ್ಞವನ್ನು ಮಾಡುವವರಾಗಿದ್ದಾರೆ. ॥ ೨೮॥

**ಅಪಾನೇ ಜುಹ್ವತಿ ಪ್ರಾಣಂ ಪ್ರಾಣೇಽಪಾನಂ ತಥಾಪರೇ ।**
**ಪ್ರಾಣಾಪಾನಗತೀ ರುದ್ಧ್ವಾ ಪ್ರಾಣಾಯಾಮಪರಾಯಣಾಃ ॥**
**ಅಪರೇ ನಿಯತಾಹಾರಾಃ ಪ್ರಾಣಾನ್ಪ್ರಾಣೇಷು ಜುಹ್ವತಿ ।**
**ಸರ್ವೇಽಪ್ಯೇತೇ ಯಜ್ಞವಿದೋ ಯಜ್ಞಕ್ಷಪಿತಕಲ್ಮಷಾಃ ॥ ೩೦॥**

ಬೇರೆ ಎಷ್ಟೋ ಯೋಗಿಜನರು ಅಪಾನವಾಯುವಿನಲ್ಲಿ ಪ್ರಾಣವಾಯುವನ್ನು ಹೋಮಮಾಡುತ್ತಾರೆ. ಹಾಗೆಯೇ ಬೇರೆ ಕೆಲವರು ಪ್ರಾಣವಾಯುವಿನಲ್ಲಿ ಅಪಾನವಾಯುವನ್ನು ಹೋಮಮಾಡುತ್ತಾರೆ. ಹಾಗೂ ಬೇರೆ ನಿಯಮಿತ ಆಹಾರವುಳ್ಳ, ಪ್ರಾಣಾಯಾಮಪರಾಯಣರಾದ ಎಷ್ಟೋ ಪುರುಷರು-ಪ್ರಾಣ ಮತ್ತು ಅಪಾನದ ಗತಿಯನ್ನು ತಡೆದು ಪ್ರಾಣಗಳನ್ನು ಪ್ರಾಣಗಳಲ್ಲಿಯೇ ಹೋಮಮಾಡುತ್ತಾರೆ. ಈ ಎಲ್ಲ ಸಾಧಕರು ಯಜ್ಞಗಳ ಮೂಲಕ ಪಾಪಗಳನ್ನು ನಾಶಮಾಡುವವರೂ, ಮತ್ತು ಯಜ್ಞಗಳನ್ನು ತಿಳಿದಿರುವವರೂ ಆಗಿದ್ದಾರೆ.

**ಯಜ್ಞಶಿಷ್ಟಾಮೃತಭುಜೋ ಯಾಂತಿ ಬ್ರಹ್ಮ ಸನಾತನಮ್ ।**
**ನಾಯಂ ಲೋಕೋಽಸ್ತ್ಯಯಜ್ಞಸ್ಯ ಕುತೋಽನ್ಯಃ ಕುರುಸತ್ತಮ**

ಹೇ ಕುರುಶ್ರೇಷ್ಠನಾದ ಅರ್ಜುನನೇ! ಯಜ್ಞದಲ್ಲಿ ಉಳಿದ ಅಮೃತವನ್ನು ಅನುಭವಿಸುವ ಯೋಗಿಗಳು ಸನಾತನ ಪರಬ್ರಹ್ಮ ಪರಮಾತ್ಮನನ್ನು ಹೊಂದುತ್ತಾರೆ ಮತ್ತು ಯಜ್ಞವನ್ನು ಮಾಡದಿರುವ ಪುರುಷನಿಗಾದರೋ ಈ ಮನುಷ್ಯಲೋಕವೂ ಕೂಡ ಸುಖದಾಯಕವಾಗಿಲ್ಲ, ಮತ್ತೆ ಪರಲೋಕವು ಹೇಗೆ ಸುಖದಾಯಕವಾಗಬಲ್ಲದು? ॥ ೩೧॥

**ಏವಂ ಬಹುವಿಧಾ ಯಜ್ಞಾ ವಿತತಾ ಬ್ರಹ್ಮಣೋ ಮುಖೇ ।**
**ಕರ್ಮಜಾನ್ವಿದ್ಧಿ ತಾನ್ಸರ್ವಾನೇವಂ ಜ್ಞಾತ್ವಾ ವಿಮೋಕ್ಷ್ಯಸೇ ॥**

ಇದೇ ಪ್ರಕಾರ ಇನ್ನು ಅನೇಕ ವಿಧವಾದ ಯಜ್ಞಗಳು ವೇದ ವಾಣಿಯಲ್ಲಿ ವಿಸ್ತಾರವಾಗಿ ಹೇಳಲಾಗಿವೆ. ಅವೆಲ್ಲವನ್ನೂ ನೀನು ಮನಸ್ಸು, ಇಂದ್ರಿಯ ಮತ್ತು ಶಾರೀರಿಕ ಕ್ರಿಯೆಗಳ ಮೂಲಕ ನಡೆಯುವುದೆಂದು ತಿಳಿ. ಈ ಪ್ರಕಾರವಾಗಿ ತತ್ತ್ವದಿಂದ ತಿಳಿದು ಅವುಗಳ ಅನುಷ್ಠಾನದ ಮೂಲಕ ನೀನು ಕರ್ಮಬಂಧನದಿಂದ ಸರ್ವಥಾ ಮುಕ್ತನಾಗುವೆ. ॥ ೩೨॥

**ಶ್ರೇಯಾನ್ದ್ರವ್ಯಮಯಾದ್ಯಜ್ಞಾತ್ ಜ್ಞಾನಯಜ್ಞಃ ಪರಂತಪ ।**
**ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ ॥**

ಹೇ ಪರಂತಪ, ಅರ್ಜುನನೇ! ದ್ರವ್ಯಮಯವಾದ ಯಜ್ಞಕ್ಕಿಂತಲೂ ಜ್ಞಾನಯಜ್ಞವು ಅತ್ಯಂತ ಶ್ರೇಷ್ಠವಾಗಿದೆ, ಹಾಗೂ ಯಾವನ್ಮಾತ್ರ ಸಂಪೂರ್ಣಕರ್ಮಗಳು ಜ್ಞಾನದಲ್ಲಿ ಸಮಾಪ್ತಿಯಾಗುತ್ತವೆ. ॥ ೩೩॥

**ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ ।**
**ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ ॥ ೩೪॥**

ಆ ಜ್ಞಾನವನ್ನು ನೀನು ತತ್ತ್ವದರ್ಶಿಗಳಾದ ಜ್ಞಾನಿಗಳ ಬಳಿಗೆ ಹೋಗಿ ತಿಳಿದುಕೋ. ಅವರಿಗೆ ಚೆನ್ನಾಗಿ ಶ್ರದ್ಧೆಯಿಂದ ದಂಡವತ್ ಪ್ರಣಾಮ ಮಾಡುವುದರಿಂದ, ಅವರ ಸೇವೆಮಾಡುವುದರಿಂದ ಮತ್ತು ಕಪಟವನ್ನು ಬಿಟ್ಟು ಸರಳತಾಪೂರ್ವಕವಾಗಿ ಪ್ರಶ್ನೆಮಾಡುವುದರಿಂದ ಪರಮಾತ್ಮತತ್ತ್ವವನ್ನು ಚೆನ್ನಾಗಿ ತಿಳಿದಿರುವ ಆ ಜ್ಞಾನಿಗಳೂ, ಮಹಾತ್ಮರೂ ನಿನಗೆ ತತ್ತ್ವಜ್ಞಾನದ ಉಪದೇಶವನ್ನು ಮಾಡುವರು. ॥ ೩೪॥

**ಯಜ್ಜ್ಞಾತ್ವಾ ನ ಪುನರ್ಮೋಹಮೇವಂ ಯಾಸ್ಯಸಿ ಪಾಂಡವ ।**
**ಯೇನ ಭೂತಾನ್ಯಶೇಷೇಣ ದ್ರಕ್ಷ್ಯಸ್ಯಾತ್ಮನ್ಯಥೋ ಮಯಿ ॥**

ಯಾವುದನ್ನು ತಿಳಿದುಕೊಂಡ ಬಳಿಕ ನೀನು ಪುನಃ ಈ ಪ್ರಕಾರವಾದ ಮೋಹವನ್ನು ಪಡೆಯಲಾರೆಯೋ ಹಾಗೂ ಹೇ ಅರ್ಜುನನೇ! ಯಾವ ಆ ಜ್ಞಾನದ ಮೂಲಕ ನೀನು ಸಮಸ್ತ ಭೂತಗಳನ್ನು ನಿಶ್ಶೇಷಭಾವದಿಂದ, ಮೊದಲು ತನ್ನಲ್ಲಿ ಅನಂತರ ಸಚ್ಚಿದಾನಂದಘನ ಪರಮಾತ್ಮನಾದ ನನ್ನಲ್ಲಿ ನೋಡುವೆ.

**ಅಪಿ ಚೇದಸಿ ಪಾಪೇಭ್ಯಃ ಸರ್ವೇಭ್ಯಃ ಪಾಪಕೃತ್ತಮಃ ।**
**ಸರ್ವಂ ಜ್ಞಾನಪ್ಲವೇನೈವ ವೃಜಿನಂ ಸಂತರಿಷ್ಯಸಿ ॥ ೩೬॥**

ಒಂದು ವೇಳೆ ನೀನು ಬೇರೆಲ್ಲ ಪಾಪಿಗಳಿಗಿಂತಲೂ ಹೆಚ್ಚು ಪಾಪಗಳನ್ನು ಮಾಡಿರುವೆ ಎಂದರೂ ಸಹ ನೀನು ಜ್ಞಾನರೂಪೀ ದೋಣಿಯ ಮೂಲಕ ನಿಸ್ಸಂದೇಹವಾಗಿ ಸಂಪೂರ್ಣವಾದ ಪಾಪ-ಸಮುದ್ರದಿಂದ ಸುಲಭವಾಗಿ ಪಾರಾಗಿಬಿಡುವೆ. ॥ ೩೬॥

**ಯಥೈಧಾಂಸಿ ಸಮಿದ್ಧೋಽಗ್ನಿರ್ಭಸ್ಮಸಾತ್ಕುರುತೇಽರ್ಜುನ ।**
**ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ಕುರುತೇ ತಥಾ ॥ ೩೭॥**

ಏಕೆಂದರೆ ಹೇ ಅರ್ಜುನನೇ! ಹೇಗೆ ಪ್ರಜ್ವಲಿತವಾದ ಅಗ್ನಿಯು ಇಂಧನಗಳನ್ನು ಭಸ್ಮಮಯಮಾಡಿ ಬಿಡುತ್ತದೆಯೋ, ಹಾಗೆಯೇ ಜ್ಞಾನರೂಪೀ ಅಗ್ನಿಯು ಸಂಪೂರ್ಣ ಕರ್ಮಗಳನ್ನು ಭಸ್ಮಮಯಮಾಡಿ ಬಿಡುತ್ತದೆ. ॥ ೩೭॥

**ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ ।**
**ತತ್ಸ್ವಯಂ ಯೋಗಸಂಸಿದ್ಧಃ ಕಾಲೇನಾತ್ಮನಿ ವಿಂದತಿ ॥ ೩೮॥**

ಈ ಜಗತ್ತಿನಲ್ಲಿ ಜ್ಞಾನಕ್ಕೆ ಸಮಾನವಾಗಿ ಪವಿತ್ರಗೊಳಿಸುವಂತಹುದು ನಿಃಸಂದೇಹವಾಗಿ ಯಾವುದೂ ಇಲ್ಲ. ಆ ಜ್ಞಾನವನ್ನು, ಎಷ್ಟೋ ಕಾಲದಿಂದ ಕರ್ಮಯೋಗದ ಮೂಲಕ ಶುದ್ಧಾಂತಃಕರಣವುಳ್ಳ ಮನುಷ್ಯನು, ತನ್ನಿಂದತಾನೇ ಆತ್ಮನಲ್ಲಿ ಪಡೆದುಕೊಳ್ಳುತ್ತಾನೆ. ॥ ೩೮॥

**ಶ್ರದ್ಧಾವಾನ್ ಲಭತೇ ಜ್ಞಾನಂ ತತ್ಪರಃ ಸಂಯತೇಂದ್ರಿಯಃ ।**
**ಜ್ಞಾನಂ ಲಬ್ಧ್ವಾ ಪರಾಂ ಶಾಂತಿಮಚಿರೇಣಾಧಿಗಚ್ಛತಿ ॥ ೩೯॥**

ಜಿತೇಂದ್ರಿಯನೂ, ಸಾಧನಪರಾಯಣನೂ ಮತ್ತು ಶ್ರದ್ಧಾವಂತನೂ ಆದ ಮನುಷ್ಯನು ಜ್ಞಾನವನ್ನು ಪಡೆಯುತ್ತಾನೆ ಹಾಗೂ ಜ್ಞಾನವನ್ನು ಪಡೆದುಕೊಂಡು ಅವನು ವಿಳಂಬವಿಲ್ಲದೆ ಭಗವತ್ಪ್ರಾಪ್ತಿರೂಪೀ ಪರಮ ಶಾಂತಿಯನ್ನು ಹೊಂದುತ್ತಾನೆ.

**ಅಜ್ಞಶ್ಚಾಶ್ರದ್ಧಧಾನಶ್ಚ ಸಂಶಯಾತ್ಮಾ ವಿನಶ್ಯತಿ ।**
**ನಾಯಂ ಲೋಕೋಽಸ್ತಿ ನ ಪರೋ ನ ಸುಖಂ ಸಂಶಯಾತ್ಮನಃ ॥**

ವಿವೇಕಹೀನನೂ, ಶ್ರದ್ಧಾರಹಿತನೂ ಮತ್ತು ಸಂಶಯಯುಕ್ತನಾದ ಮನುಷ್ಯನು ಪರಮಾರ್ಥದಿಂದ ಅವಶ್ಯವಾಗಿ ಭ್ರಷ್ಟನಾಗಿ ಹೋಗುತ್ತಾನೆ. ಇಂತಹ ಸಂಶಯವುಳ್ಳ ಮನುಷ್ಯನಿಗೆ ಇಹಲೋಕವೂ ಇಲ್ಲ, ಪರಲೋಕವೂ ಇಲ್ಲ ಮತ್ತು ಸುಖವೂ ಇಲ್ಲ. ॥ ೪೦॥

**ಯೋಗಸಂನ್ಯಸ್ತಕರ್ಮಾಣಂ ಜ್ಞಾನಸಂಛಿನ್ನಸಂಶಯಮ್ ।**
**ಆತ್ಮವಂತಂ ನ ಕರ್ಮಾಣಿ ನಿಬಧ್ನಂತಿ ಧನಂಜಯ ॥ ೪೧॥**

ಹೇ ಧನಂಜಯನೇ! ಯಾವಾತನು ಕರ್ಮಯೋಗದ ವಿಧಿಯಿಂದ ಸಮಸ್ತ ಕರ್ಮಗಳನ್ನು ಪರಮಾತ್ಮನಿಗೆ ಅರ್ಪಿಸಿದ್ದಾನೆಯೋ ಮತ್ತು ಯಾರು ವಿವೇಕದ ಮೂಲಕ ಸಮಸ್ತ ಸಂಶಯಗಳನ್ನು ನಾಶಮಾಡಿದ್ದಾನೆಯೋ - ಅಂತಹ ಅಂತಃಕರಣವನ್ನು ವಶಮಾಡಿಕೊಂಡಿರುವ ಪುರುಷನನ್ನು ಕರ್ಮಗಳು ಬಂಧಿಸುವುದಿಲ್ಲ. ॥ ೪೧॥

ತಸ್ಮಾದಜ್ಞಾನಸಂಭೂತಂ ಹೃತ್ಸ್ಥಂ ಜ್ಞಾನಾಸಿನಾತ್ಮನಃ ।
ಛಿತ್ತ್ವೈನಂ ಸಂಶಯಂ ಯೋಗಮಾತಿಷ್ಠೋತ್ತಿಷ್ಠ ಭಾರತ ॥

ಆದಕಾರಣ, ಹೇ ಭರತವಂಶೀಯನಾದ ಅರ್ಜುನನೇ! ನೀನು ಹೃದಯದಲ್ಲಿ ಸ್ಥಿತವಾಗಿರುವ ಈ ಅಜ್ಞಾನಜನಿತ ನಿನ್ನ ಸಂಶಯವನ್ನು ವಿವೇಕಜ್ಞಾನರೂಪೀ ಖಡ್ಗದ ಮೂಲಕ ಕತ್ತರಿಸಿ, ಸಮತ್ವರೂಪೀ ಕರ್ಮಯೋಗದಲ್ಲಿ ಸ್ಥಿತನಾಗಿಬಿಡು ಮತ್ತು ಯುದ್ಧಕ್ಕೆ ಎದ್ದುನಿಲ್ಲು. ॥ ೪೨॥

*॥ ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು*
*ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ*
*ಜ್ಞಾನಕರ್ಮಸಂನ್ಯಾಸಯೋಗೋ ನಾಮ ಚತುರ್ಥೋಽಧ್ಯಾಯಃ ॥*

❀ ❀ ❀ ❀ ❀

## ॥ ಅಥ ಪಂಚಮೋಽಧ್ಯಾಯಃ॥

## ಕರ್ಮಸಂನ್ಯಾಸಯೋಗವು

*ಅರ್ಜುನ ಉವಾಚ*

ಸಂನ್ಯಾಸಂ ಕರ್ಮಣಾಂ ಕೃಷ್ಣ ಪುನರ್ಯೋಗಂ ಚ ಶಂಸಸಿ ।
ಯಚ್ಛ್ರೇಯ ಏತಯೋರೇಕಂ ತನ್ಮೇ ಬ್ರೂಹಿ ಸುನಿಶ್ಚಿತಮ್ ॥

ಅರ್ಜುನನು ಹೇಳಿದನು – ಹೇ ಕೃಷ್ಣಾ! ನೀನು ಕರ್ಮಗಳ ಸಂನ್ಯಾಸವನ್ನೂ ಮತ್ತೆ ಪುನಃ ಕರ್ಮಯೋಗವನ್ನೂ ಪ್ರಶಂಸೆ ಮಾಡುತ್ತಿರುವೆ. ಆದ್ದರಿಂದ ಇವೆರಡರಲ್ಲಿ ಯಾವುದಾದ

ರೊಂದು ಚೆನ್ನಾದ, ನಿಶ್ಚಿತವಾದ ಶ್ರೇಯಸ್ಕರ ವಾದ ಸಾಧನ ವಾಗಿದೆಯೋ ಅದನ್ನು ನನಗೆ ಹೇಳು. ॥ ೧॥

ಶ್ರೀಭಗವಾನುವಾಚ

**ಸಂನ್ಯಾಸಃ ಕರ್ಮಯೋಗಶ್ಚ ನಿಃಶ್ರೇಯಸಕರಾವುಭೌ ।**
**ತಯೋಸ್ತು ಕರ್ಮಸಂನ್ಯಾಸಾತ್ಕರ್ಮಯೋಗೋ ವಿಶಿಷ್ಯತೇ ॥**

ಶ್ರೀಭಗವಂತನು ಹೇಳಿದನು – ಕರ್ಮಸಂನ್ಯಾಸ ಮತ್ತು ಕರ್ಮಯೋಗ - ಇವೆರಡೂ ಪರಮ ಕಲ್ಯಾಣಕಾರಕವಾಗಿವೆ. ಆದರೂ ಅವೆರಡರಲ್ಲಿಯೂ ಕೂಡ ಕರ್ಮಸಂನ್ಯಾಸಕ್ಕಿಂತ ಕರ್ಮಯೋಗವು, ಸಾಧನೆಯಲ್ಲಿ ಸುಗಮವಾಗಿರುವುದರಿಂದ ಶ್ರೇಷ್ಠವಾಗಿದೆ. ॥ ೨॥

**ಜ್ಞೇಯಃ ಸ ನಿತ್ಯಸಂನ್ಯಾಸೀ ಯೋ ನ ದ್ವೇಷ್ಟಿ ನ ಕಾಂಕ್ಷತಿ ।**
**ನಿರ್ದ್ವಂದ್ವೋ ಹಿ ಮಹಾಬಾಹೋ ಸುಖಂ ಬಂಧಾತ್ಪ್ರಮುಚ್ಯತೇ**

ಹೇ ಅರ್ಜುನನೇ! ಯಾವ ಪುರುಷನು ಯಾರನ್ನೂ ದ್ವೇಷಿಸುವುದಿಲ್ಲವೋ ಮತ್ತು ಯಾವುದನ್ನೂ ಬಯಸುವುದಿಲ್ಲವೋ, ಆ ಕರ್ಮಯೋಗಿಯು ಸದಾ ಸಂನ್ಯಾಸಿಯೆಂದೇ ತಿಳಿಯಲು ಯೋಗ್ಯನಾಗಿದ್ದಾನೆ, ಏಕೆಂದರೆ ರಾಗ-ದ್ವೇಷಾದಿ ದ್ವಂದ್ವಗಳಿಂದ ರಹಿತನಾದ ಪುರುಷನು ಸುಖಪೂರ್ವಕವಾಗಿ ಸಂಸಾರ ಬಂಧನದಿಂದ ಮುಕ್ತನಾಗಿ ಹೋಗುತ್ತಾನೆ. ॥ ೩॥

**ಸಾಂಖ್ಯಯೋಗೌ ಪೃಥಗ್ಬಾಲಾಃ ಪ್ರವದಂತಿ ನ ಪಂಡಿತಾಃ ।**
**ಏಕಮಪ್ಯಾಸ್ಥಿತಃ ಸಮ್ಯಗುಭಯೋರ್ವಿಂದತೇ ಫಲಮ್ ॥ ೪॥**

ಮೇಲೆ ಹೇಳಿದ ಸಂನ್ಯಾಸವನ್ನು ಮತ್ತು ಕರ್ಮಯೋಗವನ್ನು ಮೂರ್ಖಜನರು ಬೇರೆ-ಬೇರೆಯಾದ ಫಲಗಳನ್ನು ಕೊಡುವುವು ಎಂದು ಹೇಳುತ್ತಾರೆ, ಪಂಡಿತರಾದವರು ಹೇಳುವುದಿಲ್ಲ; ಏಕೆಂದರೆ, ಎರಡರ ಪೈಕಿ ಒಂದರಲ್ಲಿಯಾದರೂ ಸಮ್ಯತ್ಕಾರ ದಿಂದ ಸ್ಥಿತನಾದ ಪುರುಷನು ಎರಡರ ಫಲರೂಪೀ ಪರಮಾತ್ಮನನ್ನು ಪಡೆಯುತ್ತಾನೆ. ॥೪॥

**ಯತ್ಸಾಂಖ್ಯೈಃ ಪ್ರಾಪ್ಯತೇ ಸ್ಥಾನಂ ತದ್ಯೋಗೈರಪಿ ಗಮ್ಯತೇ ।**
**ಏಕಂ ಸಾಂಖ್ಯಂ ಚ ಯೋಗಂ ಚ ಯಃ ಪಶ್ಯತಿ ಸ ಪಶ್ಯತಿ ॥೫॥**

ಜ್ಞಾನಯೋಗಿಗಳ ಮೂಲಕ ಯಾವ ಪರಮಧಾಮವು ಪಡೆಯಲಾಗುತ್ತದೋ, ಕರ್ಮಯೋಗಿಗಳ ಮೂಲಕವೂ ಸಹ ಅದೇ ಪಡೆಯಲಾಗುತ್ತದೆ. ಅದಕ್ಕಾಗಿ ಯಾವ ಪುರುಷನು ಜ್ಞಾನಯೋಗ ಮತ್ತು ಕರ್ಮಯೋಗವನ್ನು, ಫಲರೂಪದಲ್ಲಿ ಒಂದೆಂದು ನೋಡುತ್ತಾನೋ ಅವನೇ ಯಥಾರ್ಥವಾಗಿ ನೋಡುತ್ತಾನೆ. ॥೫॥

**ಸಂನ್ಯಾಸಸ್ತು ಮಹಾಬಾಹೋ ದುಃಖಮಾಪ್ತುಮಯೋಗತಃ ।**
**ಯೋಗಯುಕ್ತೋ ಮುನಿರ್ಬ್ರಹ್ಮ ನಚಿರೇಣಾಧಿಗಚ್ಛತಿ ॥೬॥**

ಆದರೆ ಹೇ ಅರ್ಜುನಾ! ಕರ್ಮಯೋಗವಿಲ್ಲದೆ ಸಂನ್ಯಾಸ ಅರ್ಥಾತ್ - ಮನಸ್ಸು, ಇಂದ್ರಿಯಗಳು ಮತ್ತು ಶರೀರದ ಮೂಲಕ ನಡೆಯುವ ಸಂಪೂರ್ಣ ಕರ್ಮಗಳಲ್ಲಿ ಕರ್ತೃತ್ವದ ತ್ಯಾಗವು ಪ್ರಾಪ್ತವಾಗುವುದು ಕಠಿಣವಾಗಿದೆ ಮತ್ತು

ಭಗವಂತನ ಸ್ವರೂಪವನ್ನು ಮನನ ಮಾಡುವ ಕರ್ಮಯೋಗಿಯು ಪರಬ್ರಹ್ಮ ಪರಮಾತ್ಮನನ್ನು ಶೀಘ್ರವಾಗಿಯೇ ಪಡೆಯುತ್ತಾನೆ.

**ಯೋಗಯುಕ್ತೋ ವಿಶುದ್ಧಾತ್ಮಾ ವಿಜಿತಾತ್ಮಾ ಜಿತೇಂದ್ರಿಯಃ ।**
**ಸರ್ವಭೂತಾತ್ಮಭೂತಾತ್ಮಾ ಕುರ್ವನ್ನಪಿ ನ ಲಿಪ್ಯತೇ ॥ ೭॥**

ಯಾರ ಮನಸ್ಸು ತನ್ನ ವಶದಲ್ಲಿದೆಯೋ, ಯಾರು ಜಿತೇಂದ್ರಿಯನೋ ಹಾಗೂ ವಿಶುದ್ಧವಾದ ಅಂತಃಕರಣ ವುಳ್ಳವನೋ ಮತ್ತು ಸಮಸ್ತ ಪ್ರಾಣಿಗಳ ಆತ್ಮರೂಪೀ ಪರಮಾತ್ಮನೇ ಯಾರ ಆತ್ಮವಾಗಿದ್ದಾನೋ ಅಂತಹ ಕರ್ಮ ಯೋಗಿಯು ಕರ್ಮಮಾಡುತ್ತಿದ್ದರೂ ಕೂಡ ಲಿಪ್ತನಾಗುವುದಿಲ್ಲ.

**ನೈವ ಕಿಂಚಿತ್ಕರೋಮೀತಿ ಯುಕ್ತೋ ಮನ್ಯೇತ ತತ್ತ್ವವಿತ್ ।**
**ಪಶ್ಯನ್ ಶೃಣ್ವನ್ ಸ್ಪೃಶನ್ ಜಿಘ್ರನ್ನಶ್ನನ್ ಗಚ್ಛನ್ ಸ್ವಪನ್ ಶ್ವಸನ್**
**ಪ್ರಲಪನ್ ವಿಸೃಜನ್ ಗೃಹ್ಣನ್ನುನ್ಮಿಷನ್ನಿಮಿಷನ್ನಪಿ ।**
**ಇಂದ್ರಿಯಾಣೀಂದ್ರಿಯಾರ್ಥೇಷು ವರ್ತಂತ ಇತಿ ಧಾರಯನ್**

ತತ್ತ್ವವನ್ನು ಅರಿತಿರುವ ಸಾಂಖ್ಯಯೋಗಿಯಾದರೋ ನೋಡುವಾಗಲೂ, ಕೇಳುವಾಗಲೂ, ಮುಟ್ಟುವಾಗಲೂ, ಮೂಸುವಾಗಲೂ, ಭೋಜನ ಮಾಡುವಾಗಲೂ, ನಡೆಯು ವಾಗಲೂ, ನಿದ್ರಿಸುವಾಗಲೂ, ಉಸಿರಾಡುವಾಗಲೂ, ಮಾತ ನಾಡುವಾಗಲೂ, ತ್ಯಾಗಮಾಡುವಾಗಲೂ, ತೆಗೆದುಕೊಳ್ಳು ವಾಗಲೂ ಹಾಗೂ ಕಣ್ಣುಗಳನ್ನು ತೆರೆಯುವಾಗಲೂ ಮತ್ತು

ಮುಚ್ಚಿಕೊಳ್ಳುವಾಗಲೂ ಕೂಡ ಎಲ್ಲ ಇಂದ್ರಿಯಗಳು ತಮ್ಮ-ತಮ್ಮ ಅರ್ಥಗಳಲ್ಲಿ ವರ್ತಿಸುತ್ತಿರುತ್ತವೆ - ಈ ಪ್ರಕಾರವಾಗಿ ತಿಳಿದುಕೊಂಡು ನಿಸ್ಸಂದೇಹವಾಗಿ ನಾನು ಏನನ್ನೂ ಮಾಡುವುದಿಲ್ಲ ಎಂಬುದಾಗಿ ತಿಳಿಯಬೇಕು. ॥ ೮-೯॥

**ಬ್ರಹ್ಮಣ್ಯಾಧಾಯ ಕರ್ಮಾಣಿ ಸಂಗಂ ತ್ಯಕ್ತ್ವಾ ಕರೋತಿ ಯಃ ।**
**ಲಿಪ್ಯತೇ ನ ಸ ಪಾಪೇನ ಪದ್ಮಪತ್ರಮಿವಾಂಭಸಾ ॥ ೧೦॥**

ಯಾವ ಪುರುಷನು ಎಲ್ಲ ಕರ್ಮಗಳನ್ನು ಪರಮಾತ್ಮನಲ್ಲಿ ಅರ್ಪಣೆ ಮಾಡಿ ಮತ್ತು ಆಸಕ್ತಿಯನ್ನು ತ್ಯಾಗಮಾಡಿ ಕರ್ಮವನ್ನು ಮಾಡುತ್ತಾನೋ ಆ ಪುರುಷನು ನೀರಿನಲ್ಲಿ ಇರುವ ಕಮಲ ದೆಲೆಯು ನೀರಿನಿಂದ ಲಿಪ್ತವಾಗುವುದಿಲ್ಲವೋ ಅದರಂತೆ ಪಾಪದಿಂದ ಲಿಪ್ತನಾಗುವುದಿಲ್ಲ. ॥ ೧೦॥

**ಕಾಯೇನ ಮನಸಾ ಬುದ್ಧ್ಯಾ ಕೇವಲೈರಿಂದ್ರಿಯೈರಪಿ ।**
**ಯೋಗಿನಃ ಕರ್ಮ ಕುರ್ವಂತಿ ಸಂಗಂ ತ್ಯಕ್ತ್ವಾತ್ಮಶುದ್ಧಯೇ ॥**

ಕರ್ಮಯೋಗಿಗಳು ಮಮತ್ವಬುದ್ಧಿರಹಿತರಾಗಿ ಕೇವಲ ಇಂದ್ರಿಯಗಳು, ಮನಸ್ಸು, ಬುದ್ಧಿ ಮತ್ತು ಶರೀರದ ಮೂಲಕ ಆಗುವ ಎಲ್ಲ ಕ್ರಿಯೆಗಳಲ್ಲಿ ಆಸಕ್ತಿಯನ್ನು ತ್ಯಾಗಮಾಡಿ ಅಂತಃಕರಣದ ಶುದ್ಧಿಗಾಗಿ ಕರ್ಮವನ್ನು ಮಾಡುತ್ತಾರೆ. ॥ ೧೧॥

**ಯುಕ್ತಃ ಕರ್ಮಫಲಂ ತ್ಯಕ್ತ್ವಾ ಶಾಂತಿಮಾಪ್ನೋತಿ ನೈಷ್ಠಿಕೀಮ್ ।**
**ಅಯುಕ್ತಃ ಕಾಮಕಾರೇಣ ಫಲೇ ಸಕ್ತೋ ನಿಬಧ್ಯತೇ ॥ ೧೨॥**

ಕರ್ಮಯೋಗಿಯು ಕರ್ಮಗಳ ಫಲಗಳನ್ನು ತ್ಯಾಗಮಾಡಿ ಭಗವತ್ಪ್ರಾಪ್ತಿ ರೂಪವಾದ ಶಾಂತಿಯನ್ನು ಪಡೆಯುತ್ತಾನೆ ಮತ್ತು ಸಕಾಮಪುರುಷನು ಕಾಮನೆಯ ಪ್ರೇರಣೆಯಿಂದ ಫಲದಲ್ಲಿ ಆಸಕ್ತನಾಗಿ ಬಂಧಿತನಾಗುತ್ತಾನೆ.॥ ೧೨॥

**ಸರ್ವಕರ್ಮಾಣಿ ಮನಸಾ ಸಂನ್ಯಸ್ಯಾಸ್ತೇ ಸುಖಂ ವಶೀ ।**
**ನವದ್ವಾರೇ ಪುರೇ ದೇಹೀ ನೈವ ಕುರ್ವನ್ನ ಕಾರಯನ್ ॥ ೧೩॥**

ಅಂತಃಕರಣವು ಯಾರ ವಶದಲ್ಲಿದೆಯೋ ಅಂತಹ ಸಾಂಖ್ಯಯೋಗವನ್ನು ಆಚರಿಸುವ ಪುರುಷನು ಮಾಡದೇ ಮತ್ತು ಮಾಡಿಸದೇ ಇರುತ್ತಲೇ ನವದ್ವಾರಗಳುಳ್ಳ ಶರೀರ ರೂಪೀ ಪುರದಲ್ಲಿ ಎಲ್ಲ ಕರ್ಮಗಳನ್ನು ಮನಸ್ಸಿನಿಂದ ತ್ಯಜಿಸಿ, ಆನಂದಪೂರ್ವಕವಾಗಿ ಸಚ್ಚಿದಾನಂದಘನ ಪರಮಾತ್ಮನ ಸ್ವರೂಪದಲ್ಲಿ ಸ್ಥಿತನಾಗಿರುತ್ತಾನೆ. ॥ ೧೩॥

**ನ ಕರ್ತೃತ್ವಂ ನ ಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ ।**
**ನ ಕರ್ಮಫಲಸಂಯೋಗಂ ಸ್ವಭಾವಸ್ತು ಪ್ರವರ್ತತೇ ॥ ೧೪॥**

ಪರಮೇಶ್ವರನು ಮನುಷ್ಯರ ಕರ್ತೃತ್ವವಾಗಲೀ ಕರ್ಮಗಳಾಗಲೀ ಮತ್ತು ಕರ್ಮಫಲಸಂಯೋಗವಾಗಲೀ ರಚಿಸುವುದಿಲ್ಲ; ಆದರೆ ಪ್ರಕೃತಿಯೇ ವರ್ತಿಸುತ್ತಿದೆ. ಅರ್ಥಾತ್ ಗುಣಗಳೇ ಗುಣಗಳಲ್ಲಿ ವರ್ತಿಸುತ್ತಿವೆ. ॥ ೧೪॥

**ನಾದತ್ತೇ ಕಸ್ಯಚಿತ್ಪಾಪಂ ನ ಚೈವ ಸುಕೃತಂ ವಿಭುಃ ।**
**ಅಜ್ಞಾನೇನಾವೃತಂ ಜ್ಞಾನಂ ತೇನ ಮುಹ್ಯಂತಿ ಜಂತವಃ ॥ ೧೫ ॥**

ಸರ್ವವ್ಯಾಪಿಯಾದ ಪರಮೇಶ್ವರನು ಯಾರ ಪಾಪಕರ್ಮವನ್ನಾಗಲೀ ಮತ್ತು ಶುಭಕರ್ಮವನ್ನಾಗಲೀ ಸ್ವೀಕರಿಸುವುದಿಲ್ಲ. ಆದರೆ ಅಜ್ಞಾನದ ಮೂಲಕ ಜ್ಞಾನವು ಮುಚ್ಚಲ್ಪಟ್ಟಿದೆ, ಅದರಿಂದಲೇ ಎಲ್ಲ ಅಜ್ಞಾನೀ ಮನುಷ್ಯರು ಮೋಹಿತರಾಗುತ್ತಿದ್ದಾರೆ. ॥ ೧೫॥

**ಜ್ಞಾನೇನ ತು ತದಜ್ಞಾನಂ ಯೇಷಾಂ ನಾಶಿತಮಾತ್ಮನಃ ।**
**ತೇಷಾಮಾದಿತ್ಯವಜ್ಜ್ಞಾನಂ ಪ್ರಕಾಶಯತಿ ತತ್ಪರಮ್ ॥ ೧೬॥**

ಆದರೆ ಯಾರ ಆ ಅಜ್ಞಾನವು ಪರಮಾತ್ಮನ ತತ್ತ್ವಜ್ಞಾನದ ಮೂಲಕ ನಾಶಮಾಡಲ್ಪಟ್ಟಿದೆಯೋ ಅವನ ಆ ಜ್ಞಾನವು ಸೂರ್ಯನಂತೆ ಆ ಸಚ್ಚಿದಾನಂದಘನನಾದ ಪರಮಾತ್ಮನನ್ನು ಪ್ರಕಾಶಗೊಳಿಸುತ್ತದೆ. ॥ ೧೬॥

**ತದ್ಬುದ್ಧಯಸ್ತದಾತ್ಮಾನಸ್ತನ್ನಿಷ್ಠಾಸ್ತತ್ಪರಾಯಣಾಃ ।**
**ಗಚ್ಛಂತ್ಯಪುನರಾವೃತ್ತಿಂ ಜ್ಞಾನನಿರ್ಧೂತಕಲ್ಮಷಾಃ ॥ ೧೭॥**

ಯಾರ ಮನಸ್ಸು ಪರಮಾತ್ಮನಲ್ಲಿ ತದ್ರೂಪವಾಗಿದೆಯೋ, ಯಾರ ಬುದ್ಧಿಯು ಪರಮಾತ್ಮನಲ್ಲಿ ತದ್ರೂಪವಾಗಿದೆಯೋ ಮತ್ತು ಸಚ್ಚಿದಾನಂದಘನ ಪರಮಾತ್ಮನಲ್ಲಿಯೇ ಯಾರಿಗೆ ನಿರಂತರವಾದ ಏಕೀಭಾವದ ಸ್ಥಿತಿಯಿದೆಯೋ ಅಂತಹ ಪರಮಾತ್ಮ ಪರಾಯಣರಾದ ಪುರುಷರು ಜ್ಞಾನದ ಮೂಲಕ ಪಾಪರಹಿತರಾಗಿ ಅಪುನರಾವೃತ್ತಿಯನ್ನು ಅರ್ಥಾತ್ ಪರಮ ಗತಿಯನ್ನು ಪಡೆಯುತ್ತಾರೆ. ॥ ೧೭ ॥

**ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ ।**
**ಶುನಿ ಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ ॥ ೧೮॥**

ಆ ಜ್ಞಾನಿಗಳಾದವರು ವಿದ್ಯಾ ಮತ್ತು ವಿನಯಯುಕ್ತರಾದ ಬ್ರಾಹ್ಮಣನಲ್ಲಿ ಹಾಗೂ ಹಸು, ಆನೆ, ನಾಯಿ ಮತ್ತು ಚಾಂಡಾಲನಲ್ಲಿಯೂ ಸಹ ಸಮದರ್ಶಿಗಳಾಗಿಯೇ ಇರುತ್ತಾರೆ. ॥ ೧೮॥

**ಇಹೈವ ತೈರ್ಜಿತಃ ಸರ್ಗೋ ಯೇಷಾಂ ಸಾಮ್ಯೇ ಸ್ಥಿತಂ ಮನಃ।**
**ನಿರ್ದೋಷಂ ಹಿ ಸಮಂ ಬ್ರಹ್ಮ ತಸ್ಮಾದ್ಬ್ರಹ್ಮಣಿ ತೇ ಸ್ಥಿತಾಃ ॥**

ಯಾರ ಮನಸ್ಸು ಸಮಭಾವದಲ್ಲಿ ಸ್ಥಿತವಾಗಿದೆಯೋ, ಅವರ ಮೂಲಕ ಈ ಜೀವಿತ ಅವಸ್ಥೆಯಲ್ಲಿಯೇ ಸಮಸ್ತ ಜಗತ್ತು ಗೆಲ್ಲಲ್ಪಟ್ಟಿರುತ್ತದೆ; ಏಕೆಂದರೆ ಸಚ್ಚಿದಾನಂದಘನ ಪರಮಾತ್ಮನು ನಿರ್ದೋಷನೂ ಮತ್ತು ಸಮನೂ ಆಗಿದ್ದಾನೆ. ಇದರಿಂದಾಗಿ ಅವರು ಸಚ್ಚಿದಾನಂದಘನನಾದ ಪರಮಾತ್ಮನಲ್ಲಿಯೇ ಸ್ಥಿತವಾಗಿರುತ್ತಾರೆ. ॥ ೧೯॥

**ನ ಪ್ರಹೃಷ್ಯೇತ್ಪ್ರಿಯಂ ಪ್ರಾಪ್ಯ ನೋದ್ವಿಜೇತ್ಪ್ರಾಪ್ಯ ಚಾಪ್ರಿಯಮ್**
**ಸ್ಥಿರಬುದ್ಧಿರಸಂಮೂಢೋ ಬ್ರಹ್ಮವಿದ್ ಬ್ರಹ್ಮಣಿ ಸ್ಥಿತಃ ॥ ೨೦॥**

ಯಾವ ಪುರುಷನು ಪ್ರಿಯವಾದುದನ್ನು ಪಡೆದರೂ ಹರ್ಷಿತನಾಗುವುದಿಲ್ಲವೋ ಮತ್ತು ಅಪ್ರಿಯವು ದೊರೆತಾಗಲೂ ಉದ್ವಿಗ್ನನಾಗುವುದಿಲ್ಲವೋ ಆ ಸ್ಥಿರಬುದ್ಧಿಯುಳ್ಳ, ಸಂಶಯ ರಹಿತನಾದ, ಬ್ರಹ್ಮವೇತ್ತನಾದ ಪುರುಷನು ಸಚ್ಚಿದಾನಂದಘನ

ಪರಬ್ರಹ್ಮಪರಮಾತ್ಮನಲ್ಲಿ ಏಕೀಭಾವದಿಂದ ಸದಾ ಸ್ಥಿತನಾಗಿರುತ್ತಾನೆ. ॥ ೨೦ ॥

**ಬಾಹ್ಯಸ್ಪರ್ಶೇಷ್ವಸಕ್ತಾತ್ಮಾ ವಿಂದತ್ಯಾತ್ಮನಿ ಯತ್ಸುಖಮ್ ।**
**ಸ ಬ್ರಹ್ಮಯೋಗಯುಕ್ತಾತ್ಮಾ ಸುಖಮಕ್ಷಯಮಶ್ನುತೇ ॥ ೨೧॥**

ಹೊರಗಿನ ವಿಷಯಗಳಲ್ಲಿ ಆಸಕ್ತಿರಹಿತವಾದ ಅಂತಃಕರಣವುಳ್ಳ ಸಾಧಕನು ಆತ್ಮನಲ್ಲಿ ಸ್ಥಿತವಾದ ಯಾವ ಧ್ಯಾನಜನಿತ ಸಾತ್ವಿಕ ಆನಂದವಿದೆಯೋ ಅದನ್ನು ಪಡೆಯುತ್ತಾನೆ. ಅನಂತರ ಆ ಸಚ್ಚಿದಾನಂದಘನನಾದ ಪರಬ್ರಹ್ಮ ಪರಮಾತ್ಮನ ಧ್ಯಾನರೂಪವಾದ ಯೋಗದಲ್ಲಿ ಅಭಿನ್ನ ಭಾವದಿಂದ ಸ್ಥಿತನಾದ ಪುರುಷನು ಅಕ್ಷಯವಾದ ಆನಂದ ದವನ್ನು ಅನುಭವಿಸುತ್ತಾನೆ.

**ಯೇ ಹಿ ಸಂಸ್ಪರ್ಶಜಾ ಭೋಗಾ ದುಃಖಯೋನಯ ಏವ ತೇ।**
**ಆದ್ಯಂತವಂತಃ ಕೌಂತೇಯ ನ ತೇಷು ರಮತೇ ಬುಧಃ ॥ ೨೨॥**

ಈ ಇಂದ್ರಿಯ ಹಾಗೂ ವಿಷಯಗಳ ಸಂಯೋಗದಿಂದ ಉತ್ಪನ್ನವಾಗುವ ಯಾವ ಸಮಸ್ತ ಭೋಗಗಳಿವೆಯೋ ಅವು ಒಂದೊಮ್ಮೆ ವಿಷಯಿ-ಪುರುಷರಿಗೆ ಸುಖರೂಪವಾಗಿ ಭಾಸವಾಗುತ್ತವೆಯಾದರೂ ಸಹ ನಿಸ್ಸಂದೇಹವಾಗಿ ದುಃಖಕ್ಕೆ ಕಾರಣವಾಗಿವೆ ಮತ್ತೂ ಆದಿ-ಅಂತ್ಯವುಳ್ಳವುಗಳು ಅರ್ಥಾತ್ ಅನಿತ್ಯವಾಗಿವೆ. ಅದಕ್ಕಾಗಿ ಹೇ ಅರ್ಜುನಾ! ಬುದ್ಧಿವಂತರಾದ, ವಿವೇಕ ಪುರುಷರು ಅವುಗಳಲ್ಲಿ ರಮಿಸುವುದಿಲ್ಲ. ॥ ೨೨॥

**ಶಕ್ನೋತೀಹೈವ ಯಃ ಸೋಢುಂ ಪ್ರಾಕ್ಶರೀರವಿಮೋಕ್ಷಣಾತ್ ।**
**ಕಾಮಕ್ರೋಧೋದ್ಭವಂ ವೇಗಂ ಸ ಯುಕ್ತಃ ಸ ಸುಖೀ ನರಃ ॥**

ಯಾವ ಸಾಧಕನು ಈ ಮನುಷ್ಯ ಶರೀರದಲ್ಲಿ ಶರೀರ ನಾಶವಾಗುವುದಕ್ಕೆ ಮೊದಲೇ ಕಾಮ-ಕ್ರೋಧಗಳಿಂದ ಉತ್ಪನ್ನವಾಗುವ ವೇಗವನ್ನು ಸಹಿಸುವುದರಲ್ಲಿ ಸಮರ್ಥನಾಗುತ್ತಾನೆಯೋ ಆ ಪುರುಷನೇ ಯೋಗಿಯು, ಮತ್ತು ಅವನೇ ಸುಖಿಯಾಗಿದ್ದಾನೆ. ॥ ೨೩॥

**ಯೋಽನ್ತಃಸುಖೋಽನ್ತರಾರಾಮಸ್ತಥಾನ್ತರ್ಜ್ಯೋತಿರೇವ ಯಃ।**
**ಸ ಯೋಗೀ ಬ್ರಹ್ಮನಿರ್ವಾಣಂ ಬ್ರಹ್ಮಭೂತೋಽಧಿಗಚ್ಛತಿ ॥**

ಯಾವ ಪುರುಷನು ಬ್ರಹ್ಮನಿಗಿಂತ ಬೇರೆಯಾವುದೂ ಇಲ್ಲವೇ ಇಲ್ಲವೆಂದು ನಿಶ್ಚಯಮಾಡಿ ಸಮಷ್ಟಿ ಅಂತರಾತ್ಮನಲ್ಲಿಯೇ ಸುಖವುಳ್ಳವನಾಗಿದ್ದಾನೋ, ಆತ್ಮನಲ್ಲಿಯೇ ರಮಿಸುವವನಾಗಿದ್ದಾನೋ ಹಾಗೂ ಯಾರು ಆತ್ಮನಲ್ಲಿಯೇ ಜ್ಞಾನವುಳ್ಳವನಾಗಿದ್ದಾನೋ ಅವನು ಸಚ್ಚಿದಾನಂದಘನನಾದ ಪರಬ್ರಹ್ಮ ಪರಮಾತ್ಮನ ಜೊತೆಯಲ್ಲಿ ಏಕೀಭಾವವನ್ನು ಪಡೆದ ಸಾಂಖ್ಯಯೋಗಿಯು ಶಾಂತಬ್ರಹ್ಮನನ್ನು ಪಡೆಯುತ್ತಾನೆ.

**ಲಭಂತೇ ಬ್ರಹ್ಮನಿರ್ವಾಣಮೃಷಯಃ ಕ್ಷೀಣಕಲ್ಮಷಾಃ ।**
**ಛಿನ್ನದ್ವೈಧಾ ಯತಾತ್ಮಾನಃ ಸರ್ವಭೂತಹಿತೇ ರತಾಃ ॥ ೨೫॥**

ಯಾರ ಎಲ್ಲ ಪಾಪಗಳು ನಾಶವಾಗಿ ಹೋಗಿವೆಯೋ, ಯಾರ ಸಂಶಯಗಳೆಲ್ಲ ಜ್ಞಾನದ ಮೂಲಕ ನಿವೃತ್ತಿ ಹೊಂದಿವೆಯೋ, ಯಾರು ಸಂಪೂರ್ಣ ಪ್ರಾಣಿಗಳ ಹಿತದಲ್ಲಿ ನಿರತರಾಗಿದ್ದಾರೋ ಮತ್ತು ಯಾರ ಮನಸ್ಸು ಗೆಲ್ಲಲ್ಪಟ್ಟು ನಿಶ್ಚಲ ಭಾವದಿಂದ ಪರಮಾತ್ಮನಲ್ಲಿ ಸ್ಥಿತವಾಗಿದೆಯೋ ಆ ಬ್ರಹ್ಮವೇತ್ತರಾದ ಪುರುಷರು ಶಾಂತಬ್ರಹ್ಮವನ್ನು ಪಡೆಯುತ್ತಾರೆ. ॥ ೨೫॥

**ಕಾಮಕ್ರೋಧವಿಯುಕ್ತಾನಾಂ ಯತೀನಾಂ ಯತಚೇತಸಾಮ್ ।**
**ಅಭಿತೋ ಬ್ರಹ್ಮನಿರ್ವಾಣಂ ವರ್ತತೇ ವಿದಿತಾತ್ಮನಾಮ್ ॥**

ಕಾಮಕ್ರೋಧರಹಿತರೂ, ಚಿತ್ತವನ್ನು ಗೆದ್ದಿರುವವರೂ, ಪರಬ್ರಹ್ಮ ಪರಮಾತ್ಮನ ಸಾಕ್ಷಾತ್ಕಾರ ಮಾಡಿಕೊಂಡವರೂ ಆದ ಜ್ಞಾನೀ ಪುರುಷರಿಗೆ ಎಲ್ಲ ಕಡೆಗಳಿಂದ ಶಾಂತ ಪರಬ್ರಹ್ಮ ಪರಮಾತ್ಮನೇ ಪರಿಪೂರ್ಣನಾಗಿದ್ದಾನೆ. ॥ ೨೬॥

**ಸ್ಪರ್ಶಾನ್ ಕೃತ್ವಾ ಬಹಿರ್ಬಾಹ್ಯಾಂಶ್ಚಕ್ಷುಶ್ಚೈವಾಂತರೇ ಭ್ರುವೋಃ।**
**ಪ್ರಾಣಾಪಾನೌ ಸಮೌ ಕೃತ್ವಾ ನಾಸಾಭ್ಯಂತರಚಾರಿಣೌ ॥ ೨೭॥**
**ಯತೇಂದ್ರಿಯಮನೋಬುದ್ಧಿರ್ಮುನಿರ್ಮೋಕ್ಷಪರಾಯಣಃ ।**
**ವಿಗತೇಚ್ಛಾಭಯಕ್ರೋಧೋ ಯಃ ಸದಾ ಮುಕ್ತ ಏವ ಸಃ ॥**

ಹೊರಗಿನ ವಿಷಯ ಭೋಗಗಳನ್ನು ಚಿಂತಿಸದೆ ಇದ್ದು, ಹೊರಗೆಯೇ ತ್ಯಜಿಸಿ ಮತ್ತು ಕಣ್ಣುಗಳ ದೃಷ್ಟಿಯನ್ನು ಭ್ರೂಮಧ್ಯ

ದಲ್ಲಿ ಸ್ಥಿರವಾಗಿಸಿ ಹಾಗೂ ಮೂಗಿನಲ್ಲಿ ಸಂಚರಿಸುವ ಪ್ರಾಣ ಮತ್ತು ಅಪಾನ ವಾಯುವನ್ನು ಸಮವಾಗಿಸಿ, ಯಾರ ಇಂದ್ರಿಯಗಳು, ಮನಸ್ಸು ಮತ್ತು ಬುದ್ಧಿ ಗೆಲ್ಲಲ್ಪಟ್ಟಿವೆಯೋ ಅಂತಹ ಯಾವ ಮೋಕ್ಷಪರಾಯಣನಾದ ಮುನಿಯು ಇಚ್ಛೆ, ಭಯ ಮತ್ತು ಕ್ರೋಧಗಳಿಂದ ರಹಿತನಾಗಿದ್ದಾನೆಯೋ ಅವನು ಸದಾ ಮುಕ್ತನೇ ಆಗಿದ್ದಾನೆ. ॥ ೨೭ - ೨೮ ॥

**ಭೋಕ್ತಾರಂ ಯಜ್ಞತಪಸಾಂ ಸರ್ವಲೋಕಮಹೇಶ್ವರಮ್ ।**
**ಸುಹೃದಂ ಸರ್ವಭೂತಾನಾಂ ಜ್ಞಾತ್ವಾ ಮಾಂ ಶಾಂತಿಮೃಚ್ಛತಿ ॥**

ನನ್ನ ಭಕ್ತನು ನನ್ನನ್ನು ಎಲ್ಲ ಯಜ್ಞ ಮತ್ತು ತಪಸ್ಸುಗಳನ್ನು ಭೋಗಿಸುವವನೂ, ಸಂಪೂರ್ಣ ಲೋಕಗಳ ಒಡೆಯರಿಗೂ ಒಡೆಯನೂ ಹಾಗೂ ಸಂಪೂರ್ಣ ಪ್ರಾಣಿಗಳ ಸುಹೃದನೂ ಅರ್ಥಾತ್ ಸ್ವಾರ್ಥ ರಹಿತ ದಯಾಳುವೂ ಮತ್ತು ಪ್ರೇಮಿಯೂ ಎಂದು ತತ್ತ್ವದಿಂದ ತಿಳಿದುಕೊಂಡು ಶಾಂತಿಯನ್ನು ಪಡೆಯುತ್ತಾನೆ.

*ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು*
*ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ*
*ಕರ್ಮಸಂನ್ಯಾಸಯೋಗೋನಾಮ ಪಂಚಮೋಽಧ್ಯಾಯಃ ॥ ೫॥*



## ॥ ಅಥ ಷಷ್ಠೋಽಧ್ಯಾಯಃ॥
## ಆತ್ಮಸಂಯಮಯೋಗವು

ಶ್ರೀಭಗವಾನುವಾಚ

**ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿ ಯಃ ।**
**ಸ ಸಂನ್ಯಾಸೀ ಚ ಯೋಗೀ ಚ ನ ನಿರಗ್ನಿರ್ನ ಚಾಕ್ರಿಯಃ ॥ ೧॥**

ಶ್ರೀಭಗವಂತನು ಹೇಳಿದನು – ಯಾವ ಪುರುಷನು ಕರ್ಮಫಲದ ಆಶ್ರಯವನ್ನು ಪಡೆಯದೆ ಕರ್ತವ್ಯ ಕರ್ಮವನ್ನು ಮಾಡುತ್ತಾನೋ ಅವನು ಸಂನ್ಯಾಸಿ ಮತ್ತು ಯೋಗಿಯಾಗಿದ್ದಾನೆ; ಮತ್ತು ಕೇವಲ ಅಗ್ನಿಯನ್ನು ತ್ಯಜಿಸಿದವನು ಸಂನ್ಯಾಸಿಯಲ್ಲ ಹಾಗೂ ಕೇವಲ ಕ್ರಿಯೆಗಳನ್ನು ತ್ಯಜಿಸಿದವನೂ ಯೋಗಿಯಲ್ಲ.

**ಯಂ ಸಂನ್ಯಾಸಮಿತಿ ಪ್ರಾಹುರ್ಯೋಗಂ ತಂ ವಿದ್ಧಿ ಪಾಂಡವ**
**ನ ಹ್ಯಸಂನ್ಯಸ್ತಸಂಕಲ್ಪೋ ಯೋಗೀ ಭವತಿ ಕಶ್ಚನ ॥ ೨॥**

ಹೇ ಅರ್ಜುನಾ ! ಯಾವುದನ್ನು ಸಂನ್ಯಾಸವೆಂಬುದಾಗಿ ಹೇಳುತ್ತಾರೆಯೋ ಅದನ್ನೇ ನೀನು ಯೋಗವೆಂದು ತಿಳಿ. ಏಕೆಂದರೆ ಸಂಕಲ್ಪಗಳ ತ್ಯಾಗವನ್ನು ಮಾಡದಿರುವ ಯಾವ ಪುರುಷನೂ ಕೂಡ ಯೋಗಿಯಾಗುವುದಿಲ್ಲ. ॥ ೨॥

**ಆರುರುಕ್ಷೋರ್ಮುನೇರ್ಯೋಗಂ ಕರ್ಮ ಕಾರಣಮುಚ್ಯತೇ ।**
**ಯೋಗಾರೂಢಸ್ಯ ತಸ್ಯೈವ ಶಮಃ ಕಾರಣಮುಚ್ಯತೇ ॥ ೩॥**

ಯೋಗದಲ್ಲಿ ಆರೂಢನಾಗಬೇಕೆಂಬ ಇಚ್ಛೆಯುಳ್ಳ ಮನನಶೀಲನಾದ ಪುರುಷನಿಗೆ ನಿಷ್ಕಾಮಭಾವದಿಂದ ಕರ್ಮ

ಮಾಡುವುದೇ ಯೋಗದ ಪ್ರಾಪ್ತಿಯಲ್ಲಿ ಕಾರಣವೆಂದು ಹೇಳಲಾಗುತ್ತದೆ ಮತ್ತು ಯೋಗಾರೂಢನಾದನಂತರ ಆ ಯೋಗಾರೂಢ ಪುರುಷನಿಗೆ ಯಾವುದು ಸರ್ವಸಂಕಲ್ಪಗಳ ಅಭಾವವಿದೆಯೋ ಅದೇ ಅವನ ಶ್ರೇಯಸ್ಸಿಗೆ ಕಾರಣವೆಂದು ಹೇಳಲಾಗುತ್ತದೆ. ॥ ೩॥

**ಯದಾ ಹಿ ನೇಂದ್ರಿಯಾರ್ಥೇಷು ನ ಕರ್ಮಸ್ವನುಷಜ್ಜತೇ ।**
**ಸರ್ವಸಂಕಲ್ಪಸಂನ್ಯಾಸೀ ಯೋಗಾರೂಢಸ್ತದೋಚ್ಯತೇ ॥ ೪॥**

ಯಾವ ಕಾಲದಲ್ಲಿ ಇಂದ್ರಿಯಗಳ ಭೋಗಗಳಲ್ಲಿ ಮತ್ತು ಕರ್ಮಗಳಲ್ಲಿಯೂ ಆಸಕ್ತನಾಗುವುದಿಲ್ಲವೋ ಆ ಕಾಲದಲ್ಲಿ ಸರ್ವ ಸಂಕಲ್ಪಗಳನ್ನು ತ್ಯಾಗಮಾಡಿದ ಪುರುಷನು ಯೋಗಾರೂಢನೆಂದು ಹೇಳಲ್ಪಡುತ್ತಾನೆ. ॥ ೪॥

**ಉದ್ಧರೇದಾತ್ಮನಾತ್ಮಾನಂ ನಾತ್ಮಾನಮವಸಾದಯೇತ್ ।**
**ಆತ್ಮೈವ ಹ್ಯಾತ್ಮನೋ ಬಂಧುರಾತ್ಮೈವ ರಿಪುರಾತ್ಮನಃ ॥ ೫॥**

ತನ್ನ ಮೂಲಕ ತನ್ನನ್ನು ಸಂಸಾರಸಾಗರದಿಂದ ಉದ್ಧಾರ ಮಾಡಿಕೊಳ್ಳಲಿ ಮತ್ತು ತನ್ನನ್ನು ಅಧೋಗತಿಗೆ ಕೊಂಡೊಯ್ಯದಿರಲಿ. ಏಕೆಂದರೆ ಈ ಮನುಷ್ಯನು ತನಗೆ ತಾನೇ ಮಿತ್ರನೂ, ಮತ್ತು ತನಗೆ ತಾನೇ ಶತ್ರುವೂ ಆಗಿದ್ದಾನೆ. ॥ ೫॥

**ಬಂಧುರಾತ್ಮಾತ್ಮನಸ್ತಸ್ಯ ಯೇನಾತ್ಮೈವಾತ್ಮನಾ ಜಿತಃ ।**
**ಅನಾತ್ಮನಸ್ತು ಶತ್ರುತ್ವೇ ವರ್ತೇತಾತ್ಮೈವ ಶತ್ರುವತ್ ॥ ೬॥**

ಯಾವ ಜೀವಾತ್ಮನ ಮೂಲಕ ಮನಸ್ಸು ಮತ್ತು ಇಂದ್ರಿಯಗಳ ಸಹಿತವಾದ ಶರೀರವು ಗೆಲ್ಲಲ್ಪಟ್ಟಿದೆಯೋ ಆ ಜೀವಾತ್ಮನಿಗಾದರೋ ಅವನು ತನಗೆ ತಾನೇ ಮಿತ್ರನಾಗಿದ್ದಾನೆ ಮತ್ತು ಯಾರ ಮೂಲಕ ಮನಸ್ಸು ಹಾಗೂ ಇಂದ್ರಿಯಗಳ ಸಹಿತವಾದ ಶರೀರವು ಗೆಲ್ಲಲ್ಪಟ್ಟಿಲ್ಲವೋ ಅವನಿಗೆ ಅವನು ಶತ್ರುವಿನಂತೆ ಶತ್ರುತ್ವದಲ್ಲಿ ವರ್ತಿಸುತ್ತಾನೆ. ॥ ೬॥

**ಜಿತಾತ್ಮನಃ ಪ್ರಶಾಂತಸ್ಯ ಪರಮಾತ್ಮಾ ಸಮಾಹಿತಃ ।**
**ಶೀತೋಷ್ಣಸುಖದುಃಖೇಷು ತಥಾ ಮಾನಾಪಮಾನಯೋಃ ॥**

ಶೀತ-ಉಷ್ಣ ಮತ್ತು ಸುಖ-ದುಃಖಾದಿಗಳಲ್ಲಿ ಹಾಗೂ ಮಾನ-ಅಪಮಾನಗಳಲ್ಲಿ ಯಾರ ಅಂತಃಕರಣದ ವೃತ್ತಿಗಳು ಚೆನ್ನಾಗಿ ಶಾಂತವಾಗಿವೆಯೋ ಅಂತಹ ಆತ್ಮವನ್ನು ಸ್ವಾಧೀನ ಪಡಿಸಿಕೊಂಡ ಪುರುಷರ ಜ್ಞಾನದಲ್ಲಿ ಸಚ್ಚಿದಾನಂದಘನ ಪರಮಾತ್ಮನು ಸಮ್ಯಕ್ ಪ್ರಕಾರದಿಂದ ಸ್ಥಿತನಾಗಿರುತ್ತಾನೆ ಅರ್ಥಾತ್ ಅವನ ಜ್ಞಾನದಲ್ಲಿ ಪರಮಾತ್ಮನಲ್ಲದೇ ಬೇರೇನೂ ಇಲ್ಲವೇ ಇಲ್ಲ. ॥ ೭॥

**ಜ್ಞಾನವಿಜ್ಞಾನತೃಪ್ತಾತ್ಮಾ ಕೂಟಸ್ಥೋ ವಿಜಿತೇಂದ್ರಿಯಃ ।**
**ಯುಕ್ತ ಇತ್ಯುಚ್ಯತೇ ಯೋಗೀ ಸಮಲೋಷ್ಟಾಶ್ಮಕಾಂಚನಃ ॥**

ಯಾರ ಅಂತಃಕರಣವು ಜ್ಞಾನ-ವಿಜ್ಞಾನದಿಂದ ತೃಪ್ತ ವಾಗಿದೆಯೋ, ಯಾರ ಸ್ಥಿತಿಯು ವಿಕಾರರಹಿತವಾಗಿದೆಯೋ, ಯಾರ ಇಂದ್ರಿಯಗಳು ಪೂರ್ಣವಾಗಿ ಗೆಲ್ಲಲ್ಪಟ್ಟಿವೆಯೋ

ಮತ್ತು ಯಾರಿಗೆ ಕಲ್ಲು, ಮಣ್ಣು ಮತ್ತು ಚಿನ್ನ ಸಮಾನವಾಗಿವೆಯೋ ಆ ಯೋಗಿಯು ಯುಕ್ತನು ಅರ್ಥಾತ್ ಭಗವತ್ಪ್ರಾಪ್ತನಾಗಿದ್ದಾನೆಂದು ಹೇಳಲಾಗುತ್ತದೆ. ॥ ೮॥

**ಸುಹೃನ್ಮಿತ್ರಾರ್ಯುದಾಸೀನಮಧ್ಯಸ್ಥದ್ವೇಷ್ಯಬಂಧುಷು ।**
**ಸಾಧುಷ್ವಪಿ ಚ ಪಾಪೇಷು ಸಮಬುದ್ಧಿರ್ವಿಶಿಷ್ಯತೇ ॥ ೯॥**

ಸುಹೃದಯರು, ಮಿತ್ರರು, ವೈರಿಗಳು, ಉದಾಸೀನರು, ಮಧ್ಯಸ್ಥರು, ದ್ವೇಷ ಪಾತ್ರನಾಗುವನು ಮತ್ತು ಬಂಧುಗಡಣದಲ್ಲಿ, ಧರ್ಮಾತ್ಮರಲ್ಲಿ ಮತ್ತು ಪಾಪಿಗಳಲ್ಲಿ ಕೂಡ ಸಮಭಾವವನ್ನಿಡುವವನು ಅತ್ಯಂತ ಶ್ರೇಷ್ಠನಾಗಿದ್ದಾನೆ. ॥ ೯॥

**ಯೋಗೀ ಯುಂಜೀತ ಸತತಮಾತ್ಮಾನಂ ರಹಸಿ ಸ್ಥಿತಃ ।**
**ಏಕಾಕೀ ಯತಚಿತ್ತಾತ್ಮಾ ನಿರಾಶೀರಪರಿಗ್ರಹಃ ॥ ೧೦॥**

ಮನಸ್ಸು ಮತ್ತು ಇಂದ್ರಿಯಗಳ ಸಹಿತವಾಗಿ ಶರೀರವನ್ನು ತನ್ನ ವಶದಲ್ಲಿ ಇಟ್ಟುಕೊಂಡವನೂ, ಆಶಾರಹಿತನೂ ಮತ್ತು ಸಂಗ್ರಹರಹಿತನೂ ಆದ ಯೋಗಿಯು ಒಬ್ಬಂಟಿಗನಾಗಿ, ಏಕಾಂತಸ್ಥಾನದಲ್ಲಿ ಸ್ಥಿತನಾಗಿ ಆತ್ಮವನ್ನು ನಿರಂತರವಾಗಿ ಪರಮಾತ್ಮನಲ್ಲಿ ತೊಡಗಿಸಬೇಕು. ॥ ೧೦॥

**ಶುಚೌ ದೇಶೇ ಪ್ರತಿಷ್ಠಾಪ್ಯ ಸ್ಥಿರಮಾಸನಮಾತ್ಮನಃ ।**
**ನಾತ್ಯುಚ್ಛ್ರಿತಂ ನಾತಿನೀಚಂ ಚೈಲಾಜಿನಕುಶೋತ್ತರಮ್ ॥**

ಶುದ್ಧವಾದ ಭೂಮಿಯ ಮೇಲೆ ಕ್ರಮವಾಗಿ ಕುಶ, ಮೃಗಚರ್ಮ ಮತ್ತು ವಸ್ತ್ರಗಳನ್ನು ಹಾಸಿ, ಬಹಳ ಎತ್ತರವಿಲ್ಲದಂತೆ ಮತ್ತು ಬಹಳ ತಗ್ಗಿಲ್ಲದಂತೆ ತನ್ನ ಆಸನವನ್ನು ಸ್ಥಿರವಾಗಿ ಸ್ಥಾಪನೆ ಮಾಡಿ – ॥ ೧೧ ॥

**ತತ್ರೈಕಾಗ್ರಂ ಮನಃ ಕೃತ್ವಾ ಯತಚಿತ್ತೇಂದ್ರಿಯಕ್ರಿಯಃ ।**
**ಉಪವಿಶ್ಯಾಸನೇ ಯುಂಜ್ಯಾದ್ಯೋಗಮಾತ್ಮವಿಶುದ್ಧಯೇ ॥**

ಆ ಆಸನದಲ್ಲಿ ಕುಳಿತುಕೊಂಡು, ಚಿತ್ತ ಮತ್ತು ಇಂದ್ರಿಯಗಳ ಕ್ರಿಯೆಗಳನ್ನು ವಶದಲ್ಲಿಟ್ಟುಕೊಂಡು, ಮನಸ್ಸನ್ನು ಏಕಾಗ್ರಗೊಳಿಸಿ, ಅಂತಃಕರಣದ ಶುದ್ಧಿಗಾಗಿ ಯೋಗದ ಅಭ್ಯಾಸವನ್ನು ಮಾಡಬೇಕು. ॥ ೧೨॥

**ಸಮಂ ಕಾಯಶಿರೋಗ್ರೀವಂ ಧಾರಯನ್ನಚಲಂ ಸ್ಥಿರಃ ।**
**ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ ದಿಶಶ್ಚಾನವಲೋಕಯನ್ ॥**

ಶರೀರ, ತಲೆ ಮತ್ತು ಕುತ್ತಿಗೆಯನ್ನು ನೇರವಾಗಿ ಮತ್ತು ಅಚಲವಾಗಿ ಇಟ್ಟುಕೊಂಡು ಮತ್ತು ಸ್ಥಿರವಾಗಿ ತನ್ನ ಮೂಗಿನ ತುದಿಯಲ್ಲಿ ದೃಷ್ಟಿಯನ್ನು ನಿಲ್ಲಿಸಿ ಬೇರೆ ದಿಕ್ಕುಗಳನ್ನು ನೋಡದೆ –

**ಪ್ರಶಾಂತಾತ್ಮಾ ವಿಗತಭೀರ್ಬ್ರಹ್ಮಚಾರಿವ್ರತೇ ಸ್ಥಿತಃ ।**
**ಮನಃ ಸಂಯಮ್ಯ ಮಚ್ಚಿತ್ತೋ ಯುಕ್ತ ಆಸೀತ ಮತ್ಪರಃ ॥ ೧೪॥**

ಬ್ರಹ್ಮಚಾರಿಯವ್ರತದಲ್ಲಿ ಸ್ಥಿತನಾಗಿದ್ದು, ಭಯರಹಿತನಾಗಿ, ಪೂರ್ಣವಾಗಿ, ಶಾಂತವಾದ ಅಂತಃಕರಣವುಳ್ಳ,

ಎಚ್ಚರಿಕೆಯುಳ್ಳ ಯೋಗಿಯು ಮನಸ್ಸನ್ನು ತಡೆದುಕೊಂಡು ನನ್ನಲ್ಲಿಯೇ ಚಿತ್ತವುಳ್ಳವನಾಗಿ, ಮತ್ತು ನನ್ನಲ್ಲಿ ಪರಾಯಣನಾಗಿ ಕುಳಿತುಕೊಳ್ಳಬೇಕು. ॥ ೧೪॥

**ಯುಂಜನ್ನೇವಂ ಸದಾತ್ಮಾನಂ ಯೋಗೀ ನಿಯತಮಾನಸಃ ।**
**ಶಾಂತಿಂ ನಿರ್ವಾಣಪರಮಾಂ ಮತ್ಸಂಸ್ಥಾಮಧಿಗಚ್ಛತಿ ॥ ೧೫॥**

ಮನಸ್ಸನ್ನು ವಶಪಡಿಸಿಕೊಂಡಿರುವ ಯೋಗಿಯು ಈ ಪ್ರಕಾರವಾಗಿ ಚಿತ್ತವನ್ನು ಪರಮೇಶ್ವರಸ್ವರೂಪನಾದ ನನ್ನಲ್ಲಿ ನಿರಂತರವಾಗಿ ತೊಡಗಿಸುತ್ತ ನನ್ನಲ್ಲಿರುವ ಪರಮಾನಂದದ ಪರಾಕಾಷ್ಠಾರೂಪಿಯಾದ ಶಾಂತಿಯನ್ನು ಪಡೆಯುತ್ತಾನೆ.

**ನಾತ್ಯಶ್ನತಸ್ತು ಯೋಗೋಽಸ್ತಿ ನ ಚೈಕಾಂತಮನಶ್ನತಃ ।**
**ನ ಚಾತಿ ಸ್ವಪ್ನಶೀಲಸ್ಯ ಜಾಗ್ರತೋ ನೈವ ಚಾರ್ಜುನ ॥ ೧೬॥**

ಹೇ ಅರ್ಜುನಾ! ಈ ಯೋಗವು ಅತಿಯಾಗಿ ತಿನ್ನುವವನಿಗೂ, ಸರ್ವಥಾ ತಿನ್ನದಿರುವವನಿಗೂ, ತುಂಬಾ ಮಲಗುವ ಸ್ವಭಾವವುಳ್ಳವನಿಗೂ, ಅಥವಾ ಸರ್ವಥಾ ಮಲಗದೇ ಇರುವವನಿಗೂ ಸಿದ್ಧಿಸುವುದಿಲ್ಲ. ॥ ೧೬॥

**ಯುಕ್ತಾಹಾರವಿಹಾರಸ್ಯ ಯಕ್ತಚೇಷ್ಟಸ್ಯ ಕರ್ಮಸು ।**
**ಯುಕ್ತಸ್ವಪ್ನಾವಬೋಧಸ್ಯ ಯೋಗೋ ಭವತಿ ದುಃಖಹಾ ॥**

ದುಃಖಗಳನ್ನು ನಾಶಪಡಿಸುವ ಈ ಯೋಗವಾದರೋ ಯಥಾಯೋಗ್ಯವಾಗಿ ಆಹಾರ-ವಿಹಾರ ಮಾಡುವವನಿಗೆ,

ಕರ್ಮಗಳಲ್ಲಿ ಯಥಾಯೋಗ್ಯವಾದ ಚೇಷ್ಟೆಮಾಡುವವನಿಗೆ ಮತ್ತು ಯಥಾಯೋಗ್ಯವಾಗಿ ಮಲಗಿ ನಿದ್ರಿಸುವವನಿಗೆ ಹಾಗೂ ಎಚ್ಚರವಾಗಿರುವವನಿಗೇ ಸಿದ್ಧವಾಗುತ್ತದೆ. ॥ ೧೭॥

**ಯದಾ ವಿನಿಯತಂ ಚಿತ್ತಮಾತ್ಮನ್ಯೇವಾವತಿಷ್ಠತೇ ।**
**ನಿಃಸ್ಪೃಹಃ ಸರ್ವಕಾಮೇಭ್ಯೋ ಯುಕ್ತ ಇತ್ಯುಚ್ಯತೇ ತದಾ ॥**

ಸಂಪೂರ್ಣವಾಗಿ ವಶಪಡಿಸಿಕೊಳ್ಳಲಾದ ಚಿತ್ತವು ಯಾವ ಕಾಲದಲ್ಲಿ ಪರಮಾತ್ಮನಲ್ಲಿಯೇ, ಪೂರ್ಣವಾಗಿ ಸ್ಥಿತವಾಗಿರುತ್ತದೋ, ಆ ಕಾಲದಲ್ಲಿ ಸಂಪೂರ್ಣ ಭೋಗಗಳಲ್ಲಿ ಸ್ಪೃಹಾರಹಿತನಾದ ಪುರುಷನು ಯೋಗಯುಕ್ತನಾಗಿದ್ದಾನೆಂದು ಹೇಳಲಾಗುತ್ತದೆ. ॥ ೧೮॥

**ಯಥಾ ದೀಪೋ ನಿವಾತಸ್ಥೋ ನೇಂಗತೇ ಸೋಪಮಾ ಸ್ಮೃತಾ।**
**ಯೋಗಿನೋ ಯತಚಿತ್ತಸ್ಯ ಯುಂಜತೋ ಯೋಗಮಾತ್ಮನಃ ॥**

ಯಾವ ಪ್ರಕಾರವಾಗಿ ವಾಯುರಹಿತ ಸ್ಥಾನದಲ್ಲಿ ಸ್ಥಿತವಾದ ದೀಪವು ಚಲಿಸುವುದಿಲ್ಲವೋ ಅದೇ ರೀತಿಯ ಉಪಮೆಯನ್ನು ಪರಮಾತ್ಮನ ಧ್ಯಾನದಲ್ಲಿ ತೊಡಗಿರುವ ಯೋಗಿಯ ಗೆದ್ದಿರುವ ಚಿತ್ತಕ್ಕೆ ಕೊಡಲಾಗಿದೆ. ॥ ೧೯॥

**ಯತ್ರೋಪರಮತೇ ಚಿತ್ತಂ ನಿರುದ್ಧಂ ಯೋಗಸೇವಯಾ ।**
**ಯತ್ರ ಚೈವಾತ್ಮನಾತ್ಮಾನಂ ಪಶ್ಯನ್ನಾತ್ಮನಿ ತುಷ್ಯತಿ ॥ ೨೦॥**

ಯೋಗಾಭ್ಯಾಸದಿಂದ ವಶಮಾಡಿಕೊಂಡಿರುವ ಚಿತ್ತವು ಯಾವ ಅವಸ್ಥೆಯಲ್ಲಿ ಉಪರತಿ ಉಂಟಾಗುತ್ತದೋ ಮತ್ತು

ಯಾವ ಅವಸ್ಥೆಯಲ್ಲಿ ಪರಮಾತ್ಮನ ಧ್ಯಾನದಿಂದ ಶುದ್ಧವಾದ, ಸೂಕ್ಷ್ಮಬುದ್ಧಿಯ ಮೂಲಕ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾ ಸಚ್ಚಿದಾನಂದಘನನಾದ ಪರಮಾತ್ಮನಲ್ಲಿಯೇ ಸಂತುಷ್ಟನಾಗಿರುತ್ತಾನೋ – ॥ ೨೦॥

**ಸುಖಮಾತ್ಯಂತಿಕಂ ಯತ್ತದ್ಬುದ್ಧಿಗ್ರಾಹ್ಯಮತೀಂದ್ರಿಯಮ್ ।**
**ವೇತ್ತಿ ಯತ್ರ ನ ಚೈವಾಯಂ ಸ್ಥಿತಶ್ಚಲತಿ ತತ್ತ್ವತಃ ॥ ೨೧॥**

ಹಾಗೂ ಇಂದ್ರಿಯಗಳಿಂದ ಅತೀತವಾದ ಕೇವಲ ಶುದ್ಧವಾದ ಸೂಕ್ಷ್ಮಬುದ್ಧಿಯ ಮೂಲಕ ಗ್ರಹಿಸಲು ಯೋಗ್ಯವಾದ ಯಾವ ಅನಂತವಾದ ಆನಂದವಿದೆಯೋ; ಅದನ್ನು ಯಾವ ಅವಸ್ಥೆಯಲ್ಲಿ ಅನುಭವಿಸುತ್ತಾನೋ ಮತ್ತು ಯಾವ ಅವಸ್ಥೆಯಲ್ಲಿ ಸ್ಥಿತನಾದ ಈ ಯೋಗಿಯು ಪರಮಾತ್ಮನ ಸ್ವರೂಪದಿಂದ ಎಂದಿಗೂ ವಿಚಲಿತನಾಗುವುದೇ ಇಲ್ಲವೋ – ॥ ೨೧॥

**ಯಂ ಲಬ್ಧ್ವಾ ಚಾಪರಂ ಲಾಭಂ ಮನ್ಯತೇ ನಾಧಿಕಂ ತತಃ ।**
**ಯಸ್ಮಿನ್ ಸ್ಥಿತೋ ನ ದುಃಖೇನ ಗುರುಣಾಪಿ ವಿಚಾಲ್ಯತೇ ॥**

ಮತ್ತು ಪರಮಾತ್ಮನ ಪ್ರಾಪ್ತಿರೂಪೀ ಯಾವ ಲಾಭವನ್ನು ಪಡೆದುಕೊಂಡು ಅದಕ್ಕಿಂತ ಅಧಿಕವಾದ ಬೇರೆ ಯಾವುದೇ ಲಾಭವನ್ನು ಮನ್ನಿಸುವುದಿಲ್ಲವೋ ಮತ್ತು ಪರಮಾತ್ಮನ ಪ್ರಾಪ್ತಿರೂಪೀ ಯಾವ ಅವಸ್ಥೆಯಲ್ಲಿ ಸ್ಥಿತನಾದ ಯೋಗಿಯು ಭಾರೀ ದೊಡ್ಡ ದುಃಖದಿಂದಲೂ ಕೂಡ ವಿಚಲಿತನಾಗುವುದಿಲ್ಲವೋ – ॥ ೨೨॥

**ತಂ ವಿದ್ಯಾದ್ದುಃಖಸಂಯೋಗವಿಯೋಗಂ ಯೋಗಸಂಜ್ಞಿತಮ್।**
**ಸ ನಿಶ್ಚಯೇನ ಯೋಕ್ತವ್ಯೋ ಯೋಗೋಽನಿರ್ವಿಣ್ಣಚೇತಸಾ ॥**

ಯಾವುದು ದುಃಖರೂಪೀ ಸಂಸಾರದ ಸಂಯೋಗದಿಂದ ರಹಿತವಾಗಿದೆಯೋ, ಹಾಗೂ ಯಾವುದರ ಹೆಸರು ಯೋಗವೆಂಬುದಾಗಿದೆಯೋ ಅದನ್ನು ತಿಳಿಯಬೇಕು. ಆ ಯೋಗವನ್ನು ಬೇಸರಿಸದೆ ಅರ್ಥಾತ್ ಧೈರ್ಯ ಮತ್ತು ಉತ್ಸಾಹದಿಂದ ಕೂಡಿದ ಚಿತ್ತದಿಂದ ನಿಶ್ಚಯಪೂರ್ವಕವಾಗಿ ಮಾಡುವುದು ಕರ್ತವ್ಯವಾಗಿದೆ. ॥ ೨೩॥

**ಸಂಕಲ್ಪಪ್ರಭವಾನ್ ಕಾಮಾಂಸ್ತ್ಯಕ್ತ್ವಾ ಸರ್ವಾನಶೇಷತಃ ।**
**ಮನಸೈವೇಂದ್ರಿಯಗ್ರಾಮಂ ವಿನಿಯಮ್ಯ ಸಮಂತತಃ ॥ ೨೪॥**

ಸಂಕಲ್ಪದಿಂದ ಉತ್ಪನ್ನವಾಗುವ ಸಂಪೂರ್ಣ ಕಾಮನೆಗಳನ್ನು ನಿಶ್ಶೇಷರೂಪದಿಂದ ತ್ಯಾಗಮಾಡಿ ಮತ್ತು ಮನಸ್ಸಿನ ಮೂಲಕ ಇಂದ್ರಿಯಗಳ ಸಮುದಾಯವನ್ನು ಎಲ್ಲ ಕಡೆಗಳಿಂದಲೂ ಪೂರ್ಣವಾಗಿ ತಡೆದುಕೊಂಡು – ॥ ೨೪॥

**ಶನೈಃ ಶನೈರುಪರಮೇದ್ಬುದ್ಧ್ಯಾ ಧೃತಿಗೃಹೀತಯಾ ।**
**ಆತ್ಮಸಂಸ್ಥಂ ಮನಃ ಕೃತ್ವಾ ನ ಕಿಂಚಿದಪಿ ಚಿಂತಯೇತ್ ॥ ೨೫॥**

ಕ್ರಮ-ಕ್ರಮವಾಗಿ ಅಭ್ಯಾಸಮಾಡುತ್ತ ಉಪರತಿಯನ್ನು ಪಡೆದು ಹಾಗೂ ಧೈರ್ಯದಿಂದ ಕೂಡಿದ ಬುದ್ಧಿಯ ಮೂಲಕ ಮನವನ್ನು ಪರಮಾತ್ಮನಲ್ಲಿ ಸ್ಥಿತಗೊಳಿಸಿ, ಪರಮಾತ್ಮನಲ್ಲದೆ ಮತ್ತೇನನ್ನೂ ಕೂಡ ಚಿಂತಿಸಬಾರದು. ॥ ೨೫॥

**ಯತೋ ಯತೋ ನಿಶ್ಚರತಿ ಮನಶ್ಚಂಚಲಮಸ್ಥಿರಮ್ ।**
**ತತಸ್ತತೋ ನಿಯಮ್ಯೈತದಾತ್ಮನ್ಯೇವ ವಶಂ ನಯೇತ್ ॥ ೨೬॥**

ಈ ಅಸ್ಥಿರವಾಗಿರುವ ಮತ್ತು ಚಂಚಲವಾದ ಮನಸ್ಸು ಯಾವ-ಯಾವ ಶಬ್ದಾದಿ ವಿಷಯಗಳ ನಿಮಿತ್ತದಿಂದ ಜಗತ್ತಿನಲ್ಲಿ ವಿಚರಿಸುತ್ತದೆಯೋ, ಆಯಾಯಾ ವಿಷಯಗಳಿಂದ ತಡೆದು ಎಂದರೆ ಹಿಂದಕ್ಕೆಳೆದುಕೊಂಡು ಅದನ್ನು ಪದೇ ಪದೇ ಪರಮಾತ್ಮನಲ್ಲಿಯೇ ತೊಡಗಿಸಬೇಕು. ॥ ೨೬॥

**ಪ್ರಶಾಂತಮನಸಂ ಹ್ಯೇನಂ ಯೋಗಿನಂ ಸುಖಮುತ್ತಮಮ್ ।**
**ಉಪೈತಿ ಶಾಂತರಜಸಂ ಬ್ರಹ್ಮಭೂತಮಕಲ್ಮಷಮ್ ॥ ೨೭॥**

ಏಕೆಂದರೆ ಯಾರ ಮನಸ್ಸು ಒಳ್ಳೆಯ ರೀತಿಯಲ್ಲಿ ಶಾಂತವಾಗಿದೆಯೋ, ಯಾರು ಪಾಪರಹಿತನಾಗಿದ್ದಾನೋ ಮತ್ತು ಯಾರ ರಜೋಗುಣವು ಶಾಂತವಾಗಿ ಹೋಗಿದೆಯೋ, ಈ ಸಚ್ಚಿದಾನಂದಘನನಾದ ಬ್ರಹ್ಮನೊಡನೆ ಏಕೀಭಾವ ವುಂಟಾಗಿರುವ ಅಂತಹ ಯೋಗಿಗೆ ಉತ್ತಮವಾದ ಆನಂದವು ಪ್ರಾಪ್ತ ವಾಗುತ್ತದೆ. ॥ ೨೭॥

**ಯುಂಜನ್ನೇವಂ ಸದಾಽಽತ್ಮಾನಂ ಯೋಗೀ ವಿಗತಕಲ್ಮಷಃ ।**
**ಸುಖೇನ ಬ್ರಹ್ಮಸಂಸ್ಪರ್ಶಮತ್ಯಂತಂ ಸುಖಮಶ್ನುತೇ ॥ ೨೮॥**

ಆ ಪಾಪರಹಿತನಾದ ಯೋಗಿಯು ಈ ಪ್ರಕಾರ ನಿರಂತರವಾಗಿ ಆತ್ಮವನ್ನು ಪರಮಾತ್ಮನಲ್ಲಿ ತೊಡಗಿಸುತ್ತ

ಸುಖಪೂರ್ವಕವಾಗಿ ಪರಬ್ರಹ್ಮ ಪರಮಾತ್ಮನ ಪ್ರಾಪ್ತಿರೂಪ
ವಾದ ಅನಂತ ಆನಂದವನ್ನು ಅನುಭವಿಸುತ್ತಾನೆ. ॥ ೨೮॥

**ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ ।**
**ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶನಃ ॥ ೨೯॥**

ಸರ್ವವ್ಯಾಪಿಯಾದ ಅನಂತ ಚೇತನದಲ್ಲಿ ಏಕೀಭಾವ
ದಿಂದ ಸ್ಥಿತಿರೂಪವಾದ ಯೋಗದಿಂದ ಕೂಡಿದ ಆತ್ಮವುಳ್ಳ
ವನು ಹಾಗೂ ಎಲ್ಲರನ್ನು ಸಮಭಾವದಿಂದ ನೋಡುವ
ಯೋಗಿಯು ಆತ್ಮವನ್ನು ಸಂಪೂರ್ಣ ಪ್ರಾಣಿಗಳಲ್ಲಿ ಸ್ಥಿತನಾಗಿ
ರುವ ಮತ್ತು ಸಮಸ್ತ ಪ್ರಾಣಿಗಳನ್ನು ಆತ್ಮನಲ್ಲಿ ಕಲ್ಪಿತವಾಗಿ
ನೋಡುತ್ತಾನೆ. ॥ ೨೯॥

**ಯೋ ಮಾಂ ಪಶ್ಯತಿ ಸರ್ವತ್ರ ಸರ್ವಂ ಚ ಮಯಿ ಪಶ್ಯತಿ ।**
**ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೇ ನ ಪ್ರಣಶ್ಯತಿ ॥ ೩೦॥**

ಯಾವ ಪುರುಷನು ಸಮಸ್ತ ಜೀವಿಗಳಲ್ಲಿ ಎಲ್ಲರ
ಆತ್ಮರೂಪೀ ವಾಸುದೇವನಾದ ನನ್ನನ್ನೇ ವ್ಯಾಪಕನಾಗಿ ನೋಡು
ತ್ತಾನೋ ಮತ್ತು ಸಂಪೂರ್ಣ ಜೀವಿಗಳನ್ನು ವಾಸುದೇವನಾದ
ನನ್ನಲ್ಲಿ ಅಂತರ್ಗತವಾಗಿರುವಂತೆ ನೋಡುತ್ತಾನೋ ಅವನಿಗೆ
ನಾನು ಅದೃಶ್ಯನಾಗುವುದಿಲ್ಲ ಮತ್ತು ಅವನು ನನಗೂ ಅದೃಶ್ಯ
ನಾಗುವುದಿಲ್ಲ. ॥ ೩೦॥

**ಸರ್ವಭೂತಸ್ಥಿತಂ ಯೋ ಮಾಂ ಭಜತ್ಯೇಕತ್ವಮಾಸ್ಥಿತಃ ।**
**ಸರ್ವಥಾ ವರ್ತಮಾನೋಽಪಿ ಸಯೋಗೀ ಮಯಿ ವರ್ತತೇ**

ಯಾವ ಪುರುಷನು ಏಕೀಭಾವದಲ್ಲಿ ಸ್ಥಿತನಾಗಿ, ಸಂಪೂರ್ಣ ಭೂತಗಳಲ್ಲಿ ಆತ್ಮರೂಪದಿಂದ ಸ್ಥಿತನಾದ, ಸಚ್ಚಿದಾನಂದಘನ, ವಾಸುದೇವನಾದ ನನ್ನನ್ನು ಭಜಿಸುತ್ತಾನೋ ಆ ಯೋಗಿಯು ಎಲ್ಲ ಪ್ರಕಾರದಿಂದ ವರ್ತಿಸುತ್ತಿದ್ದರೂ ಸಹ ನನ್ನಲ್ಲಿಯೇ ವರ್ತಿಸುತ್ತಾನೆ ಅರ್ಥಾತ್-ಅವನ ಎಲ್ಲ ಕ್ರಿಯೆಗಳು ಭಗವಂತನೊಂದಿಗೆ ನಡೆಯುತ್ತವೆ. ॥ ೩೧॥

**ಆತ್ಮೌಪಮ್ಯೇನ ಸರ್ವತ್ರ ಸಮಂ ಪಶ್ಯತಿ ಯೋಽರ್ಜುನ ।**
**ಸುಖಂ ವಾ ಯದಿ ವಾ ದುಃಖಂ ಸ ಯೋಗೀ ಪರಮೋ ಮತಃ**

ಹೇ ಅರ್ಜುನಾ! ಯಾವ ಯೋಗಿಯು ತನ್ನಂತೆಯೇ ಸಂಪೂರ್ಣ ಪ್ರಾಣಿಗಳನ್ನು ಸಮದೃಷ್ಟಿಯಿಂದ ನೋಡುತ್ತಾನೋ ಮತ್ತು ಸುಖ ಅಥವಾ ದುಃಖವನ್ನೂ ಕೂಡ ಎಲ್ಲರಲ್ಲಿ ಸಮವಾಗಿ ನೋಡುತ್ತಾನೋ ಆ ಯೋಗಿಯು ಪರಮಶ್ರೇಷ್ಠನೆಂದು ತಿಳಿಯಲ್ಪಟ್ಟಿದ್ದಾನೆ. ॥ ೩೨ ॥

ಅರ್ಜುನ ಉವಾಚ

**ಯೋಽಯಂ ಯೋಗಸ್ತ್ವಯಾ ಪ್ರೋಕ್ತಃ ಸಾಮ್ಯೇನ ಮಧುಸೂದನ**
**ಏತಸ್ಯಾಹಂ ನ ಪಶ್ಯಾಮಿ ಚಂಚಲತ್ವಾತ್ ಸ್ಥಿತಿಂ ಸ್ಥಿರಾಮ್ ।**

ಅರ್ಜುನ ಹೇಳಿದನು – ಹೇ ಮಧುಸೂದನಾ! ಯಾವ ಈ ಯೋಗವನ್ನು ನೀನು ಸಮಭಾವದಿಂದ ಹೇಳಿದ್ದೀಯೋ

ಮನಸ್ಸು ಚಂಚಲವಾದ್ದರಿಂದ ನಾನು ಅದರ ಸ್ಥಿರವಾದ ಸ್ಥಿತಿಯನ್ನು ನೋಡುವುದಿಲ್ಲ. ॥ ೩೩॥

**ಚಂಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್ದೃಢಮ್ ।**
**ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಮ್ ॥**

ಏಕೆಂದರೆ ಹೇ ಕೃಷ್ಣಾ! ಈ ಮನಸ್ಸು ತುಂಬಾ ಚಂಚಲವಾದುದು, ಮಥಿಸುವ ಸ್ವಭಾವವುಳ್ಳದ್ದು, ಬಹಳ ದೃಢವಾದುದೂ ಮತ್ತು ಬಲಶಾಲಿಯೂ ಆಗಿದೆ. ಆದಕಾರಣ ಇದನ್ನು ವಶದಲ್ಲಿಡುವುದು, ವಾಯುವನ್ನು ತಡೆಹಿಡಿದಂತೆ ಅತ್ಯಂತ ದುಷ್ಕರವಾದುದೆಂದು ನಾನು ತಿಳಿಯುತ್ತೇನೆ. ॥ ೩೪॥

ಶ್ರೀಭಗವಾನುವಾಚ

**ಅಸಂಶಯಂ ಮಹಾಬಾಹೋ ಮನೋ ದುರ್ನಿಗ್ರಹಂ ಚಲಮ್ ।**
**ಅಭ್ಯಾಸೇನ ತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ ॥**

ಶ್ರೀಭಗವಂತನು ಹೇಳಿದನು – ಹೇ ಮಹಾಬಾಹುವೇ! ನಿಸ್ಸಂದೇಹವಾಗಿ ಮನಸ್ಸು ಚಂಚಲ ಮತ್ತು ಕಷ್ಟದಿಂದ ವಶವಾಗುವಂತಹುದಾಗಿದೆ; ಆದರೆ ಹೇ ಕುಂತೀಪುತ್ರನಾದ ಅರ್ಜುನನೇ! ಇದು ಅಭ್ಯಾಸದಿಂದ ಮತ್ತು ವೈರಾಗ್ಯದಿಂದ ವಶವಾಗುತ್ತದೆ. ॥ ೩೫॥

**ಅಸಂಯತಾತ್ಮನಾ ಯೋಗೋ ದುಷ್ಪ್ರಾಪ ಇತಿ ಮೇ ಮತಿಃ ।**
**ವಶ್ಯಾತ್ಮನಾ ತು ಯತತಾ ಶಕ್ಯೋऽವಾಪ್ತುಮುಪಾಯತಃ ॥**

ಯಾರು ಮನಸ್ಸನ್ನು ವಶಪಡಿಸಿಕೊಳ್ಳಲಿಲ್ಲವೋ ಅಂತಹ ಪುರುಷರ ಮೂಲಕ ಯೋಗವು ಪಡೆಯಲಶಕ್ಯವಾಗಿದೆ. ಆದರೆ ಮನಸ್ಸನ್ನು ವಶಪಡಿಸಿಕೊಂಡಿರುವ ಪ್ರಯತ್ನಶೀಲರಾದ ಪುರುಷರ ಮೂಲಕ ಸಾಧನೆಯಿಂದ ಅದು ಪ್ರಾಪ್ತವಾಗುವುದು ಸಹಜವಾಗಿದೆ. ಇದು ನನ್ನ ಮತವಾಗಿದೆ. ॥ ೩೬॥

ಅರ್ಜುನ ಉವಾಚ

**ಅಯತಿಃ ಶ್ರದ್ಧಯೋಪೇತೋ ಯೋಗಾಚ್ಚಲಿತಮಾನಸಃ ।**
**ಅಪ್ರಾಪ್ಯ ಯೋಗಸಂಸಿದ್ಧಿಂ ಕಾಂ ಗತಿಂ ಕೃಷ್ಣ ಗಚ್ಛತಿ ॥ ೩೭॥**

ಅರ್ಜುನನು ಹೇಳಿದನು – ಹೇ ಶ್ರೀಕೃಷ್ಣ! ಯಾರು ಯೋಗದಲ್ಲಿ ಶ್ರದ್ಧೆಯನ್ನಿಟ್ಟಿದ್ದಾರೋ, ಆದರೆ ಸಂಯಮಿಗಳಲ್ಲವೋ, ಈ ಕಾರಣದಿಂದ ಅಂತ್ಯಕಾಲದಲ್ಲಿ ಯಾರ ಮನಸ್ಸು ಯೋಗದಿಂದ ವಿಚಲಿತವಾಗಿ ಹೋಗಿದೆಯೋ ಅಂತಹ ಸಾಧಕನು ಯೋಗದ ಸಿದ್ಧಿಯನ್ನು ಅರ್ಥಾತ್ ಭಗವಂತನ ಸಾಕ್ಷಾತ್ಕಾರವನ್ನು ಪಡೆಯದೆ ಯಾವ ಗತಿಯನ್ನು ಪಡೆಯುತ್ತಾನೆ? ॥ ೩೭॥

**ಕಚ್ಚಿನ್ನೋಭಯವಿಭ್ರಷ್ಟಶ್ಛಿನ್ನಾಭ್ರಮಿವ ನಶ್ಯತಿ ।**
**ಅಪ್ರತಿಷ್ಠೋ ಮಹಾಬಾಹೋ ವಿಮೂಢೋ ಬ್ರಹ್ಮಣಃ ಪಥಿ ॥**

ಹೇ ಮಹಾಬಾಹುವೇ! ಆ ಭಗವತ್ಪ್ರಾಪ್ತಿಯ ಮಾರ್ಗದಲ್ಲಿ ಮೋಹಿತನಾದ ಮತ್ತು ಆಶ್ರಯರಹಿತನಾದ ಪುರುಷನು ಛಿನ್ನ-

ಭಿನ್ನವಾದ ಮೋಡದಂತೆ ಎರಡೂ ಕಡೆಗಳಿಂದ ಭ್ರಷ್ಟನಾಗಿ ನಷ್ಟನಾಗುವುದಿಲ್ಲವೇನು? ॥ ೩೮॥

**ಏತನ್ಮೇ ಸಂಶಯಂ ಕೃಷ್ಣ ಛೇತ್ತುಮರ್ಹಸ್ಯಶೇಷತಃ ।**
**ತ್ವದನ್ಯಃ ಸಂಶಯಸ್ಯಾಸ್ಯ ಛೇತ್ತಾ ನ ಹ್ಯುಪಪದ್ಯತೇ ॥ ೩೯॥**

ಹೇ ಶ್ರೀಕೃಷ್ಣಾ! ನನ್ನ ಈ ಸಂಶಯವನ್ನು ಸಂಪೂರ್ಣವಾಗಿ ಛೇದಿಸಲು ನೀನೇ ಸಮರ್ಥನಾಗಿದ್ದೀಯೆ; ಏಕೆಂದರೆ ನೀನಲ್ಲದೆ ಬೇರೆ ಯಾರೂ ಈ ಸಂಶಯವನ್ನು ಛೇದಿಸುವವರು ಸಿಕ್ಕುವುದು ಸಂಭವವಿಲ್ಲ. ॥ ೩೯॥

*ಶ್ರೀಭಗವಾನುವಾಚ*

**ಪಾರ್ಥ ನೈವೇಹ ನಾಮುತ್ರ ವಿನಾಶಸ್ತಸ್ಯ ವಿದ್ಯತೇ ।**
**ನ ಹಿ ಕಲ್ಯಾಣಕೃತ್ಕಶ್ಚಿದ್ದುರ್ಗತಿಂ ತಾತ ಗಚ್ಛತಿ ॥ ೪೦॥**

ಶ್ರೀಭಗವಂತನು ಹೇಳಿದನು – ಹೇ ಪಾರ್ಥನೇ! ಆ ಪುರುಷನ ವಿನಾಶವು ಈ ಲೋಕದಲ್ಲಿಯಾಗಲಿ ಮತ್ತು ಪರಲೋಕದಲ್ಲಿಯೇ ಆಗಲಿ ಆಗುವುದಿಲ್ಲ. ಏಕೆಂದರೆ, ಹೇ ಪ್ರೀತಿಪಾತ್ರನೇ! ಆತ್ಮೋದ್ಧಾರಕ್ಕಾಗಿ ಅರ್ಥಾತ್ ಭಗವತ್ಪ್ರಾಪ್ತಿಗಾಗಿ ಕರ್ಮಮಾಡುವ ಯಾವ ಮನುಷ್ಯನೂ ದುರ್ಗತಿಯನ್ನು ಹೊಂದುವುದಿಲ್ಲ. ॥ ೪೦॥

**ಪ್ರಾಪ್ಯ ಪುಣ್ಯಕೃತಾಂ ಲೋಕಾನುಷಿತ್ವಾ ಶಾಶ್ವತೀಃ ಸಮಾಃ ।**
**ಶುಚೀನಾಂ ಶ್ರೀಮತಾಂ ಗೇಹೇ ಯೋಗಭ್ರಷ್ಟೋಽಭಿಜಾಯತೇ**

ಯೋಗಭ್ರಷ್ಟನಾದ ಪುರುಷನು ಪುಣ್ಯವಂತರುಗಳ ಲೋಕಗಳನ್ನು ಅರ್ಥಾತ್ ಸ್ವರ್ಗಾದಿ ಉತ್ತಮವಾದ ಲೋಕಗಳನ್ನು ಪ್ರಾಪ್ತಮಾಡಿಕೊಂಡು, ಅವುಗಳಲ್ಲಿ ಬಹಳ ವರ್ಷಗಳವರೆಗೆ ವಾಸಮಾಡಿದ ನಂತರ ಶುದ್ಧವಾದ ಆಚರಣೆ ಮಾಡುವ ಶ್ರೀಮಂತ ಪುರುಷರ ಮನೆಯಲ್ಲಿ ಜನ್ಮವೆತ್ತುತ್ತಾನೆ. ॥ ೪೧॥

**ಅಥವಾ ಯೋಗಿನಾಮೇವ ಕುಲೇ ಭವತಿ ಧೀಮತಾಮ್ ।**
**ಏತದ್ಧಿ ದುರ್ಲಭತರಂ ಲೋಕೇ ಜನ್ಮ ಯದೀದೃಶಮ್ ॥ ೪೨॥**

ಅಥವಾ ವೈರಾಗ್ಯವಂತನಾದ ಪುರುಷನು ಆ ಲೋಕಗಳಿಗೆ ಹೋಗದೆ ಜ್ಞಾನವಂತರಾದ ಯೋಗಿಗಳ ಕುಲದಲ್ಲಿಯೇ ಜನಿಸುತ್ತಾನೆ. ಆದರೆ ಈ ಪ್ರಕಾರದ ಯಾವ ಈ ಜನ್ಮವಿದೆಯೋ ಅದು ಜಗತ್ತಿನಲ್ಲಿ ನಿಸ್ಸಂದೇಹವಾಗಿ ಅತ್ಯಂತ ದುರ್ಲಭವಾಗಿದೆ. ॥ ೪೨॥

**ತತ್ರ ತಂ ಬುದ್ಧಿಸಂಯೋಗಂ ಲಭತೇ ಪೌರ್ವದೇಹಿಕಮ್ ।**
**ಯತತೇ ಚ ತತೋ ಭೂಯಃ ಸಂಸಿದ್ಧೌ ಕುರುನಂದನ ॥ ೪೩॥**

ಅಲ್ಲಿ ಆ ಹಿಂದಿನ ಶರೀರದಲ್ಲಿ ಸಂಗ್ರಹಿಸಿದ ಬುದ್ಧಿಸಂಯೋಗವನ್ನು ಅರ್ಥಾತ್ ಸಮಬುದ್ಧಿರೂಪವಾದ ಯೋಗದ ಸಂಸ್ಕಾರಗಳನ್ನು ಅನಾಯಾಸವಾಗಿಯೇ ಪಡೆಯುತ್ತಾನೆ ಮತ್ತು ಹೇ ಕುರುನಂದನ! ಅದರ ಪ್ರಭಾವದಿಂದ ಅವನು

ಪುನಃ ಪರಮಾತ್ಮನ ಪ್ರಾಪ್ತಿರೂಪವಾದ ಸಿದ್ಧಿಗಾಗಿ ಮೊದಲಿಗಿಂತಲೂ ಹೆಚ್ಚಿನ ಪ್ರಯತ್ನ ಮಾಡುತ್ತಾನೆ. ॥ ೪೩॥

**ಪೂರ್ವಾಭ್ಯಾಸೇನ ತೇನೈವ ಹ್ರಿಯತೇ ಹ್ಯವಶೋಽಪಿ ಸಃ ।**
**ಜಿಜ್ಞಾಸುರಪಿ ಯೋಗಸ್ಯ ಶಬ್ದಬ್ರಹ್ಮಾತಿವರ್ತತೇ ॥ ೪೪॥**

ಆ ಶ್ರೀಮಂತರ ಮನೆಯಲ್ಲಿ ಜನಿಸುವ ಯೋಗಭ್ರಷ್ಟನು ಪರಾಧೀನನಾಗಿದ್ದರೂ ಸಹ ಆ ಮೊದಲಿನ ಅಭ್ಯಾಸದಿಂದಲೇ ನಿಸ್ಸಂದೇಹವಾಗಿ ಭಗವಂತನ ಕಡೆಗೆ ಆಕರ್ಷಿಸಲ್ಪಡುತ್ತಾನೆ ಹಾಗೂ ಸಮಬುದ್ಧಿರೂಪವಾದ ಯೋಗದ ಜಿಜ್ಞಾಸುವು ಕೂಡ ವೇದದಲ್ಲಿ ಹೇಳಲಾಗಿರುವ ಸಕಾಮ ಕರ್ಮಗಳ ಫಲವನ್ನು ದಾಟಿ ಹೋಗುತ್ತಾನೆ. ॥ ೪೪ ॥

**ಪ್ರಯತ್ನಾದ್ಯತಮಾನಸ್ತು ಯೋಗೀ ಸಂಶುದ್ಧಕಿಲ್ಬಿಷಃ ।**
**ಅನೇಕಜನ್ಮಸಂಸಿದ್ಧಸ್ತತೋ ಯಾತಿ ಪರಾಂ ಗತಿಮ್ ॥ ೪೫॥**

ಆದರೆ ಪ್ರಯತ್ನಪೂರ್ವಕವಾಗಿ ಅಭ್ಯಾಸಮಾಡುವ ಯೋಗಿಯಾದರೋ ಹಿಂದಿನ ಅನೇಕ ಜನ್ಮಗಳ ಸಂಸ್ಕಾರ ಬಲದಿಂದ ಇದೇ ಜನ್ಮದಲ್ಲಿ ಸಂಸಿದ್ಧನಾಗಿ, ಸಂಪೂರ್ಣ ಪಾಪಗಳಿಂದ ರಹಿತನಾಗಿ ನಂತರ ತತ್ಕಾಲದಲ್ಲಿಯೇ ಪರಮ ಗತಿಯನ್ನು ಪಡೆಯುತ್ತಾನೆ. ॥ ೪೫॥

**ತಪಸ್ವಿಭ್ಯೋಽಧಿಕೋ ಯೋಗೀ ಜ್ಞಾನಿಭ್ಯೋಽಪಿ ಮತೋಽಧಿಕಃ ।**
**ಕರ್ಮಿಭ್ಯಶ್ಚಾಧಿಕೋ ಯೋಗೀ ತಸ್ಮಾದ್ಯೋಗೀ ಭವಾರ್ಜುನ ॥**

ಯೋಗಿಯು ತಪಸ್ವಿಗಳಿಗಿಂತ ಶ್ರೇಷ್ಠನಾಗಿದ್ದಾನೆ, ಶಾಸ್ತ್ರ ಜ್ಞಾನಿಗಳಿಗಿಂತಲೂ ಶ್ರೇಷ್ಠನೆಂದು ತಿಳಿಯಲಾಗಿದೆ ಮತ್ತು ಸಕಾಮ ಕರ್ಮ ಮಾಡುವವರಿಗಿಂತಲೂ ಸಹ ಯೋಗಿಯು ಶ್ರೇಷ್ಠನಾಗಿದ್ದಾನೆ. ಆದ್ದರಿಂದ ಹೇ ಅರ್ಜುನಾ! ನೀನೂ ಯೋಗಿಯಾಗು.

**ಯೋಗಿನಾಮಪಿ ಸರ್ವೇಷಾಂ ಮದ್ಗತೇನಾಂತರಾತ್ಮನಾ ।**
**ಶ್ರದ್ಧಾವಾನ್ ಭಜತೇ ಯೋ ಮಾಂ ಸ ಮೇ ಯುಕ್ತತಮೋ ಮತಃ**

ಸಂಪೂರ್ಣ ಯೋಗಿಗಳಲ್ಲಿ ಕೂಡ ಯಾವ ಶ್ರದ್ಧಾವಂತನಾದ ಯೋಗಿಯು ನನ್ನಲ್ಲಿ ತೊಡಗಿದ್ದ ಅಂತರಾತ್ಮನಿಂದ ನನ್ನನ್ನು ನಿರಂತರ ಭಜಿಸುತ್ತಾನೋ ಆ ಯೋಗಿಯು ನನಗೆ ಪರಮಶ್ರೇಷ್ಠನೆಂದು ಮಾನ್ಯನಾಗಿದ್ದಾನೆ. ॥ ೪೭॥

*ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು*
*ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ*
*ಆತ್ಮಸಂಯಮಯೋಗೋ ನಾಮ ಷಷ್ಠೋಽಧ್ಯಾಯಃ ॥ ೬॥*

❀ ❀ ❀ ❀ ❀

## ॥ ಅಥ ಸಪ್ತಮೋಽಧ್ಯಾಯಃ॥

## ಜ್ಞಾನವಿಜ್ಞಾನಯೋಗವು

*ಶ್ರೀಭಗವಾನುವಾಚ*

**ಮಯ್ಯಾಸಕ್ತಮನಾಃ ಪಾರ್ಥ ಯೋಗಂ ಯುಂಜನ್ಮದಾಶ್ರಯಃ ।**
**ಅಸಂಶಯಂ ಸಮಗ್ರಂ ಮಾಂ ಯಥಾ ಜ್ಞಾಸ್ಯಸಿ ತಚ್ಛೃಣು ॥**

ಶ್ರೀಭಗವಂತನು ಹೇಳಿದನು - ಹೇ ಪಾರ್ಥನೆ! ಅನನ್ಯ ಪ್ರೇಮದಿಂದ ನನ್ನಲ್ಲಿ ಆಸಕ್ತಚಿತ್ತನಾಗಿ ಮತ್ತು ಅನನ್ಯಭಾವದಿಂದ ನನ್ನ ಪರಾಯಣನಾಗಿ ಯೋಗದಲ್ಲಿ ತೊಡಗಿರುವ ನೀನು ಯಾವ ಪ್ರಕಾರದಿಂದ ಸಂಪೂರ್ಣ ವಿಭೂತಿಗಳು, ಬಲ, ಐಶ್ವರ್ಯಾದಿ ಗುಣಗಳಿಂದ ಯುಕ್ತನಾಗಿ, ಎಲ್ಲರ ಆತ್ಮರೂಪನಾದ ನನ್ನನ್ನು ಸಂಶಯರಹಿತನಾಗಿ ತಿಳಿಯುವೆಯೋ ಅದನ್ನು ಕೇಳು. ॥ ೧॥

**ಜ್ಞಾನಂ ತೇಽಹಂ ಸವಿಜ್ಞಾನಮಿದಂ ವಕ್ಷ್ಯಾಮ್ಯಶೇಷತಃ ।**
**ಯಜ್ಜ್ಞಾತ್ವಾ ನೇಹ ಭೂಯೋಽನ್ಯಜ್ಜ್ಞಾತವ್ಯಮವಶಿಷ್ಯತೇ ॥**

ಯಾವುದನ್ನು ತಿಳಿದನಂತರ ಜಗತ್ತಿನಲ್ಲಿ ಮತ್ತೇ ಬೇರೆ ಏನನ್ನು ತಿಳಿಯಲು ಯೋಗ್ಯವಾದುದು ಉಳಿದಿರುವುದಿಲ್ಲವೋ ಅಂತಹ ವಿಜ್ಞಾನಸಹಿತವಾದ ತತ್ತ್ವಜ್ಞಾನವನ್ನು ನಾನು ನಿನಗಾಗಿ ಸಂಪೂರ್ಣವಾಗಿ ಹೇಳುವೆನು. ॥ ೨॥

**ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ ।**
**ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ ॥ ೩॥**

ಸಾವಿರಾರು ಮನುಷ್ಯರಲ್ಲಿ ಯಾರೋ ಒಬ್ಬನು ನನ್ನ ಪ್ರಾಪ್ತಿಗಾಗಿ ಯತ್ನಿಸುತ್ತಾನೆ ಮತ್ತು ಹಾಗೆ ಯತ್ನಿಸುವ ಯೋಗಿಗಳಲ್ಲಿ ಕೂಡ ಯಾರೋ ಒಬ್ಬನು ನನ್ನ ಪರಾಯಣನಾಗಿ ನನ್ನನ್ನು ತತ್ತ್ವದಿಂದ ಅರ್ಥಾತ್ ಯಥಾರ್ಥ ರೂಪದಿಂದ ತಿಳಿಯುತ್ತಾನೆ. ॥ ೩॥

**ಭೂಮಿರಾಪೋಽನಲೋ ವಾಯುಃ ಖಂ ಮನೋ ಬುದ್ಧಿರೇವ ಚ।**
**ಅಹಂಕಾರ ಇತೀಯಂ ಮೇ ಭಿನ್ನಾ ಪ್ರಕೃತಿರಷ್ಟಧಾ ॥ ೪॥**
**ಅಪರೇಯಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಮ್ ।**
**ಜೀವಭೂತಾಂ ಮಹಾಬಾಹೋ ಯಯೇದಂ ಧಾರ್ಯತೇ ಜಗತ್**

ಪೃಥ್ವಿ, ಜಲ, ಅಗ್ನಿ, ವಾಯು, ಆಕಾಶ, ಮನಸ್ಸು, ಬುದ್ಧಿ ಮತ್ತು ಅಹಂಕಾರ ಈ ರೀತಿ ಎಂಟು ಪ್ರಕಾರವಾಗಿ ವಿಭಾಗಿಸಲ್ಪಟ್ಟ ನನ್ನ ಪ್ರಕೃತಿಯಾಗಿದೆ. ಇದು ಎಂಟು ಪ್ರಕಾರದದಿಂದ ಭೇದವುಳ್ಳದ್ದಾದರೋ ಅಪರಾ ಅರ್ಥಾತ್ ನನ್ನ ಜಡ ಪ್ರಕೃತಿಯಾಗಿದೆ ಮತ್ತು ಹೇ ಮಹಾಬಾಹುವೇ! ಇದಕ್ಕಿಂತ ಬೇರೆಯದಾದ, ಯಾವುದರಿಂದ ಸಂಪೂರ್ಣವಾದ ಜಗತ್ತು ಧರಿಸಲ್ಪಡುತ್ತದೋ ಅದು ನನ್ನ ಜೀವರೂಪವಾದ 'ಪರಾ' ಅರ್ಥಾತ್ ಚೇತನ ಪ್ರಕೃತಿಯೆಂದು ತಿಳಿ. ॥ ೪ - ೫॥

**ಏತದ್ಯೋನೀನಿ ಭೂತಾನಿ ಸರ್ವಾಣೀತ್ಯುಪಧಾರಯ ।**
**ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ ॥ ೬॥**

ಹೇ ಅರ್ಜುನನೇ! ಸಮಸ್ತ ಭೂತಗಳು ಈ ಎರಡೂ ಪ್ರಕೃತಿಗಳಿಂದಲೇ ಉತ್ಪನ್ನವಾಗುತ್ತವೆ ಮತ್ತು ನಾನು ಸಂಪೂರ್ಣವಾದ ಜಗತ್ತಿನ ಉತ್ಪತ್ತಿ ಹಾಗೂ ಪ್ರಳಯವಾಗಿದ್ದೇನೆ, ಅರ್ಥಾತ್ ಸಮಸ್ತ ಜಗತ್ತಿನ ಮೂಲಕಾರಣವಾಗಿದ್ದೇನೆ ಎಂದು ನೀನು ತಿಳಿದುಕೋ. ॥ ೬॥

**ಮತ್ತಃ ಪರತರಂ ನಾನ್ಯತ್ಕಿಂಚಿದಸ್ತಿ ಧನಂಜಯ ।**
**ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ ॥**

ಹೇ ಧನಂಜಯನೇ! ನನಗಿಂತ ಭಿನ್ನವಾದ ಯಾವುದೇ ಪರಮ ಕಾರಣವು ಇಲ್ಲವಾಗಿದೆ. ಈ ಸಂಪೂರ್ಣ ಜಗತ್ತು ಸೂತ್ರದಲ್ಲಿ ನೂಲಿನ ಮಣಿಗಳಂತೆ ನನ್ನಲ್ಲಿ ಪೋಣಿಸಲ್ಪಟ್ಟಿದೆ.

**ರಸೋಽಹಮಪ್ಸು ಕೌಂತೇಯ ಪ್ರಭಾಸ್ಮಿ ಶಶಿಸೂರ್ಯಯೋಃ।**
**ಪ್ರಣವಃ ಸರ್ವವೇದೇಷು ಶಬ್ದಃ ಖೇ ಪೌರುಷಂ ನೃಷು ॥ ೮॥**

ಹೇ ಅರ್ಜುನನೇ! ನಾನು ನೀರಿನಲ್ಲಿ ರಸವಾಗಿದ್ದೇನೆ, ಚಂದ್ರ-ಸೂರ್ಯರಲ್ಲಿ ಪ್ರಕಾಶವಾಗಿದ್ದೇನೆ, ಸಂಪೂರ್ಣ ವೇದಗಳಲ್ಲಿ ಓಂಕಾರವಾಗಿದ್ದೇನೆ, ಆಕಾಶದಲ್ಲಿ ಶಬ್ದ ಮತ್ತು ಪುರುಷರಲ್ಲಿ ಪುರುಷತ್ವವಾಗಿದ್ದೇನೆ. ॥ ೮॥

**ಪುಣ್ಯೋ ಗಂಧಃ ಪೃಥಿವ್ಯಾಂ ಚ ತೇಜಶ್ಚಾಸ್ಮಿ ವಿಭಾವಸೌ ।**
**ಜೀವನಂ ಸರ್ವಭೂತೇಷು ತಪಶ್ಚಾಸ್ಮಿ ತಪಸ್ವಿಷು ॥ ೯॥**

ನಾನು ಪೃಥ್ವಿಯಲ್ಲಿ ಪವಿತ್ರವಾದ ಗಂಧವೂ ಮತ್ತು ಅಗ್ನಿಯಲ್ಲಿ ತೇಜಸ್ಸು ಆಗಿದ್ದೇನೆ. ಹಾಗೆಯೇ ಸಂಪೂರ್ಣ ಭೂತಗಳಲ್ಲಿ ಅವುಗಳ ಜೀವನವಾಗಿದ್ದೇನೆ ಮತ್ತು ತಪಸ್ವಿಗಳಲ್ಲಿ ತಪಸ್ಸು ಆಗಿದ್ದೇನೆ. ॥ ೯॥

**ಬೀಜಂ ಮಾಂ ಸರ್ವಭೂತಾನಾಂ ವಿದ್ಧಿ ಪಾರ್ಥ ಸನಾತನಮ್।**
**ಬುದ್ಧಿರ್ಬುದ್ಧಿಮತಾಮಸ್ಮಿ ತೇಜಸ್ತೇಜಸ್ವಿನಾಮಹಮ್ ॥ ೧೦॥**

ಹೇ ಅರ್ಜುನಾ! ನಾನು ಸಂಪೂರ್ಣ ಪ್ರಾಣಿಗಳ ಸನಾತನವಾದ ಬೀಜವು ಎಂದು ನೀನು ತಿಳಿ. ನಾನು ಬುದ್ಧಿವಂತರ ಬುದ್ಧಿಯೂ ಮತ್ತು ತೇಜಸ್ವಿಗಳ ತೇಜಸ್ಸೂ ಆಗಿದ್ದೇನೆ. ॥ ೧೦॥

**ಬಲಂ ಬಲವತಾಂ ಚಾಹಂ ಕಾಮರಾಗವಿವರ್ಜಿತಮ್ ।**
**ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ ॥**

ಹೇ ಭರತಶ್ರೇಷ್ಠನೆ! ನಾನು ಬಲಶಾಲಿಗಳ, ಆಸಕ್ತಿ ಮತ್ತು ಕಾಮನೆಗಳಿಂದ ರಹಿತವಾದ ಬಲ ಅರ್ಥಾತ್ ಸಾಮರ್ಥ್ಯವಾಗಿದ್ದೇನೆ ಮತ್ತು ಎಲ್ಲ ಪ್ರಾಣಿಗಳಲ್ಲಿ ಧರ್ಮಕ್ಕೆ ಅನುಕೂಲವಾದ ಅರ್ಥಾತ್ ಶಾಸ್ತ್ರಕ್ಕೆ ಅನುಕೂಲವಾದ ಕಾಮವಾಗಿದ್ದೇನೆ.

**ಯೇ ಚೈವ ಸಾತ್ತ್ವಿಕಾ ಭಾವಾ ರಾಜಸಾಸ್ತಾಮಸಾಶ್ಚ ಯೇ ।**
**ಮತ್ತ ಏವೇತಿ ತಾನ್ವಿದ್ಧಿ ನ ತ್ವಹಂ ತೇಷು ತೇ ಮಯಿ ॥ ೧೨॥**

ಇನ್ನೂ ಕೂಡ ಯಾವ ಸತ್ತ್ವಗುಣದಿಂದ ಉತ್ಪನ್ನವಾಗುವ ಭಾವಗಳಿವೆಯೋ ಮತ್ತು ಯಾವ ರಜೋಗುಣದಿಂದ ಹಾಗೂ ತಮೋಗುಣದಿಂದ ಉಂಟಾಗುವ ಭಾವಗಳಿವೆಯೋ, ಅವೆಲ್ಲವುಗಳನ್ನು ನೀನು ನನ್ನಿಂದಲೇ ಉಂಟಾಗುವುವೆಂದು ತಿಳಿ. ಆದರೆ ವಾಸ್ತವವಾಗಿ ಅವುಗಳಲ್ಲಿ ನಾನು ಮತ್ತು ಅವುಗಳು ನನ್ನಲ್ಲಿ ಇಲ್ಲ. ॥ ೧೨॥

**ತ್ರಿಭಿರ್ಗುಣಮಯೈರ್ಭಾವೈರೇಭಿಃ ಸರ್ವಮಿದಂ ಜಗತ್ ।**
**ಮೋಹಿತಂ ನಾಭಿಜಾನಾತಿ ಮಾಮೇಭ್ಯಃ ಪರಮವ್ಯಯಮ್ ॥**

ಗುಣಗಳ ಕಾರ್ಯರೂಪವಾದ ಸಾತ್ವಿಕ, ರಾಜಸ ಮತ್ತು ತಾಮಸಗಳೆಂಬ ಈ ಮೂರೂ ಪ್ರಕಾರದ ಭಾವಗಳಿಂದ ಈ ಎಲ್ಲ ಜಗತ್ತಿನ ಪ್ರಾಣಿ ಸಮುದಾಯವು ಮೋಹಿತವಾಗುತ್ತಿದೆ. ಆದ ಕಾರಣ ಈ ಮೂರು ಗುಣಗಳಿಂದ ಅತೀತನಾದ, ಅವಿನಾಶಿಯಾದ ನನ್ನನ್ನು ತಿಳಿಯುವುದಿಲ್ಲ. ॥ ೧೩॥

**ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ ।**
**ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ**

ಏಕೆಂದರೆ, ಈ ಅಲೌಕಿಕವಾದ ಅರ್ಥಾತ್ ಅತಿ ಅದ್ಭುತವಾದ, ತ್ರಿಗುಣಮಯಿಯಾದ ನನ್ನ ಮಾಯೆಯು ಬಹಳ ದುಸ್ತರವಾಗಿದೆ; ಆದರೆ ಯಾವ ಪುರುಷರು ಕೇವಲ ನನ್ನನ್ನೇ ನಿರಂತರವಾಗಿ ಭಜಿಸುತ್ತಾರೋ ಅವರು ಈ ಮಾಯೆಯನ್ನು ದಾಟಿಬಿಡುತ್ತಾರೆ ಅರ್ಥಾತ್ ಜಗತ್ತಿನಿಂದ ಪಾರಾಗುತ್ತಾರೆ. ॥ ೧೪॥

**ನ ಮಾಂ ದುಷ್ಕೃತಿನೋ ಮೂಢಾಃ ಪ್ರಪದ್ಯಂತೇ ನರಾಧಮಾಃ ।**
**ಮಾಯಯಾಪಹೃತಜ್ಞಾನಾ ಆಸುರಂ ಭಾವಮಾಶ್ರಿತಾಃ ॥ ೧೫ ॥**

ಮಾಯೆಯ ಮೂಲಕ ಯಾರ ಜ್ಞಾನವು ಅಪಹರಿಸಲ್ಪಟ್ಟಿದೆಯೋ ಅಂತಹ ಆಸುರೀಸ್ವಭಾವವನ್ನು ಆಶ್ರಯಿಸಿರುವ ಮನುಷ್ಯರಲ್ಲಿ ನೀಚ ಮತ್ತು ದೂಷಿತ ಕರ್ಮ ಮಾಡುವ ಮೂಢಜನರು ನನ್ನನ್ನು ಭಜಿಸುವುದಿಲ್ಲ. ॥ ೧೫ ॥

**ಚತುರ್ವಿಧಾ ಭಜಂತೇ ಮಾಂ ಜನಾಃ ಸುಕೃತಿನೋಽರ್ಜುನ ।**
**ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಭರತರ್ಷಭ ॥**

ಹೇ ಭರತವಂಶೀಯರಲ್ಲಿ ಶ್ರೇಷ್ಠನಾದ ಅರ್ಜುನಾ! ಉತ್ತಮ ಕರ್ಮಗಳನ್ನು ಮಾಡುವ ಅರ್ಥಾರ್ಥಿ, ಆರ್ತ, ಜಿಜ್ಞಾಸು ಮತ್ತು ಜ್ಞಾನೀ - ಹೀಗೆ ನಾಲ್ಕು ಪ್ರಕಾರದ ಭಕ್ತಜನರು ನನ್ನನ್ನು ಭಜಿಸುತ್ತಾರೆ. ॥ ೧೬॥

**ತೇಷಾಂ ಜ್ಞಾನೀ ನಿತ್ಯಯುಕ್ತ ಏಕಭಕ್ತಿರ್ವಿಶಿಷ್ಯತೇ ।**
**ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಂ ಸ ಚ ಮಮ ಪ್ರಿಯಃ**

ಅವರಲ್ಲಿ ನಿತ್ಯವೂ ನನ್ನಲ್ಲಿ ಏಕೀಭಾವದಿಂದ ಸ್ಥಿತನಾಗಿರುವ ಅನನ್ಯ ಪ್ರೇಮ ಭಕ್ತಿಯುಳ್ಳ ಜ್ಞಾನೀ ಭಕ್ತನು ಅತಿ ಉತ್ತಮ ನಾಗಿದ್ದಾನೆ. ಏಕೆಂದರೆ ನನ್ನನ್ನು ತತ್ತ್ವದಿಂದ ತಿಳಿಯುವ ಜ್ಞಾನಿಗೆ ನಾನು ಅತ್ಯಂತ ಪ್ರಿಯನಾಗಿದ್ದೇನೆ ಮತ್ತು ಆ ಜ್ಞಾನಿಯು ನನಗೆ ಅತ್ಯಂತ ಪ್ರಿಯನಾಗಿದ್ದಾನೆ. ॥೧೭॥

**ಉದಾರಾಃ ಸರ್ವ ಏವೈತೇ ಜ್ಞಾನೀ ತ್ವಾತ್ಮೈವ ಮೇ ಮತಮ್।**
**ಆಸ್ಥಿತಃ ಸ ಹಿ ಯುಕ್ತಾತ್ಮಾ ಮಾಮೇವಾನುತ್ತಮಾಂ ಗತಿಮ್ ॥**

ಇವರೆಲ್ಲರೂ ಉದಾರರಾಗಿದ್ದಾರೆ ಆದರೆ, ಜ್ಞಾನಿಯಾದರೋ ಸಾಕ್ಷಾತ್ ನನ್ನ ಸ್ವರೂಪವೇ ಆಗಿದ್ದಾನೆ ಎಂಬುದು ನನ್ನ ಮತವಾಗಿದೆ. ಏಕೆಂದರೆ, ಮದ್ಗತ ಮನ-ಬುದ್ಧಿಯುಳ್ಳ

ಜ್ಞಾನಿಭಕ್ತನಾದ ಅವನು ಅತ್ಯುತ್ತಮ ಗತಿಸ್ವರೂಪೀ ನನ್ನಲ್ಲಿಯೇ ಒಳ್ಳೆಯ ಪ್ರಕಾರದಿಂದ ಸ್ಥಿತನಾಗಿದ್ದಾನೆ. ॥ ೧೮ ॥

**ಬಹೂನಾಂ ಜನ್ಮನಾಮಂತೇ ಜ್ಞಾನವಾನ್ಮಾಂ ಪ್ರಪದ್ಯತೇ ।**
**ವಾಸುದೇವಃ ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ ॥ ೧೯॥**

ಅನೇಕ ಜನ್ಮಗಳ ಕೊನೆಯ ಜನ್ಮದಲ್ಲಿ ತತ್ತ್ವಜ್ಞಾನವನ್ನು ಪಡೆದ ಪುರುಷನು ಎಲ್ಲವೂ 'ವಾಸುದೇವನೇ ಆಗಿದ್ದಾನೆ' ಈ ಪ್ರಕಾರವಾಗಿ ನನ್ನನ್ನು ಭಜಿಸುತ್ತಾನೋ, ಅಂತಹ ಮಹಾತ್ಮನು ಅತ್ಯಂತ ದುರ್ಲಭನಾಗಿದ್ದಾನೆ. ॥ ೧೯॥

**ಕಾಮೈಸ್ತೈಸ್ತೈರ್ಹೃತಜ್ಞಾನಾಃ ಪ್ರಪದ್ಯಂತೇಽನ್ಯದೇವತಾಃ।**
**ತಂ ತಂ ನಿಯಮಮಾಸ್ಥಾಯ ಪ್ರಕೃತ್ಯಾ ನಿಯತಾಃ ಸ್ವಯಾ ॥ ೨೦॥**

ಆಯಾಯಾ ಭೋಗಗಳ ಕಾಮನೆಯ ಮೂಲಕ ಯಾರ ಜ್ಞಾನವು ಅಪಹರಿಸಲ್ಪಟ್ಟಿದೆಯೋ, ಆ ಜನರು ತಮ್ಮ ಸ್ವಭಾವದಿಂದ ಪ್ರೇರಿತರಾಗಿ ಆಯಾಯಾ ನಿಯಮಗಳನ್ನು ಧಾರಣೆಮಾಡಿ ಬೇರೆ ದೇವತೆಗಳನ್ನು ಭಜಿಸುತ್ತಾರೆ ಅರ್ಥಾತ್ ಪೂಜಿಸುತ್ತಾರೆ. ॥ ೨೦॥

**ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾರ್ಚಿತುಮಿಚ್ಛತಿ।**
**ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಮ್ ॥**

ಯಾವ ಯಾವ ಸಕಾಮ ಭಕ್ತರು ಯಾವ ಯಾವ ದೇವತೆಯ ಸ್ವರೂಪವನ್ನು ಶ್ರದ್ಧೆಯಿಂದ ಪೂಜಿಸಲು

ಬಯಸುತ್ತಾರೋ ಆಯಾ ಭಕ್ತನ ಶ್ರದ್ಧೆಯನ್ನು ನಾನು ಅದೇ ದೇವತೆಯ ಕುರಿತು ಸ್ಥಿರಗೊಳಿಸುತ್ತೇನೆ.॥೨೧॥

**ಸ ತಯಾ ಶ್ರದ್ಧಯಾ ಯುಕ್ತಸ್ತಸ್ಯಾರಾಧನಮೀಹತೇ ।**
**ಲಭತೇ ಚ ತತಃ ಕಾಮಾನ್ಮಯೈವ ವಿಹಿತಾನ್ಹಿ ತಾನ್ ॥ ೨೨॥**

ಆ ಪುರುಷನು ಅಂತಹ ಶ್ರದ್ಧೆಯಿಂದ ಯುಕ್ತನಾಗಿ ಆ ದೇವತೆಯ ಪೂಜೆಯನ್ನು ಮಾಡುತ್ತಾನೆ ಮತ್ತು ಆ ದೇವತೆಯಿಂದ ನನ್ನಿಂದಲೇ ವಿಧಿಸಲ್ಪಟ್ಟ ಆ ಬಯಸಿದ ಭೋಗಗಳನ್ನು ನಿಸ್ಸಂದೇಹವಾಗಿ ಪಡೆಯುತ್ತಾನೆ. ॥ ೨೨ ॥

**ಅಂತವತ್ತು ಫಲಂ ತೇಷಾಂ ತದ್ಭವತ್ಯಲ್ಪಮೇಧಸಾಮ್ ।**
**ದೇವಾನ್‌ದೇವಯಜೋ ಯಾಂತಿ ಮದ್ಭಕ್ತಾ ಯಾಂತಿ ಮಾಮಪಿ**

ಆದರೆ ಆ ಅಲ್ಪಬುದ್ಧಿಯುಳ್ಳವರ ಆ ಫಲವು ನಾಶಯುಕ್ತವಾಗಿದೆ, ಹಾಗೂ ಆ ದೇವತೆಗಳನ್ನು ಪೂಜಿಸುವವರು ದೇವತೆಗಳನ್ನು ಪಡೆಯುತ್ತಾರೆ. ಆದರೆ ನನ್ನ ಭಕ್ತರು ಹೇಗಾದರೂ ಭಜಿಸಲಿ, ಕಡೆಯಲ್ಲಿ ಅವರು ನನ್ನನ್ನೇ ಸೇರುತ್ತಾರೆ.॥ ೨೩॥

**ಅವ್ಯಕ್ತಂ ವ್ಯಕ್ತಿಮಾಪನ್ನಂ ಮನ್ಯಂತೇ ಮಾಮಬುದ್ಧಯಃ ।**
**ಪರಂ ಭಾವಮಜಾನಂತೋ ಮಮಾವ್ಯಯಮನುತ್ತಮಮ್ ॥**

ಬುದ್ಧಿಹೀನರಾದ ಪುರುಷರು ನನ್ನ ಉತ್ಕೃಷ್ಟವೂ, ಅವಿನಾಶಿಯೂ ಆದ ಪರಮ ಭಾವವನ್ನು ತಿಳಿಯದೆ ಮನಸ್ಸು-ಇಂದ್ರಿಯಗಳಿಗಿಂತ ಪರನಾದ ಸಚ್ಚಿದಾನಂದಘನ ಪರಮಾತ್ಮ

ನಾದ ನನ್ನನ್ನು ಮನುಷ್ಯರಂತೆ ಹುಟ್ಟಿ ಬಂದು ವ್ಯಕ್ತಿಭಾವವನ್ನು ಪಡೆದಿರುವನೆಂದು ತಿಳಿಯುತ್ತಾರೆ. ॥ ೨೪ ॥

**ನಾಹಂ ಪ್ರಕಾಶಃ ಸರ್ವಸ್ಯ ಯೋಗಮಾಯಾಸಮಾವೃತಃ।**
**ಮೂಢೋಽಯಂ ನಾಭಿಜಾನಾತಿ ಲೋಕೋ ಮಾಮಜಮವ್ಯಯಮ್॥**

ನನ್ನ ಯೋಗಮಾಯೆಯಿಂದ ಅಡಗಿರುವ ನಾನು ಎಲ್ಲರಿಗೂ ಪ್ರತ್ಯಕ್ಷನಾಗುವುದಿಲ್ಲ. ಆದ್ದರಿಂದ ಈ ಅಜ್ಞಾನಿ ಜನಸಮುದಾಯವು ಜನ್ಮರಹಿತನಾದ, ಅವಿನಾಶಿಯಾದ, ಪರಮೇಶ್ವರನಾದ ನನ್ನನ್ನು ತಿಳಿಯುವುದಿಲ್ಲ ಅರ್ಥಾತ್ ನನ್ನನ್ನು ಜನನ-ಮರಣವುಳ್ಳವನೆಂದು ತಿಳಿಯುತ್ತದೆ. ॥ ೨೫॥

**ವೇದಾಹಂ ಸಮತೀತಾನಿ ವರ್ತಮಾನಾನಿ ಚಾರ್ಜುನ ।**
**ಭವಿಷ್ಯಾಣಿ ಚ ಭೂತಾನಿ ಮಾಂ ತು ವೇದ ನ ಕಶ್ಚನ ॥ ೨೬॥**

ಹೇ ಅರ್ಜುನಾ! ಒಂದೆ ಕಳೆದು ಹೋದ ಮತ್ತು ವರ್ತಮಾನದಲ್ಲಿ ಇರುವ ಹಾಗೂ ಮುಂದೆ ಹುಟ್ಟಲಿರುವ ಎಲ್ಲ ಪ್ರಾಣಿಗಳನ್ನು ನಾನು ಬಲ್ಲೆ. ಆದರೆ, ನನ್ನನ್ನು ಶ್ರದ್ಧಾ-ಭಕ್ತಿರಹಿತನಾದ ಯಾವ ಪುರುಷನೂ ತಿಳಿಯುವುದಿಲ್ಲ. ॥ ೨೬ ॥

**ಇಚ್ಛಾದ್ವೇಷಸಮುತ್ಥೇನ ದ್ವಂದ್ವಮೋಹೇನ ಭಾರತ ।**
**ಸರ್ವಭೂತಾನಿ ಸಮ್ಮೋಹಂ ಸರ್ಗೇ ಯಾಂತಿ ಪರಂತಪ ॥**

ಹೇ ಭರತವಂಶೀಯನಾದ ಅರ್ಜುನನೇ! ಜಗತ್ತಿನಲ್ಲಿ ಇಚ್ಛೆ (ರಾಗ) ಮತ್ತು ದ್ವೇಷದಿಂದ ಉಂಟಾಗುವ ಸುಖ-

ದುಃಖಾದಿ ದ್ವಂದ್ವ ರೂಪೀ ಮೋಹದಿಂದ ಸಂಪೂರ್ಣ ಪ್ರಾಣಿಗಳು ಅತ್ಯಂತ ಅಜ್ಞತೆಯನ್ನು ಹೊಂದುತ್ತಿದ್ದಾರೆ. ॥ ೨೭॥

**ಯೇಷಾಂ ತ್ವಂತಗತಂ ಪಾಪಂ ಜನಾನಾಂ ಪುಣ್ಯಕರ್ಮಣಾಮ್।**
**ತೇ ದ್ವಂದ್ವಮೋಹನಿರ್ಮುಕ್ತಾ ಭಜಂತೇ ಮಾಂ ದೃಢವ್ರತಾಃ ॥**

ಆದರೆ, ನಿಷ್ಕಾಮ ಭಾವದಿಂದ ಶ್ರೇಷ್ಠವಾದ ಕರ್ಮಗಳ ಆಚರಣೆ ಮಾಡುವ ಯಾವ ಪುರುಷರ ಪಾಪಗಳು ನಷ್ಟವಾಗಿ ಹೋಗಿವೆಯೋ, ರಾಗ-ದ್ವೇಷಜನಿತ ದ್ವಂದ್ವರೂಪೀ ಮೋಹದಿಂದ ಮುಕ್ತರಾದ ದೃಢನಿಶ್ಚಯವುಳ್ಳ ಆ ಭಕ್ತರು ನನ್ನನ್ನು ಎಲ್ಲ ಪ್ರಕಾರದಿಂದಲೂ ಭಜಿಸುತ್ತಾರೆ. ॥ ೨೮॥

**ಜರಾಮರಣಮೋಕ್ಷಾಯ ಮಾಮಾಶ್ರಿತ್ಯ ಯತಂತಿ ಯೇ ।**
**ತೇ ಬ್ರಹ್ಮ ತದ್ವಿದುಃ ಕೃತ್ಸ್ನಮಧ್ಯಾತ್ಮಂ ಕರ್ಮ ಚಾಖಿಲಮ್ ॥ ೨೯॥**

ಯಾರು ನನ್ನಲ್ಲಿ ಶರಣಾಗಿ ಮುಪ್ಪು ಮತ್ತು ಸಾವಿನಿಂದ ಬಿಡುಗಡೆ ಹೊಂದಲು ಪ್ರಯತ್ನ ಮಾಡುತ್ತಾರೋ ಆ ಪುರುಷರು ಆ ಬ್ರಹ್ಮವನ್ನೂ, ಸಂಪೂರ್ಣವಾಗಿ ಅಧ್ಯಾತ್ಮವನ್ನೂ ಹಾಗೂ ಸಂಪೂರ್ಣ ಕರ್ಮವನ್ನು ತಿಳಿಯುತ್ತಾರೆ. ॥ ೨೯॥

**ಸಾಧಿಭೂತಾಧಿದೈವಂ ಮಾಂ ಸಾಧಿಯಜ್ಞಂ ಚ ಯೇ ವಿದುಃ ।**
**ಪ್ರಯಾಣಕಾಲೇಽಪಿ ಚ ಮಾಂ ತೇ ವಿದುರ್ಯುಕ್ತಚೇತಸಃ ॥**

ಯಾವ ಪುರುಷರು ಅಧಿಭೂತ ಮತ್ತು ಅಧಿದೈವದ ಸಹಿತ ಹಾಗೂ ಅಧಿಯಜ್ಞದ ಸಹಿತ (ಎಲ್ಲರ ಆತ್ಮರೂಪಿಯಾದ) ನನ್ನನ್ನು ಅಂತ್ಯಕಾಲದಲ್ಲಿಯೂ ಸಹ ತಿಳಿಯುತ್ತಾರೆಯೋ ಆ

ಯುಕ್ತಚಿತ್ತರಾದ ಪುರುಷರು ನನ್ನನ್ನೇ ಅರಿಯುತ್ತಾರೆ ಅರ್ಥಾತ್ ಪಡೆಯುತ್ತಾರೆ. ॥ ೩೦॥

ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು
ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ
ಜ್ಞಾನವಿಜ್ಞಾನಯೋಗೋನಾಮ ಸಪ್ತಮೋಽಧ್ಯಾಯಃ ॥ ೭ ॥

❀ ❀ ❀ ❀ ❀

## ॥ ಅಥ ಅಷ್ಟಮೋಽಧ್ಯಾಯಃ॥

## ಅಕ್ಷರಬ್ರಹ್ಮಯೋಗವು

### ಅರ್ಜುನ ಉವಾಚ

**ಕಿಂ ತದ್ಬ್ರಹ್ಮ ಕಿಮಧ್ಯಾತ್ಮಂ ಕಿಂ ಕರ್ಮ ಪುರುಷೋತ್ತಮ ।**
**ಅಧಿಭೂತಂ ಚ ಕಿಂ ಪ್ರೋಕ್ತಮಧಿದೈವಂ ಕಿಮುಚ್ಯತೇ ॥ ೧॥**

ಅರ್ಜುನನು ಹೇಳಿದನು - ಹೇ ಪುರುಷೋತ್ತಮ! ಆ ಬ್ರಹ್ಮವು ಯಾವುದು? ಅಧ್ಯಾತ್ಮವೆಂದರೆ ಏನು ಮತ್ತು ಕರ್ಮವೆಂದರೆ ಯಾವುದು? ಅಧಿಭೂತವೆಂಬ ಹೆಸರಿನಿಂದ ಯಾವುದನ್ನು ಹೇಳಲಾಗಿದೆ? ಮತ್ತು ಅಧಿದೈವವೆಂದು ಯಾವುದಕ್ಕೆ ಹೇಳುತ್ತಾರೆ? ॥ ೧॥

**ಅಧಿಯಜ್ಞಃ ಕಥಂ ಕೋಽತ್ರ, ದೇಹೇಽಸ್ಮಿನ್ ಮಧುಸೂದನ ।**
**ಪ್ರಯಾಣಕಾಲೇ ಚ ಕಥಂ ಜ್ಞೇಯೋಽಸಿ ನಿಯತಾತ್ಮಭಿಃ ॥ ೨ ॥**

ಹೇ ಮಧುಸೂದನ! ಇಲ್ಲಿ ಅಧಿಯಜ್ಞ ಎಂದರೆ ಯಾರು? ಮತ್ತು ಅವನು ಈ ಶರೀರದಲ್ಲಿ ಹೇಗಿದ್ದಾನೆ?

ಹಾಗೂ ಯುಕ್ತ ಚಿತ್ತವುಳ್ಳ ಪುರುಷರ ಮೂಲಕ ಅಂತ್ಯಕಾಲದಲ್ಲಿ ನೀನು ಯಾವ ಪ್ರಕಾರದಿಂದ ತಿಳಿಯಲು ಬರುತ್ತೀಯೆ?

ಶ್ರೀಭಗವಾನುವಾಚ

**ಅಕ್ಷರಂ ಬ್ರಹ್ಮ ಪರಮಂ ಸ್ವಭಾವೋಽಧ್ಯಾತ್ಮಮುಚ್ಯತೇ ।**
**ಭೂತಭಾವೋದ್ಭವಕರೋ ವಿಸರ್ಗಃ ಕರ್ಮಸಂಜ್ಞಿತಃ ॥ ೩॥**

ಶ್ರೀಭಗವಂತನು ಹೇಳಿದನು - ಪರಮ ಅಕ್ಷರವು 'ಬ್ರಹ್ಮ' ವಾಗಿದೆ ತನ್ನ ಸ್ವರೂಪ ಅರ್ಥಾತ್ ಜೀವಾತ್ಮನು ಅಧ್ಯಾತ್ಮ ವೆಂಬ ಹೆಸರಿನಿಂದ ಹೇಳಲ್ಪಡುತ್ತಾನೆ ಹಾಗೂ ಭೂತಗಳ ಭಾವವನ್ನು ಉಂಟುಮಾಡುವ ಯಾವ ತ್ಯಾಗ ಅರ್ಥಾತ್ ಸೃಷ್ಟಿರಚನಾ ರೂಪೀ ಕ್ರಿಯೆಯಿದೆಯೋ ಅದು 'ಕರ್ಮ' ಎಂಬ ಹೆಸರಿನಿಂದ ಹೇಳಲ್ಪಟ್ಟಿದೆ. ॥ ೩॥

**ಅಧಿಭೂತಂ ಕ್ಷರೋ ಭಾವಃ ಪುರುಷಶ್ಚಾಧಿದೈವತಮ್ ।**
**ಅಧಿಯಜ್ಞೋಽಹಮೇವಾತ್ರ ದೇಹೇ ದೇಹಭೃತಾಂ ವರ ॥ ೪॥**

ಉತ್ಪತ್ತಿ-ವಿನಾಶ ಧರ್ಮವುಳ್ಳ ಎಲ್ಲ ಪದಾರ್ಥಗಳೂ ಅಧಿಭೂತವಾಗಿವೆ. ಹಿರಣ್ಮಯ ಪುರುಷನು ಅಧಿದೈವವಾಗಿದ್ದಾನೆ ಮತ್ತು ದೇಹಧಾರಿಗಳಲ್ಲಿ ಶ್ರೇಷ್ಠನಾದ ಅರ್ಜುನನೇ! ಈ ಶರೀರದಲ್ಲಿ ವಾಸುದೇವನಾದ ನಾನೇ ಅಂತರ್ಯಾಮಿ ರೂಪದಿಂದ ಅಧಿಯಜ್ಞನಾಗಿದ್ದೇನೆ ॥ ೪॥

**ಅಂತಕಾಲೇ ಚ ಮಾಮೇವ ಸ್ಮರನ್ಮುಕ್ತ್ವಾ ಕಲೇವರಮ್ ।**
**ಯಃ ಪ್ರಯಾತಿ ಸ ಮದ್ಭಾವಂ ಯಾತಿ ನಾಸ್ತ್ಯತ್ರ ಸಂಶಯಃ ॥**

ಯಾವ ಪುರುಷನು ಅಂತ್ಯಕಾಲದಲ್ಲಿಯೂ ಕೂಡ ನನ್ನನ್ನೇ ಸ್ಮರಿಸುತ್ತ ಶರೀರವನ್ನು ತ್ಯಾಗಮಾಡಿ ಬಿಡುತ್ತಾನೋ ಅವನು ನನ್ನ ಸಾಕ್ಷಾತ್ ಸ್ವರೂಪವನ್ನು ಪಡೆಯುತ್ತಾನೆ. ಇದರಲ್ಲಿ ಯಾವುದೇ ಸಂಶಯವೂ ಇರುವುದಿಲ್ಲ. ॥ ೫ ॥

**ಯಂ ಯಂ ವಾಪಿ ಸ್ಮರನ್ಭಾವಂ ತ್ಯಜತ್ಯಂತೇ ಕಲೇವರಮ್ ।**
**ತಂ ತಮೇವೈತಿ ಕೌಂತೇಯ ಸದಾ ತದ್ಭಾವಭಾವಿತಃ ॥ ೬॥**

ಹೇ ಕುಂತೀಪುತ್ರನಾದ ಅರ್ಜುನ! ಈ ಮನುಷ್ಯನು ಅಂತ್ಯಕಾಲದಲ್ಲಿ ಯಾವ ಯಾವ ಭಾವವನ್ನು ಸ್ಮರಣೆ ಮಾಡುತ್ತ ಶರೀರವನ್ನು ತ್ಯಜಿಸುತ್ತಾನೋ ಅದನ್ನೇ ಪಡೆಯುತ್ತಾನೆ; ಏಕೆಂದರೆ ಅವನು ಸದಾಕಾಲ ಅದೇ ಭಾವದಿಂದ ಭಾವಿತನಾಗಿದ್ದಾನೆ. ॥ ೬॥

**ತಸ್ಮಾತ್ಸರ್ವೇಷು ಕಾಲೇಷು ಮಾಮನುಸ್ಮರ ಯುಧ್ಯ ಚ ।**
**ಮಯ್ಯರ್ಪಿತಮನೋಬುದ್ಧಿರ್ಮಾಮೇವೈಷ್ಯಸ್ಯಸಂಶಯಮ್ ॥**

ಆದ್ದರಿಂದ ಹೇ ಅರ್ಜುನನೇ! ನೀನು ಎಲ್ಲ ಸಮಯದಲ್ಲಿ ನಿರಂತರವಾಗಿ ನನ್ನ ಸ್ಮರಣೆಮಾಡು ಮತ್ತು ಯುದ್ಧವನ್ನೂ ಮಾಡು. ಈ ಪ್ರಕಾರ ನನ್ನಲ್ಲಿ ಅರ್ಪಿತವಾದ ಮನಸ್ಸು-ಬುದ್ಧಿಯಿಂದ ಯುಕ್ತನಾಗಿ ನೀನು ನಿಃಸಂದೇಹವಾಗಿ ನನ್ನನ್ನೇ ಪಡೆಯುವೆ ॥ ೭॥

**ಅಭ್ಯಾಸಯೋಗಯುಕ್ತೇನ ಚೇತಸಾ ನಾನ್ಯಗಾಮಿನಾ ।**
**ಪರಮಂ ಪುರುಷಂ ದಿವ್ಯಂ ಯಾತಿ ಪಾರ್ಥಾನುಚಿಂತಯನ್ ॥**

ಹೇ ಪಾರ್ಥನೇ! ಪರಮೇಶ್ವರನ ಧ್ಯಾನದ ಅಭ್ಯಾಸ ರೂಪೀ ಯೋಗದಿಂದ ಯುಕ್ತನಾಗಿ ಬೇರೆಡೆಗೆ ಹೋಗದಿರುವ ಚಿತ್ತದಿಂದ ನಿರಂತರ ಚಿಂತನೆ ಮಾಡುತ್ತ ಮನುಷ್ಯನು ಪರಮ ಪ್ರಕಾಶ ಸ್ವರೂಪೀ ದಿವ್ಯ ಪುರುಷನನ್ನು ಅರ್ಥಾತ್ ಪರಮೇಶ್ವರ ನನ್ನೇ ಹೊಂದುತ್ತಾನೆ ಇದು ನಿಯಮವಾಗಿದೆ. ॥ ೮॥

**ಕವಿಂ ಪುರಾಣಮನುಶಾಸಿತಾರ-**
**ಮಣೋರಣೀಯಾಂಸಮನುಸ್ಮರೇದ್ಯಃ**
**ಸರ್ವಸ್ಯ ಧಾತಾರಮಚಿಂತ್ಯರೂಪ-**
**ಮಾದಿತ್ಯವರ್ಣಂ ತಮಸಃ ಪರಸ್ತಾತ್**

ಸರ್ವಜ್ಞನೂ, ಅನಾದಿಯೂ, ಎಲ್ಲರನ್ನು ಆಳುವವನೂ, ಸೂಕ್ಷ್ಮಕ್ಕಿಂತ ಅತಿಸೂಕ್ಷ್ಮನೂ, ಎಲ್ಲರ ಧಾರಣೆ-ಪೋಷಣೆ ಮಾಡುವವನೂ, ಅಚಿಂತ್ಯಸ್ವರೂಪನೂ, ಸೂರ್ಯನಂತೆ ನಿತ್ಯ ಚೇತನ ಪ್ರಕಾಶರೂಪನೂ ಮತ್ತು ಅವಿದ್ಯೆಗಿಂತ ಪರ, ಶುದ್ಧನೂ ಆದ ಸಚ್ಚಿದಾನಂದಘನ ಪರಮೇಶ್ವರನ ಸ್ಮರಣೆಯನ್ನು ಯಾವ ಪುರುಷನು ಮಾಡುತ್ತಾನೋ — ॥ ೯॥

**ಪ್ರಯಾಣಕಾಲೇ ಮನಸಾಚಲೇನ**
**ಭಕ್ತ್ಯಾ ಯುಕ್ತೋ ಯೋಗಬಲೇನ ಚೈವ ।**
**ಭ್ರುವೋರ್ಮಧ್ಯೇ ಪ್ರಾಣಮಾವೇಶ್ಯ ಸಮ್ಯಕ್**
**ಸ ತಂ ಪರಂ ಪುರುಷಮುಪೈತಿ ದಿವ್ಯಮ್ ॥ ೧೦॥**

ಆ ಭಕ್ತಿಯುಕ್ತನಾದ ಪುರುಷನು ಅಂತ್ಯಕಾಲದಲ್ಲಿಯೂ ಯೋಗಬಲದಿಂದ ಭ್ರೂಮಧ್ಯದಲ್ಲಿ ಪ್ರಾಣವನ್ನು ಒಳ್ಳೆ

ಪ್ರಕಾರದಿಂದ ಸ್ಥಾಪನೆ ಮಾಡಿ ಮತ್ತೆ ನಿಶ್ಚಲವಾದ ಮನಸ್ಸಿನಿಂದ ಸ್ಮರಣೆ ಮಾಡುತ್ತ ಆ ದಿವ್ಯ ಸ್ವರೂಪನಾದ ಪರಮ ಪುರುಷ ಪರಮಾತ್ಮನನ್ನೇ ಪಡೆಯುತ್ತಾನೆ. ॥ ೧೦॥

**ಯದಕ್ಷರಂ ವೇದವಿದೋ ವದಂತಿ**
**ವಿಶಂತಿ ಯದ್ಯತಯೋ ವೀತರಾಗಾಃ ।**
**ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ**
**ತತ್ತೇ ಪದಂ ಸಂಗ್ರಹೇಣ ಪ್ರವಕ್ಷ್ಯೇ ॥ ೧೧॥**

ವೇದವನ್ನು ತಿಳಿದ ವಿದ್ವಾಂಸರು ಯಾವ ಸಚ್ಚಿದಾನಂದ ಘನರೂಪೀ ಪರಮಪದವನ್ನು ಅವಿನಾಶೀ ಎಂದು ಹೇಳುತ್ತಾರೋ, ಆಸಕ್ತಿರಹಿತರಾದ ಯತ್ನಶೀಲ ಸಂನ್ಯಾಸೀ ಮಹಾತ್ಮರು ಯಾವುದರಲ್ಲಿ ಪ್ರವೇಶ ಮಾಡುತ್ತಾರೋ ಮತ್ತು ಯಾವ ಪರಮಪದವನ್ನು ಬಯಸುವ ಬ್ರಹ್ಮಚಾರಿಗಳು ಬ್ರಹ್ಮಚರ್ಯದ ಆಚರಣೆಯನ್ನು ಮಾಡುತ್ತಾರೋ ಆ ಪರಮ ಪದವನ್ನು ನಾನು ನಿನಗಾಗಿ ಸಂಕ್ಷೇಪವಾಗಿ ಹೇಳುವೆನು. ॥ ೧೧॥

**ಸರ್ವದ್ವಾರಾಣಿ ಸಂಯಮ್ಯ ಮನೋ ಹೃದಿ ನಿರುಧ್ಯ ಚ ।**
**ಮೂರ್ಧ್ನ್ಯಾಧಾಯಾತ್ಮನಃ ಪ್ರಾಣಮಾಸ್ಥಿತೋ ಯೋಗಧಾರಣಾಮ್ ॥**
**ಓಮಿತ್ಯೇಕಾಕ್ಷರಂ ಬ್ರಹ್ಮ ವ್ಯಾಹರನ್ಮಾಮನುಸ್ಮರನ್ ।**
**ಯಃ ಪ್ರಯಾತಿ ತ್ಯಜನ್ದೇಹಂ ಸ ಯಾತಿ ಪರಮಾಂ ಗತಿಮ್ ॥**

ಎಲ್ಲ ಇಂದ್ರಿಯಗಳ ದ್ವಾರಗಳನ್ನು ತಡೆದು ಹಾಗೂ ಮನಸ್ಸನ್ನು ಹೃದ್ದೇಶದಲ್ಲಿ ಸ್ಥಿರವಾಗಿಸಿ ಮತ್ತೆ ಆ ಗೆಲ್ಲಲ್ಪಟ್ಟ ಮನಸ್ಸಿನ ಮೂಲಕ ಪ್ರಾಣವನ್ನು ಮಸ್ತಕದಲ್ಲಿ ಸ್ಥಾಪಿಸಿಕೊಂಡು ಪರಮಾತ್ಮನ ಸಂಬಂಧವಾದ ಯೋಗಧಾರಣೆಯಲ್ಲಿ ಸ್ಥಿರನಾಗಿದ್ದು ಯಾವ ಪುರುಷನು 'ಓಂ' ಎಂಬ ಈ ಏಕಾಕ್ಷರರೂಪೀ ಬ್ರಹ್ಮವನ್ನು ಉಚ್ಚರಿಸುತ್ತಾ ಮತ್ತು ಅದರ ಅರ್ಥಸ್ವರೂಪೀ ನಿರ್ಗುಣ ಬ್ರಹ್ಮನಾದ ನನ್ನನ್ನು ಚಿಂತನೆಮಾಡುತ್ತಾ ಶರೀರವನ್ನು ತ್ಯಜಿಸಿ ಹೋಗುತ್ತಾನೋ ಆ ಪುರುಷನು ಪರಮಗತಿಯನ್ನು ಹೊಂದುತ್ತಾನೆ. ॥ ೧೨ – ೧೩॥

**ಅನನ್ಯಚೇತಾಃ ಸತತಂ ಯೋ ಮಾಂ ಸ್ಮರತಿ ನಿತ್ಯಶಃ ।**
**ತಸ್ಯಾಹಂ ಸುಲಭಃ ಪಾರ್ಥ ನಿತ್ಯಯುಕ್ತಸ್ಯ ಯೋಗಿನಃ ॥ ೧೪॥**

ಹೇ ಅರ್ಜುನನೇ! ಯಾವ ಪುರುಷನು ನನ್ನಲ್ಲಿ ಅನನ್ಯಚಿತ್ತನಾಗಿ ಸದಾಕಾಲ ನಿರಂತರ ಪುರುಷೋತ್ತಮನಾದ ನನ್ನನ್ನು ಸ್ಮರಿಸುತ್ತಾನೋ, ಆ ನಿತ್ಯ-ನಿರಂತರ ನನ್ನಲ್ಲಿ ಯುಕ್ತನಾದ ಯೋಗಿಗೆ ನಾನು ಸುಲಭನಾಗಿದ್ದೇನೆ ಅರ್ಥಾತ್ ಅವನಿಗೆ ಸಹಜವಾಗಿಯೇ ಪ್ರಾಪ್ತನಾಗುತ್ತೇನೆ. ॥ ೧೪॥

**ಮಾಮುಪೇತ್ಯ ಪುನರ್ಜನ್ಮ ದುಃಖಾಲಯಮಶಾಶ್ವತಮ್ ।**
**ನಾಪ್ನುವಂತಿ ಮಹಾತ್ಮಾನಃ ಸಂಸಿದ್ಧಿಂ ಪರಮಾಂ ಗತಾಃ ॥ ೧೫॥**

ಪರಮ ಸಿದ್ಧಿಯನ್ನು ಪಡೆದ ಮಹಾತ್ಮಾಜನರು ನನ್ನನ್ನು ಪಡೆದುಕೊಂಡು ದುಃಖದ ಆಲಯವೂ ಮತ್ತು ಕ್ಷಣಭಂಗುರವೂ ಆದ ಪುನರ್ಜನ್ಮವನ್ನು ಪಡೆಯುವುದಿಲ್ಲ. ॥ ೧೫ ॥

**ಆಬ್ರಹ್ಮಭುವನಾಲ್ಲೋಕಾಃ ಪುನರಾವರ್ತಿನೋಽರ್ಜುನ ।**
**ಮಾಮುಪೇತ್ಯ ತು ಕೌಂತೇಯ ಪುನರ್ಜನ್ಮ ನ ವಿದ್ಯತೇ ॥ ೧೬॥**

ಹೇ ಅರ್ಜುನನೇ! ಬ್ರಹ್ಮಲೋಕದವರೆಗೆ ಎಲ್ಲ ಲೋಕಗಳು ಪುನರಾವರ್ತಿಗಳಾಗಿವೆ, ಆದರೆ, ಹೇ ಕುಂತೀ ಪುತ್ರನೇ! ನನ್ನನ್ನು ಪಡೆದ ನಂತರ ಪುನರ್ಜನ್ಮವು ಇರುದಿಲ್ಲ; ಏಕೆಂದರೆ ನಾನು ಕಾಲಾತೀತನಾಗಿದ್ದೇನೆ ಮತ್ತು ಈ ಎಲ್ಲ ಬ್ರಹ್ಮಾದಿ ಲೋಕಗಳು ಕಾಲನ ಮೂಲಕ ಸೀಮಿತವಾಗಿರುವುದರಿಂದ ಅನಿತ್ಯವಾಗಿವೆ. ॥ ೧೬॥

**ಸಹಸ್ರಯುಗಪರ್ಯಂತಮಹರ್ಯದ್ಬ್ರಹ್ಮಣೋ ವಿದುಃ ।**
**ರಾತ್ರಿಂ ಯುಗಸಹಸ್ರಾಂತಾಂ ತೇಽಹೋರಾತ್ರವಿದೋ ಜನಾಃ**

ಬ್ರಹ್ಮದೇವರ ಒಂದು ಹಗಲನ್ನು ಒಂದು ಸಾವಿರ ಚತುರ್ಯುಗಗಳವರೆಗಿನ ಅವಧಿಯೆಂದೂ ಮತ್ತು ರಾತ್ರಿಯನ್ನು ಕೂಡ ಒಂದು ಸಾವಿರ ಚತುರ್ಯುಗಗಳ ವರೆಗಿನ ಅವಧಿಯೆಂದೂ ಯಾವ ಪುರುಷರು ತತ್ತ್ವದಿಂದ ತಿಳಿಯುತ್ತಾರೋ, ಆ ಯೋಗಿಜನರು ಕಾಲದ ತತ್ತ್ವವನ್ನು ತಿಳಿದವರಾಗಿದ್ದಾರೆ.

**ಅವ್ಯಕ್ತಾದ್ವ್ಯಕ್ತಯಃ ಸರ್ವಾಃ ಪ್ರಭವಂತ್ಯಹರಾಗಮೇ ।**
**ರಾತ್ರ್ಯಾಗಮೇ ಪ್ರಲೀಯಂತೇ ತತ್ರೈವಾವ್ಯಕ್ತಸಂಜ್ಞಕೇ ॥ ೧೮॥**

ಸಂಪೂರ್ಣ ಚರಾಚರ ಪ್ರಾಣಿಗಳು ಬ್ರಹ್ಮನ ಹಗಲಿನ ಪ್ರವೇಶಕಾಲದಲ್ಲಿ ಅವ್ಯಕ್ತದಿಂದ ಅರ್ಥಾತ್ ಬ್ರಹ್ಮನ ಸೂಕ್ಷ್ಮ ಶರೀರದಿಂದಉತ್ಪನ್ನವಾಗುತ್ತವೆ ಮತ್ತು ಬ್ರಹ್ಮನ ರಾತ್ರಿಯ ಪ್ರವೇಶಕಾಲದಲ್ಲಿ ಆ ಅವ್ಯಕ್ತ ಹೆಸರಿನ ಬ್ರಹ್ಮನ ಸೂಕ್ಷ್ಮ ಶರೀರದಲ್ಲಿಯೇ ಲೀನವಾಗುತ್ತವೆ ॥ ೧೮॥

**ಭೂತಗ್ರಾಮಃ ಸ ಏವಾಯಂ ಭೂತ್ವಾ ಭೂತ್ವಾ ಪ್ರಲೀಯತೇ।**
**ರಾತ್ರ್ಯಾಗಮೇಽವಶಃ ಪಾರ್ಥ ಪ್ರಭವತ್ಯಹರಾಗಮೇ ॥ ೧೯॥**

ಹೇ ಪಾರ್ಥನೇ! ಅದೇ ಈ ಪ್ರಾಣಿಸಮುದಾಯವು ಉತ್ಪನ್ನವಾಗುತ್ತ-ವಾಗುತ್ತ ಪ್ರಕೃತಿಯ ವಶದಲ್ಲಿದ್ದು ರಾತ್ರಿಯ ಪ್ರವೇಶಕಾಲದಲ್ಲಿ ಲೀನವಾಗಿ ಹೋಗುತ್ತದೆ, ಮತ್ತು ಹಗಲಿನ ಪ್ರವೇಶಕಾಲದಲ್ಲಿ ಮತ್ತೆ ಉತ್ಪನ್ನವಾಗುತ್ತದೆ. ॥ ೧೯॥

**ಪರಸ್ತಸ್ಮಾತ್ತು ಭಾವೋಽನ್ಯೋಽವ್ಯಕ್ತೋಽವ್ಯಕ್ತಾತ್ ಸನಾತನಃ ।**
**ಯಃ ಸ ಸರ್ವೇಷು ಭೂತೇಷು ನಶ್ಯತ್ಸು ನ ವಿನಶ್ಯತಿ ॥ ೨೦॥**

ಆದರೆ ಆ ಅವ್ಯಕ್ತಕ್ಕಿಂತಲೂ ಕೂಡ ಅತಿಶ್ರೇಷ್ಠವಾದ ಇನ್ನೊಂದು ಅರ್ಥಾತ್ ವಿಲಕ್ಷಣವಾದ, ಯಾವ ಸನಾತನ ಅವ್ಯಕ್ತಭಾವವಾಗಿದೆಯೋ ಆ ಪರಮ ದಿವ್ಯಪುರುಷನು ಎಲ್ಲ ಭೂತಗಳು ನಷ್ಟವಾದರೂ ನಾಶವಾಗುವುದಿಲ್ಲ. ॥ ೨೦॥

**ಅವ್ಯಕ್ತೋಽಕ್ಷರ ಇತ್ಯುಕ್ತಸ್ತಮಾಹುಃ ಪರಮಾಂ ಗತಿಮ್ ।**
**ಯಂ ಪ್ರಾಪ್ಯ ನ ನಿವರ್ತಂತೇ ತದ್ಧಾಮ ಪರಮಂ ಮಮ ॥**

ಯಾವ ಅವ್ಯಕ್ತವು 'ಅಕ್ಷರ'ವೆಂಬ ಹೆಸರಿನಿಂದ ಹೇಳಲಾಗಿದೆಯೋ ಅದೇ ಅಕ್ಷರವೆಂಬ ಹೆಸರಿನ ಅವ್ಯಕ್ತ ಭಾವವನ್ನು ಪರಮಗತಿಯೆಂದು ಹೇಳುತ್ತಾರೆ ಹಾಗೂ ಯಾವ ಸನಾತನವಾದ ಅವ್ಯಕ್ತಭಾವವನ್ನು ಪಡೆದ ಮನುಷ್ಯನು ಪುನರ್ಜನ್ಮ ಪಡೆಯುವುದಿಲ್ಲವೋ ಅದೇ ನನ್ನ ಪರಮ ಧಾಮವಾಗಿದೆ. ॥ ೨೧॥

**ಪುರುಷಃ ಸ ಪರಃ ಪಾರ್ಥ ಭಕ್ತ್ಯಾ ಲಭ್ಯಸ್ತ್ವನನ್ಯಯಾ ।**
**ಯಸ್ಯಾಂತಃಸ್ಥಾನಿ ಭೂತಾನಿ ಯೇನ ಸರ್ವಮಿದಂ ತತಮ್ ॥**

ಹೇ ಪಾರ್ಥನೇ! ಯಾವ ಪರಮಾತ್ಮನ ಅಂತರ್ಗತವಾಗಿ ಎಲ್ಲ ಜೀವಿಗಳಿವೆಯೋ ಮತ್ತು ಯಾವ ಸಚ್ಚಿದಾನಂದಘನ ಪರಮಾತ್ಮನಿಂದ ಈ ಸಮಸ್ತ ಜಗತ್ತು ಪರಿಪೂರ್ಣ ವಾಗಿದೆಯೋ ಆ ಸನಾತನನೂ, ಅವ್ಯಕ್ತನೂ ಆದ ಪರಮ ಪುರುಷನಾದರೋ ಅನನ್ಯವಾದ ಭಕ್ತಿಯಿಂದಲೇ ಪ್ರಾಪ್ತನಾಗಲು ಯೋಗ್ಯನಾಗಿದ್ದಾನೆ. ॥ ೨೨॥

**ಯತ್ರ ಕಾಲೇ ತ್ವನಾವೃತ್ತಿಮಾವೃತ್ತಿಂ ಚೈವ ಯೋಗಿನಃ ।**
**ಪ್ರಯಾತಾ ಯಾಂತಿ ತಂ ಕಾಲಂ ವಕ್ಷ್ಯಾಮಿ ಭರತರ್ಷಭ ॥**

ಹೇ ಅರ್ಜುನನೇ! ಯಾವ ಕಾಲದಲ್ಲಿ ಶರೀರವನ್ನು ತ್ಯಾಗ ಮಾಡಿ ಹೊರಟುಹೋದ ಯೋಗಿಜನರಾದರೋ ಹಿಂದಿರುಗಿ

ಬಾರದಿರುವ ಗತಿಯನ್ನು ಮತ್ತು ಯಾವ ಕಾಲದಲ್ಲಿ ಹೊರಟು ಹೋದವರು ಹಿಂದಿರುಗಿ ಬರುವ ಗತಿಯನ್ನೇ ಪಡೆಯುತ್ತಾರೆಯೋ ಆ ಕಾಲವನ್ನು ಅರ್ಥಾತ್ ಎರಡೂ ಮಾರ್ಗಗಳನ್ನು ಹೇಳುವೆನು. ॥ ೨೩॥

**ಅಗ್ನಿರ್ಜ್ಯೋತಿರಹಃ ಶುಕ್ಲಃ ಷಣ್ಮಾಸಾ ಉತ್ತರಾಯಣಮ್ ।**
**ತತ್ರ ಪ್ರಯಾತಾ ಗಚ್ಛಂತಿ ಬ್ರಹ್ಮ ಬ್ರಹ್ಮವಿದೋ ಜನಾಃ ॥ ೨೪॥**

ಯಾವ ಮಾರ್ಗದಲ್ಲಿ ಜ್ಯೋತಿರ್ಮಯ ಅಗ್ನಿ ಅಭಿಮಾನಿ ದೇವತೆಯಾಗಿದ್ದಾನೋ, ಹಗಲಿನ ಅಭಿಮಾನಿ ದೇವತೆಯಾಗಿದ್ದಾನೋ, ಶುಕ್ಲಪಕ್ಷದ ಅಭಿಮಾನಿ ದೇವತೆಯಿದ್ದಾನೋ ಮತ್ತು ಉತ್ತರಾಯಣದ ಆರು ತಿಂಗಳ ಅಭಿಮಾನೀ ದೇವತೆಯಾಗಿದ್ದಾನೋ ಆ ಮಾರ್ಗದಲ್ಲಿ ಸತ್ತಬಳಿಕ ಹೋದ ಬ್ರಹ್ಮವೇತ್ತರಾದ ಯೋಗಿಜನರು ಮೇಲೆ ಹೇಳಿದ ದೇವತೆಗಳ ಮೂಲಕ ಕ್ರಮವಾಗಿ ಕರೆದುಕೊಂಡು ಹೋದವರಾಗಿ ಬ್ರಹ್ಮವನ್ನು ಪಡೆಯುತ್ತಾರೆ. ॥ ೨೪॥

**ಧೂಮೋ ರಾತ್ರಿಸ್ತಥಾ ಕೃಷ್ಣಃ ಷಣ್ಮಾಸಾ ದಕ್ಷಿಣಾಯನಮ್ ।**
**ತತ್ರ ಚಾಂದ್ರಮಸಂ ಜ್ಯೋತಿರ್ಯೋಗೀ ಪ್ರಾಪ್ಯ ನಿವರ್ತತೇ**

ಯಾವ ಮಾರ್ಗದಲ್ಲಿ ಧೂಮಾಭಿಮಾನೀ ದೇವತೆಯಾಗಿದೆಯೋ, ರಾತ್ರಿಯ ಅಭಿಮಾನೀ ದೇವತೆಯಾಗಿದೆಯೋ, ಹಾಗೂ ಕೃಷ್ಣಪಕ್ಷದ ಅಭಿಮಾನೀ ದೇವತೆಯಾಗಿದೆಯೋ, ದಕ್ಷಿಣಾಯನದ ಆರು ತಿಂಗಳ ಅಭಿಮಾನೀ ದೇವತೆ

ಯಾಗಿದೆಯೋ, ಆ ಮಾರ್ಗದಲ್ಲಿ - ಸತ್ತು ಪ್ರಯಾಣ ಬೆಳೆಸಿದ ಸಕಾಮ ಕರ್ಮಮಾಡಿದ ಯೋಗಿಯು - ಮೇಲೆ ತಿಳಿಸಿದ ದೇವತೆಗಳ ಮೂಲಕ ಕ್ರಮವಾಗಿ ಕರೆದುಕೊಂಡು ಹೋದವರಾಗಿ ಚಂದ್ರನ ಜ್ಯೋತಿಯನ್ನು ಪಡೆದುಕೊಂಡು, ಸ್ವರ್ಗದಲ್ಲಿ ತಮ್ಮ ಶುಭ ಕರ್ಮಗಳ ಫಲವನ್ನು ಭೋಗಿಸಿ ಹಿಂದಿರುಗುತ್ತಾರೆ. ॥ ೨೫ ॥

**ಶುಕ್ಲಕೃಷ್ಣೇ ಗತೀ ಹ್ಯೇತೇ ಜಗತಃ ಶಾಶ್ವತೇ ಮತೇ ।**
**ಏಕಯಾ ಯಾತ್ಯನಾವೃತ್ತಿಮನ್ಯಯಾವರ್ತತೇ ಪುನಃ ॥ ೨೬॥**

ಏಕೆಂದರೆ ಜಗತ್ತಿನ ಈ ಎರಡು ಪ್ರಕಾರದ, ಶುಕ್ಲ ಮತ್ತು ಕೃಷ್ಣ - ಅರ್ಥಾತ್ ದೇವಯಾನ ಮತ್ತು ಪಿತೃಯಾನ ಮಾರ್ಗಗಳು ಸನಾತನವಾದುವು ಎಂದು ತಿಳಿಯಲಾಗಿದೆ. ಇವುಗಳಲ್ಲಿ ಒಂದರ ಮೂಲಕ ಪ್ರಯಾಣ ಬೆಳಸಿದವರು ಅರ್ಥಾತ್ ಅರ್ಚಿಮಾರ್ಗದಿಂದ ಹೋದವರು ಮರಳಿ ಬರಬೇಕಾಗಿರುವುದಿಲ್ಲವೋ ಅಂತಹ ಆ ಪರಮಗತಿಯನ್ನು ಪಡೆಯುತ್ತಾರೆ ಮತ್ತು ಎರಡನೇ ಮಾರ್ಗದ ಮೂಲಕ ಹೊರಟು ಹೋದವನು ಅರ್ಥಾತ್ ಧೂಮಮಾರ್ಗದಿಂದ ಹೋದ ಸಕಾಮಕರ್ಮಿಯು ಮತ್ತೆ ಹಿಂದಿರುಗಿ ಬರುತ್ತಾನೆ ಅರ್ಥಾತ್ ಜನ್ಮ-ಮೃತ್ಯುವನ್ನು ಪಡೆಯುತ್ತಾನೆ. ॥ ೨೬॥

**ನೈತೇ ಸೃತೀ ಪಾರ್ಥ ಜಾನನ್ಯೋಗೀ ಮುಹ್ಯತಿ ಕಶ್ಚನ ।**
**ತಸ್ಮಾತ್ಸರ್ವೇಷು ಕಾಲೇಷು ಯೋಗಯುಕ್ತೋ ಭವಾರ್ಜುನ**

ಹೇ ಪಾರ್ಥನೆ! ಈ ಪ್ರಕಾರದ ಎರಡೂ ಮಾರ್ಗಗಳನ್ನು ತತ್ತ್ವದಿಂದ ತಿಳಿದುಕೊಂಡ ಯಾವುದೇ ಯೋಗಿಯು ಮೋಹಿತನಾಗುವುದಿಲ್ಲ. ಈ ಕಾರಣದಿಂದ ಹೇ ಅರ್ಜುನನೇ! ಎಲ್ಲ ಕಾಲದಲ್ಲಿ ನೀನು ಸಮಬುದ್ಧಿರೂಪವಾದ ಯೋಗದಿಂದ ಯುಕ್ತನಾಗು, ಅರ್ಥಾತ್ ನಿರಂತರ ನನ್ನ ಪ್ರಾಪ್ತಿಗಾಗಿ ಸಾಧನೆ ಮಾಡು. ॥ ೨೭॥

**ವೇದೇಷು ಯಜ್ಞೇಷು ತಪಃಸು ಚೈವ**
**ದಾನೇಷು ಯತ್ಪುಣ್ಯಫಲಂ ಪ್ರದಿಷ್ಟಮ್ ।**
**ಅತ್ಯೇತಿ ತತ್ಸರ್ವಮಿದಂ ವಿದಿತ್ವಾ**
**ಯೋಗೀ ಪರಂ ಸ್ಥಾನಮುಪೈತಿ ಚಾದ್ಯಮ್ ॥ ೨೮॥**

ಯೋಗೀಪುರುಷನು ಈ ರಹಸ್ಯವನ್ನು ತತ್ತ್ವದಿಂದ ತಿಳಿದುಕೊಂಡು ವೇದಗಳ ಅಧ್ಯಯನ ಹಾಗೂ ಯಜ್ಞ, ತಪಸ್ಸು ಮತ್ತು ದಾನಾದಿಗಳನ್ನು ಮಾಡುವುದರಲ್ಲಿ ಯಾವ ಪುಣ್ಯಫಲಗಳನ್ನು ಹೇಳಿದೆಯೋ ಅದೆಲ್ಲವನ್ನೂ ನಿಃಸಂದೇಹವಾಗಿ ದಾಟಿ ಹೋಗುತ್ತಾನೆ ಮತ್ತು ಸನಾತನವಾದ ಪರಮಪದವನ್ನು ಪಡೆಯುತ್ತಾನೆ. ॥ ೨೮॥

*ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು*
*ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ*
*ಅಕ್ಷರಬ್ರಹ್ಮಯೋಗೋನಾಮ ಅಷ್ಟಮೋಽಧ್ಯಾಯಃ ॥ ೮॥*



## ॥ ಅಥ ನವಮೋಽಧ್ಯಾಯಃ॥
## ರಾಜವಿದ್ಯಾರಾಜಗುಹ್ಯಯೋಗವು

ಶ್ರೀಭಗವಾನುವಾಚ

**ಇದಂ ತು ತೇ ಗುಹ್ಯತಮಂ ಪ್ರವಕ್ಷ್ಯಾಮ್ಯನಸೂಯವೇ ।**
**ಜ್ಞಾನಂ ವಿಜ್ಞಾನಸಹಿತಂ ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್**

ಶ್ರೀಭಗವಂತನು ಹೇಳಿದನು – ದೋಷ-ದೃಷ್ಟಿ ರಹಿತ ಭಕ್ತನಾದ ನಿನಗೆ ಈ ಪರಮ ಗೋಪ್ಯವಾದ, ವಿಜ್ಞಾನ ಸಹಿತ ವಾದ ಜ್ಞಾನವನ್ನು ಪುನಃ ಚೆನ್ನಾಗಿ ಹೇಳುವೆನು, ಅದನ್ನು ತಿಳಿದು ನೀನು ದುಃಖರೂಪೀ ಜಗತ್ತಿನಿಂದ ಪಾರಾಗಿ ಹೋಗುವೆ. ॥ ೧॥

**ರಾಜವಿದ್ಯಾ ರಾಜಗುಹ್ಯಂ ಪವಿತ್ರಮಿದಮುತ್ತಮಮ್ ।**
**ಪ್ರತ್ಯಕ್ಷಾವಗಮಂ ಧರ್ಮ್ಯಂ ಸುಸುಖಂ ಕರ್ತುಮವ್ಯಯಮ್ ॥**

ಈ ವಿಜ್ಞಾನಸಹಿತವಾದ ಜ್ಞಾನವು ಎಲ್ಲ ವಿದ್ಯೆಗಳ ರಾಜನೂ ಎಲ್ಲ ರಹಸ್ಯಗಳ ರಾಜನೂ, ಅತಿಪವಿತ್ರವೂ, ಅತ್ಯುತ್ತಮವೂ, ಪ್ರತ್ಯಕ್ಷ ಫಲವುಳ್ಳದ್ದೂ, ಧರ್ಮಯುಕ್ತವೂ ಮತ್ತು ಸಾಧನೆಮಾಡಲು ತುಂಬಾ ಸುಲಭವೂ ಮತ್ತು ಅವಿನಾಶಿಯೂ ಆಗಿದೆ. ॥ ೨॥

**ಅಶ್ರದ್ದಧಾನಾಃ ಪುರುಷಾ ಧರ್ಮಸ್ಯಾಸ್ಯ ಪರಂತಪ ।**
**ಅಪ್ರಾಪ್ಯ ಮಾಂ ನಿವರ್ತಂತೇ ಮೃತ್ಯುಸಂಸಾರವರ್ತ್ಮನಿ ॥ ೩॥**

ಹೇ ಪರಂತಪನೇ! ಈ ಮೇಲೆ ಹೇಳಿದ ಧರ್ಮದಲ್ಲಿ ಶ್ರದ್ಧಾರಹಿತರಾದ ಪುರುಷರು ನನ್ನನ್ನು ಪಡೆಯದೆ ಮೃತ್ಯುರೂಪೀ ಸಂಸಾರಚಕ್ರದಲ್ಲಿ ಸುತ್ತುತ್ತಿರುತ್ತಾರೆ. ॥ ೩॥

**ಮಯಾ ತತಮಿದಂ ಸರ್ವಂ ಜಗದವ್ಯಕ್ತಮೂರ್ತಿನಾ ।**
**ಮತ್ಸ್ಥಾನಿ ಸರ್ವಭೂತಾನಿ ನ ಚಾಹಂ ತೇಷ್ವವಸ್ಥಿತಃ ॥ ೪॥**

ನಿರಾಕಾರ ಪರಮಾತ್ಮನಾದ ನನ್ನಿಂದ ಈ ಎಲ್ಲ ಜಗತ್ತು, ನೀರಿನಿಂದ ವ್ಯಾಪಿಸಿರುವ ಮಂಜುಗಡ್ಡೆಯಂತೆ ಪರಿಪೂರ್ಣ ವಾಗಿದೆ ಮತ್ತು ಎಲ್ಲ ಭೂತ (ಪ್ರಾಣಿ)ಗಳು ನನ್ನೊಳಗೆ ಸಂಕಲ್ಪದ ಆಧಾರದಿಂದ ಸ್ಥಿತವಾಗಿವೆ, ಆದರೆ ವಾಸ್ತವವಾಗಿ ನಾನು ಅವುಗಳಲ್ಲಿ ಸ್ಥಿತನಾಗಿಲ್ಲ. ॥ ೪॥

**ನ ಚ ಮತ್ಸ್ಥಾನಿ ಭೂತಾನಿ ಪಶ್ಯ ಮೇ ಯೋಗಮೈಶ್ವರಮ್ ।**
**ಭೂತಭೃನ್ನ ಚ ಭೂತಸ್ಥೋ ಮಮಾತ್ಮಾ ಭೂತಭಾವನಃ ॥ ೫॥**

ಆ ಸಮಸ್ತ ಪ್ರಾಣಿಸಂಕುಲವು ನನ್ನಲ್ಲಿ ಸ್ಥಿತವಾಗಿಲ್ಲ; ಆದರೆ ಅವುಗಳ ಧಾರಣೆ ಮತ್ತು ಪೋಷಣೆ ಮಾಡುವ ಮತ್ತು ಅವುಗಳನ್ನು ಉತ್ಪತ್ತಿಮಾಡುವವನಾದರೂ ನನ್ನ ಆತ್ಮವೂ ವಾಸ್ತವವಾಗಿ ಭೂತಗಳಲ್ಲಿ ಸ್ಥಿತವಾಗಿಲ್ಲ ಎಂಬ ನನ್ನ ಈಶ್ವರೀಯ ಯೋಗಶಕ್ತಿಯನ್ನು ನೋಡು. ॥ ೫॥

**ಯಥಾಕಾಶಸ್ಥಿತೋ ನಿತ್ಯಂ ವಾಯುಃ ಸರ್ವತ್ರಗೋ ಮಹಾನ್।**
**ತಥಾ ಸರ್ವಾಣಿ ಭೂತಾನಿ ಮತ್ಸ್ಥಾನೀತ್ಯುಪಧಾರಯ ॥ ೬॥**

ಹೇಗೆ ಆಕಾಶದಿಂದ ಉತ್ಪನ್ನವಾಗಿ, ಎಲ್ಲೆಲ್ಲೂ ಸಂಚರಿಸುವ ಮಹಾನ್ ವಾಯುವು ಸದಾಕಾಲ ಆಕಾಶದಲ್ಲಿಯೇ ಸ್ಥಿತವಾಗಿರುತ್ತದೋ ಹಾಗೆಯೇ ನನ್ನ ಸಂಕಲ್ಪದ ಮೂಲಕ ಉತ್ಪನ್ನವಾಗುವ ಸಂಪೂರ್ಣ ಭೂತಗಳು ನನ್ನಲ್ಲಿ ಸ್ಥಿತವಾಗಿವೆಯೆಂದು ತಿಳಿ.

**ಸರ್ವಭೂತಾನಿ ಕೌಂತೇಯ ಪ್ರಕೃತಿಂ ಯಾಂತಿ ಮಾಮಿಕಾಮ್ ।**
**ಕಲ್ಪಕ್ಷಯೇ ಪುನಸ್ತಾನಿ ಕಲ್ಪಾದೌ ವಿಸೃಜಾಮ್ಯಹಮ್ ॥ ೭॥**

ಹೇ ಅರ್ಜುನನೇ! ಕಲ್ಪಗಳ ಅಂತ್ಯದಲ್ಲಿ ಸಮಸ್ತ ಜೀವಕೋಟಿಗಳು ನನ್ನ ಪ್ರಕೃತಿಯನ್ನು ಪಡೆಯುತ್ತವೆ, ಅರ್ಥಾತ್ ಪ್ರಕೃತಿಯಲ್ಲಿ ಲೀನವಾಗುತ್ತವೆ ಮತ್ತು ಕಲ್ಪಗಳ ಆದಿಯಲ್ಲಿ ಪುನಃ ಅವುಗಳನ್ನು ನಾನು ಸೃಜಿಸುತ್ತೇನೆ. ॥ ೭॥

**ಪ್ರಕೃತಿಂ ಸ್ವಾಮವಷ್ಟಭ್ಯ ವಿಸೃಜಾಮಿ ಪುನಃ ಪುನಃ ।**
**ಭೂತಗ್ರಾಮಮಿಮಂ ಕೃತ್ಸ್ನಮವಶಂ ಪ್ರಕೃತೇರ್ವಶಾತ್ ॥ ೮॥**

ನನ್ನ ಪ್ರಕೃತಿಯನ್ನು ಅಂಗೀಕರಿಸಿಕೊಂಡು ಸ್ವಭಾವದ ಬಲದಿಂದ ಪರತಂತ್ರವಾದ ಈ ಸಂಪೂರ್ಣ ಭೂತಸಮುದಾಯ ವನ್ನು ಬಾರಿ-ಬಾರಿಗೂ ಅವುಗಳ ಕರ್ಮಗಳಿಗನುಸಾರವಾಗಿ ರಚಿಸುತ್ತೇನೆ. ॥ ೮॥

**ನ ಚ ಮಾಂ ತಾನಿ ಕರ್ಮಾಣಿ ನಿಬಧ್ನಂತಿ ಧನಂಜಯ ।**
**ಉದಾಸೀನವದಾಸೀನಮಸಕ್ತಂ ತೇಷು ಕರ್ಮಸು ॥ ೯॥**

ಹೇ ಅರ್ಜುನನೇ! ಆ ಕರ್ಮಗಳಲ್ಲಿ ಆಸಕ್ತಿರಹಿತನಾಗಿ ಮತ್ತು ಉದಾಸೀನನಂತೆ ಸ್ಥಿತನಾಗಿರುವ ಪರಮಾತ್ಮನಾದ ನನ್ನನ್ನು ಆ ಕರ್ಮಗಳು ಬಂಧಿಸುವುದಿಲ್ಲ. ॥ ೯॥

**ಮಯಾಧ್ಯಕ್ಷೇಣ ಪ್ರಕೃತಿಃ ಸೂಯತೇ ಸಚರಾಚರಮ್ ।**
**ಹೇತುನಾನೇನ ಕೌಂತೇಯ ಜಗದ್ವಿಪರಿವರ್ತತೇ ॥ ೧೦॥**

ಹೇ ಅರ್ಜುನನೇ! ಅಧಿಷ್ಠಾತೃನಾದ ನನ್ನ ಅಧ್ಯಕ್ಷತೆಯಲ್ಲಿ ಪ್ರಕೃತಿಯು ಚರಾಚರಸಹಿತ ಸರ್ವಜಗತ್ತನ್ನು ರಚಿಸುತ್ತದೆ ಮತ್ತು ಈ ಕಾರಣದಿಂದಲೇ ಈ ಸಂಸಾರ ಚಕ್ರವು ತಿರುಗುತ್ತಾ ಇದೆ. ॥ ೧೦॥

**ಅವಜಾನಂತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಮ್**
**ಪರಂ ಭಾವಮಜಾನಂತೋ ಮಮ ಭೂತಮಹೇಶ್ವರಮ್ ॥**

ನನ್ನ ಪರಮ ಭಾವವನ್ನು ತಿಳಿಯದಿರುವ ಮೂಢಜನರು ಮನುಷ್ಯ ಶರೀರವನ್ನು ಧರಿಸಿರುವ ಸಂಪೂರ್ಣ ಜೀವಿಗಳ ಮಹಾನ್ ಈಶ್ವರನಾದ ನನ್ನನ್ನು, ತುಚ್ಛವಾಗಿ ತಿಳಿಯುತ್ತಾರೆ ಅರ್ಥಾತ್ ನನ್ನ ಯೋಗಮಾಯೆಯಿಂದ ಜಗತ್ತಿನ ಉದ್ಧಾರಕ್ಕಾಗಿ ಮನುಷ್ಯ ರೂಪದಲ್ಲಿ ವಿಚರಿಸುವ ಪರಮೇಶ್ವರನಾದ ನನ್ನನ್ನು ಸಾಧಾರಣ ಮನುಷ್ಯನೆಂದು ಅರಿಯುತ್ತಾರೆ. ॥ ೧೧॥

**ಮೋಘಾಶಾ ಮೋಘಕರ್ಮಾಣೋ ಮೋಘಜ್ಞಾನಾ ವಿಚೇತಸಃ**
**ರಾಕ್ಷಸೀಮಾಸುರೀಂ ಚೈವ ಪ್ರಕೃತಿಂ ಮೋಹಿನೀಂ ಶ್ರಿತಾಃ ॥**

ಅವರು ವ್ಯರ್ಥವಾದ ಆಸೆ, ವ್ಯರ್ಥವಾದ ಕರ್ಮ ಮತ್ತು ವ್ಯರ್ಥವಾದ ಜ್ಞಾನವುಳ್ಳ ವಿಕ್ಷಿಪ್ತ ಚಿತ್ತರಾದ ಅಜ್ಞಾನೀ ಜನರು ರಾಕ್ಷಸೀ, ಆಸುರೀ ಮತ್ತು ಮೋಹಿನೀ ಪ್ರಕೃತಿಯನ್ನೇ ಆಶ್ರಯ ಮಾಡಿಕೊಂಡಿರುತ್ತಾರೆ. ॥ ೧೨॥

**ಮಹಾತ್ಮಾನಸ್ತು ಮಾಂ ಪಾರ್ಥ ದೈವೀಂ ಪ್ರಕೃತಿಮಾಶ್ರಿತಾಃ ।**
**ಭಜಂತ್ಯನನ್ಯಮನಸೋ ಜ್ಞಾತ್ವಾ ಭೂತಾದಿಮವ್ಯಯಮ್ ॥**

ಆದರೆ ಹೇ ಕುಂತೀಪುತ್ರನೇ! ದೈವೀ ಪ್ರಕೃತಿಯನ್ನು ಆಶ್ರಯಿಸಿರುವ ಮಹಾತ್ಮರು ನನ್ನನ್ನು ಎಲ್ಲಾ ಭೂತಗಳ ಸನಾತನ ಕಾರಣ ಮತ್ತು ನಾಶರಹಿತವಾದ ಅಕ್ಷರಸ್ವರೂಪ ನೆಂದು ತಿಳಿದುಕೊಂಡು ಅನನ್ಯ ಮನಸ್ಸಿನಿಂದ ಯುಕ್ತರಾಗಿ ನಿರಂತರ ಭಜಿಸುತ್ತಾರೆ. ॥ ೧೩॥

**ಸತತಂ ಕೀರ್ತಯಂತೋ ಮಾಂ ಯತಂತಶ್ಚ ದೃಢವ್ರತಾಃ ।**
**ನಮಸ್ಯಂತಶ್ಚ ಮಾಂ ಭಕ್ತ್ಯಾ ನಿತ್ಯಯುಕ್ತಾ ಉಪಾಸತೇ ॥ ೧೪॥**

ಆ ದೃಢ ನಿಶ್ಚಯವುಳ್ಳ ಭಕ್ತಜನರು ನಿರಂತರ ನನ್ನ ನಾಮ ಮತ್ತು ಗುಣಗಳ ಕೀರ್ತನೆ ಮಾಡುತ್ತಾ ಹಾಗೂ ನನ್ನ ಪ್ರಾಪ್ತಿಗಾಗಿ ಪ್ರಯತ್ನ ಮಾಡುತ್ತಾ, ಮತ್ತು ಪದೇ ಪದೇ ನನಗೆ ನಮಸ್ಕರಿಸುತ್ತಾ ಸದಾ ಕಾಲ ನನ್ನ ಧ್ಯಾನದಲ್ಲಿ ಯುಕ್ತರಾಗಿ ಅನನ್ಯ ಪ್ರೇಮದಿಂದ ನನ್ನ ಉಪಾಸನೆಯನ್ನು ಮಾಡುತ್ತಾರೆ. ॥ ೧೪॥

**ಜ್ಞಾನಯಜ್ಞೇನ ಚಾಪ್ಯನ್ಯೇ ಯಜಂತೋ ಮಾಮುಪಾಸತೇ ।**
**ಏಕತ್ವೇನ ಪೃಥಕ್ತ್ವೇನ ಬಹುಧಾ ವಿಶ್ವತೋಮುಖಮ್ ॥ ೧೫॥**

ಇತರೆ ಜ್ಞಾನಯೋಗಿಗಳು, ನಿರ್ಗುಣ-ನಿರಾಕಾರ ಬ್ರಹ್ಮನಾದ ನನ್ನನ್ನು ಜ್ಞಾನಯಜ್ಞದ ಮೂಲಕ ಅಭಿನ್ನಭಾವ ದಿಂದ ಪೂಜಿಸುತ್ತಿದ್ದರೂ ನನ್ನ ಉಪಾಸನೆ ಮಾಡುತ್ತಾರೆ ಮತ್ತು ಬೇರೆ ಮನುಷ್ಯರು ಅನೇಕ ಪ್ರಕಾರದಿಂದ ಸ್ಥಿತನಾಗಿರುವ, ವಿರಾಟ್‌ಸ್ವರೂಪೀ ಪರಮೇಶ್ವರನನಾದ ನನ್ನನ್ನು ಪೃಥಕ್ ಭಾವದಿಂದ ಉಪಾಸನೆ ಮಾಡುತ್ತಾರೆ. ॥ ೧೫॥

**ಅಹಂ ಕ್ರತುರಹಂ ಯಜ್ಞಃ ಸ್ವಧಾಹಮಹಮೌಷಧಮ್ ।**
**ಮಂತ್ರೋಽಹಮಹಮೇವಾಜ್ಯಮಹಮಗ್ನಿರಹಂ ಹುತಮ್ ॥**

ಕ್ರತುವು ನಾನಾಗಿದ್ದೇನೆ, ಯಜ್ಞವೂ ನಾನೇ, ಸ್ವಧಾಕಾರವು ನಾನೇ, ಔಷಧವು ನಾನೇ, ಮಂತ್ರವು ನಾನೇ, ಘೃತವು ನಾನೇ, ಅಗ್ನಿಯು ನಾನೇ, ಮತ್ತು ಹವನರೂಪೀ ಕ್ರಿಯೆಯೂ ನಾನೇ ಆಗಿದ್ದೇನೆ. ॥ ೧೬॥

**ಪಿತಾಹಮಸ್ಯ ಜಗತೋ ಮಾತಾ ಧಾತಾ ಪಿತಾಮಹಃ ।**
**ವೇದ್ಯಂ ಪವಿತ್ರಮೋಂಕಾರ ಋಕ್ಸಾಮ ಯಜುರೇವ ಚ ॥**

ಈ ಸಂಪೂರ್ಣ ಜಗತ್ತನ್ನು ಧರಿಸುವವನು ಮತ್ತು ಕರ್ಮಗಳ ಫಲವನ್ನು ಕೊಡುವವನು, ತಂದೆ, ತಾಯಿ, ಅಜ್ಜನೂ, ತಿಳಿಯಲು ಯೋಗ್ಯನಾದವನೂ, ಪವಿತ್ರವಾದ ಓಂಕಾರವೂ ಹಾಗೂ ಋಗ್ವೇದ, ಸಾಮವೇದ ಮತ್ತು ಯಜುರ್ವೇದವೂ ನಾನೇ ಆಗಿದ್ದೇನೆ. ॥ ೧೭॥

**ಗತಿರ್ಭರ್ತಾ ಪ್ರಭುಃ ಸಾಕ್ಷೀ ನಿವಾಸಃ ಶರಣಂ ಸುಹೃತ್ ।**
**ಪ್ರಭವಃ ಪ್ರಲಯಃ ಸ್ಥಾನಂ ನಿಧಾನಂ ಬೀಜಮವ್ಯಯಮ್ ॥**

ಪಡೆಯಲು ಯೋಗ್ಯವಾದ ಪರಮಧಾಮವೂ, ಪಾಲನೆ-ಪೋಷಣೆ ಮಾಡುವವನೂ, ಎಲ್ಲರ ಒಡೆಯನೂ, ಶುಭಾಶುಭಗಳನ್ನು ನೋಡುವವನೂ, ಎಲ್ಲರ ವಾಸಸ್ಥಾನವೂ, ಶರಣಾಗಲು ಯೋಗ್ಯನಾದವನೂ, ಪ್ರತ್ಯುಪಕಾರವನ್ನು ಬಯಸದೆ ಹಿತಮಾಡುವವನೂ ಎಲ್ಲರ ಉತ್ಪತ್ತಿ-ಪ್ರಳಯಗಳಿಗೆ ಕಾರಣನೂ,

ಇರುವಿಕೆಗೆ ಆಧಾರನೂ, ನಿಧಾನನೂ ಮತ್ತು ಅವಿನಾಶೀ ಕಾರಣವೂ ಸಹ ನಾನೇ ಆಗಿದ್ದೇನೆ. ॥ ೧೮॥

**ತಪಾಮ್ಯಹಮಹಂ ವರ್ಷಂ ನಿಗೃಹ್ಣಾಮ್ಯುತ್ಸೃಜಾಮಿ ಚ ।**
**ಅಮೃತಂ ಚೈವ ಮೃತ್ಯುಶ್ಚ ಸದಸಚ್ಚಾಹಮರ್ಜುನ ॥ ೧೯॥**

ನಾನೇ ಸೂರ್ಯನ ರೂಪದಿಂದ ಬೆಳಗುತ್ತಿದ್ದೇನೆ, ಮಳೆಯನ್ನು ಆಕರ್ಷಿಸಿ ಅದನ್ನು ಸುರಿಸುತ್ತೇನೆ. ಹೇ ಅರ್ಜುನನೇ! ನಾನೇ ಅಮೃತ ಮತ್ತು ಮೃತ್ಯುವಾಗಿದ್ದೇನೆ ಮತ್ತು ಸತ್-ಅಸತ್ ಕೂಡ ನಾನೇ ಆಗಿದ್ದೇನೆ. ॥ ೧೯॥

**ತ್ರೈವಿದ್ಯಾ ಮಾಂ ಸೋಮಪಾಃ ಪೂತಪಾಪಾ**
**ಯಜ್ಞೈರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯಂತೇ ।**
**ತೇ ಪುಣ್ಯಮಾಸಾದ್ಯ ಸುರೇಂದ್ರಲೋಕ-**
**ಮಶ್ನಂತಿ ದಿವ್ಯಾನ್ದಿವಿ ದೇವಭೋಗಾನ್ ॥ ೨೦॥**

ಮೂರೂ ವೇದಗಳಲ್ಲಿ ವಿಧಿಸಿರುವ ಸಕಾಮ ಕರ್ಮಗಳನ್ನು ಮಾಡುವ, ಸೋಮರಸ ಪಾನಮಾಡುವ ಪಾಪರಹಿತ ಪುರುಷರು ನನ್ನನ್ನು ಯಜ್ಞಗಳ ಮೂಲಕ ಪೂಜಿಸಿ ಸ್ವರ್ಗದ ಪ್ರಾಪ್ತಿಯನ್ನು ಬಯಸುತ್ತಾರೆ. ಆ ಪುರುಷರು ತಮ್ಮ ಪುಣ್ಯಗಳ ಫಲರೂಪವಾದ ಸ್ವರ್ಗಲೋಕವನ್ನು ಪಡೆದು ಸ್ವರ್ಗದಲ್ಲಿ ದಿವ್ಯವಾದ ದೇವತೆಗಳ ಭೋಗಗಳನ್ನು ಭೋಗಿಸುತ್ತಾರೆ. ॥ ೨೦॥

**ತೇ ತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ**
**ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ ।**
**ಏವಂ ತ್ರಯೀಧರ್ಮಮನುಪ್ರಪನ್ನಾ**
**ಗತಾಗತಂ ಕಾಮಕಾಮಾ ಲಭಂತೇ ॥ ೨೧॥**

ಅವರು ಆ ವಿಶಾಲವಾದ ಸ್ವರ್ಗಲೋಕವನ್ನು ಭೋಗಿಸಿ ಪುಣ್ಯವು ಕ್ಷೀಣಿಸಿದ ನಂತರ ಮರ್ತ್ಯಲೋಕವನ್ನು ಪಡೆಯುತ್ತಾರೆ. ಈ ಪ್ರಕಾರವಾಗಿ ಸ್ವರ್ಗದ ಸಾಧನರೂಪೀ ಮೂರೂ ವೇದಗಳಲ್ಲಿ ಹೇಳಿರುವ ಸಕಾಮಕರ್ಮದ ಆಶ್ರಯವನ್ನು ಪಡೆಯುವ ಮತ್ತು ಭೋಗಗಳ ಕಾಮನೆಯುಳ್ಳ ಪುರುಷರು ಪದೇ-ಪದೇ ಆವಾಗಮನವನ್ನು ಪಡೆಯುತ್ತಾರೆ. ಅರ್ಥಾತ್ ಪುಣ್ಯದ ಪ್ರಭಾವದಿಂದ ಸ್ವರ್ಗಕ್ಕೆ ಹೋಗುತ್ತಾರೆ ಮತ್ತು ಪುಣ್ಯವು ಕ್ಷೀಣಿಸಿದ ನಂತರ ಮರ್ತ್ಯಲೋಕಕ್ಕೇ ಬರುತ್ತಾರೆ. ॥ ೨೧॥

**ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ।**
**ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ॥**

ಯಾವ ಅನನ್ಯ ಪ್ರೇಮೀ ಭಕ್ತಜನರು ಪರಮೇಶ್ವರನಾದ ನನ್ನನ್ನು ನಿರಂತರ ಚಿಂತಿಸುತ್ತಾ ನಿಷ್ಕಾಮಭಾವದಿಂದ ಭಜಿಸುತ್ತಾರೋ, ಆ ನಿತ್ಯ-ನಿರಂತರ ನನ್ನ ಚಿಂತನೆಯನ್ನು ಮಾಡುವ ಪುರುಷರ ಯೋಗಕ್ಷೇಮವನ್ನು ನಾನೇ ಸ್ವಯಂ ವಹಿಸಿಕೊಳ್ಳುತ್ತೇನೆ. ॥ ೨೨॥

**ಯೇಽಪ್ಯನ್ಯದೇವತಾ ಭಕ್ತಾ ಯಜಂತೇ ಶ್ರದ್ಧಯಾನ್ವಿತಾಃ ।**
**ತೇಽಪಿ ಮಾಮೇವ ಕೌಂತೇಯ ಯಜಂತ್ಯವಿಧಿಪೂರ್ವಕಮ್**

ಹೇ ಅರ್ಜುನನೇ! ಒಂದೊಮ್ಮೆ ಶ್ರದ್ಧೆಯಿಂದ ಯುಕ್ತರಾದ ಯಾವ ಸಕಾಮ ಭಕ್ತರು ಬೇರೆ ದೇವತೆಗಳನ್ನು ಪೂಜಿಸಿದರೂ ಅದು ಕೂಡ ನನ್ನ ಪೂಜೆಯೇ ಆಗಿದೆ. ಆದರೆ ಅವರ ಆ ಪೂಜೆಯು ಅವಿಧಿಪೂರ್ವಕ ಅರ್ಥಾತ್ ಅಜ್ಞಾನಪೂರ್ವಕವಾಗಿದೆ. ॥ ೨೩॥

**ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ ।**
**ನ ತು ಮಾಮಭಿಜಾನಂತಿ ತತ್ತ್ವೇನಾತಶ್ಚ್ಯವಂತಿ ತೇ ॥ ೨೪॥**

ಏಕೆಂದರೆ ಸಂಪೂರ್ಣ ಯಜ್ಞಗಳ ಭೋಕ್ತೃವು ಮತ್ತು ಒಡೆಯನೂ ಕೂಡ ನಾನೇ ಆಗಿದ್ದೇನೆ, ಆದರೆ ಅವರು ಪರಮೇಶ್ವರನಾದ ನನ್ನನ್ನು ತತ್ತ್ವದಿಂದ ತಿಳಿಯುವುದಿಲ್ಲ, ಇದರಿಂದ ಪತನರಾಗುತ್ತಾರೆ ಅರ್ಥಾತ್ ಪುನರ್ಜನ್ಮವನ್ನು ಪಡೆಯುತ್ತಾರೆ. ॥ ೨೪॥

**ಯಾಂತಿ ದೇವವ್ರತಾ ದೇವಾನ್ ಪಿತೄನ್ಯಾಂತಿ ಪಿತೃವ್ರತಾಃ ।**
**ಭೂತಾನಿ ಯಾಂತಿ ಭೂತೇಜ್ಯಾ ಯಾಂತಿ ಮದ್ಯಾಜಿನೋಽಪಿ ಮಾಮ್**

ದೇವತೆಗಳನ್ನು ಪೂಜಿಸುವವರು ದೇವತೆಗಳನ್ನು ಪಡೆಯುತ್ತಾರೆ, ಪಿತೃಗಳನ್ನು ಪೂಜಿಸುವವರು ಪಿತೃಗಳನ್ನು ಪಡೆಯುತ್ತಾರೆ, ಭೂತಗಳನ್ನು ಪೂಜಿಸುವವರು ಭೂತಗಳನ್ನು

ಪಡೆಯುತ್ತಾರೆ ಮತ್ತು ನನ್ನನ್ನು ಪೂಜಿಸುವ ಆ ಭಕ್ತರು ನನ್ನನ್ನೇ ಪಡೆಯುತ್ತಾರೆ. ಅದಕ್ಕಾಗಿ ನನ್ನ ಭಕ್ತರಿಗೆ ಪುನರ್ಜನ್ಮವಾಗುವುದಿಲ್ಲ. ॥ ೨೫॥

**ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ**
**ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ॥ ೨೬॥**

ಯಾವ ಭಕ್ತನೇ ಆಗಲಿ ನನಗೆ ಪ್ರೇಮದಿಂದ ಪತ್ರ, ಪುಷ್ಪ ಫಲ, ಜಲ ಮೊದಲಾದವುಗಳನ್ನು ಅರ್ಪಿಸುತ್ತಾನೆಯೋ, ಆ ಶುದ್ಧಬುದ್ಧಿಯುಳ್ಳ ನಿಷ್ಕಾಮ ಪ್ರೇಮಿಯಾದ ಭಕ್ತನು, ಪ್ರೇಮಪೂರ್ವಕವಾಗಿ ಅರ್ಪಿಸಿದ ಆ ಪತ್ರ-ಪುಷ್ಪಾದಿಗಳನ್ನು ನಾನು ಸಗುಣರೂಪದಿಂದ ಪ್ರಕಟನಾಗಿ ಪ್ರೀತಿಸಹಿತ ಸ್ವೀಕರಿಸುತ್ತೇನೆ. ॥ ೨೬॥

**ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ ।**
**ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಮ್ ॥ ೨೭॥**

ಹೇ ಅರ್ಜುನಾ! ನೀನು ಯಾವ ಕರ್ಮವನ್ನು ಮಾಡುತ್ತೀಯೋ, ಏನನ್ನು ತಿನ್ನುತ್ತೀಯೋ, ಯಾವುದನ್ನು ಹೋಮ ಮಾಡುತ್ತೀಯೋ, ಯಾವುದನ್ನು ದಾನ ಮಾಡುತ್ತೀಯೋ ಮತ್ತು ಯಾವ ತಪಸ್ಸನ್ನು ಮಾಡುತ್ತೀಯೋ ಅವೆಲ್ಲವನ್ನೂ ನನಗೆ ಅರ್ಪಣೆಮಾಡು. ॥ ೨೭॥

**ಶುಭಾಶುಭಫಲೈರೇವಂ ಮೋಕ್ಷ್ಯಸೇ ಕರ್ಮಬಂಧನೈಃ ।**
**ಸಂನ್ಯಾಸಯೋಗಯುಕ್ತಾತ್ಮಾ ವಿಮುಕ್ತೋ ಮಾಮುಪೈಷ್ಯಸಿ ॥**

ಈ ಪ್ರಕಾರವಾಗಿ ಯಾವುದರಲ್ಲಿ ಸಮಸ್ತ ಕರ್ಮಗಳು ಭಗವಂತನಾದ ನನ್ನಲ್ಲಿ ಅರ್ಪಿತವಾಗುತ್ತವೆಯೋ ಅಂತಹ ಸಂನ್ಯಾಸಯೋಗದಿಂದ ಕೂಡಿದ ಚಿತ್ತವುಳ್ಳವನಾದ ನೀನು ಶುಭಾಶುಭ ಫಲರೂಪವಾದ ಕರ್ಮಬಂಧನದಿಂದ ಮುಕ್ತನಾಗಿ ಬಿಡುವೆ ಮತ್ತು ಅವುಗಳಿಂದ ಮುಕ್ತನಾಗಿ ನನ್ನನ್ನೇ ಪಡೆಯುವೆ.

**ಸಮೋಽಹಂ ಸರ್ವಭೂತೇಷು ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ**
**ಯೇ ಭಜಂತಿ ತು ಮಾಂ ಭಕ್ತ್ಯಾ ಮಯಿ ತೇ ತೇಷು ಚಾಪ್ಯಹಮ್**

ನಾನು ಎಲ್ಲಾ ಪ್ರಾಣಿಗಳಲ್ಲಿಯೂ ಸಮಭಾವದಿಂದ ವ್ಯಾಪಕನಾಗಿದ್ದೇನೆ. ನನಗೆ ಅಪ್ರಿಯರಾದವರು ಯಾರೂ ಇಲ್ಲ ಮತ್ತು ಪ್ರಿಯರಾದವರು ಯಾರೂ ಇಲ್ಲ; ಆದರೆ ಯಾವ ಭಕ್ತರು ನನ್ನನ್ನು ಪ್ರೇಮಭಾವದಿಂದ ಭಜಿಸುತ್ತಾರೋ ಅವರು ನನ್ನಲ್ಲಿದ್ದಾರೆ ಮತ್ತು ನಾನು ಕೂಡ ಅವರಲ್ಲಿ ಪ್ರತ್ಯಕ್ಷವಾಗಿ ಪ್ರಕಟವಾಗಿದ್ದೇನೆ. ॥ ೨೯॥

**ಅಪಿ ಚೇತ್ಸುದುರಾಚಾರೋ ಭಜತೇ ಮಾಮನನ್ಯಭಾಕ್ ।**
**ಸಾಧುರೇವ ಸ ಮಂತವ್ಯಃ ಸಮ್ಯಗ್ವ್ಯವಸಿತೋ ಹಿ ಸಃ ॥ ೩೦॥**

ಒಂದು ವೇಳೆ ಯಾರಾದರೂ ಅತಿಶಯ ದುರಾಚಾರಿ ಯಾದರೂ ಕೂಡ ಅನನ್ಯ ಭಾವದಿಂದ ನನ್ನ ಭಕ್ತನಾಗಿ ನನ್ನನ್ನು ಭಜಿಸುತ್ತಾನಾದರೆ ಅವನನ್ನು ಸಾಧುವೆಂದೇ ತಿಳಿಯಬೇಕು; ಏಕೆಂದರೆ ಅವನು ಯಥಾರ್ಥವಾದ ನಿಶ್ಚಯವುಳ್ಳವನಾಗಿದ್ದಾನೆ, ಅರ್ಥಾತ್ ಪರಮೇಶ್ವರನ ಭಜನೆಗೆ ಸಮಾನ

ವಾದುದು ಬೇರಾವುದೂ ಇಲ್ಲವೆಂದು ಅವನು ಚೆನ್ನಾಗಿ ನಿಶ್ಚಯಿಸಿಕೊಂಡಿರುತ್ತಾನೆ. ॥ ೩೦॥

**ಕ್ಷಿಪ್ರಂ ಭವತಿ ಧರ್ಮಾತ್ಮಾ ಶಶ್ವಚ್ಛಾಂತಿಂ ನಿಗಚ್ಛತಿ ।**
**ಕೌಂತೇಯ ಪ್ರತಿ ಜಾನೀಹಿ ನ ಮೇ ಭಕ್ತಃ ಪ್ರಣಶ್ಯತಿ ॥ ೩೧॥**

ಅವನು ಶೀಘ್ರವಾಗಿಯೇ ಧರ್ಮಾತ್ಮನಾಗುತ್ತಾನೆ ಮತ್ತು ಸದಾಕಾಲ ಇರುವಂತಹ ಪರಮಶಾಂತಿಯನ್ನು ಪಡೆಯುತ್ತಾನೆ. ಹೇ ಅರ್ಜುನಾ! ನನ್ನ ಭಕ್ತನು ನಷ್ಟವಾಗುವುದಿಲ್ಲವೆಂದು ನೀನು ನಿಶ್ಚಯಪೂರ್ವಕವಾದ ಸತ್ಯವನ್ನು ತಿಳಿ. ॥ ೩೧॥

**ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ**
**ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಸ್ತೇಽಪಿ ಯಾಂತಿ ಪರಾಂ ಗತಿಮ್ ॥**

ಹೇ ಅರ್ಜುನಾ! ಸ್ತ್ರೀಯರು, ವೈಶ್ಯರು, ಶೂದ್ರರು ಹಾಗೂ ಪಾಪಯೋನಿಗಳು ಮುಂತಾದ ಯಾರೇ ಆಗಿರಲಿ, ಅವರೂ ಕೂಡ ನನ್ನಲ್ಲಿ ಶರಣಾಗಿ ಪರಮಗತಿಯನ್ನೇ ಪಡೆಯುತ್ತಾರೆ. ॥ ೩೨॥

**ಕಿಂ ಪುನರ್ಬ್ರಾಹ್ಮಣಾಃ ಪುಣ್ಯಾ ಭಕ್ತಾ ರಾಜರ್ಷಯಸ್ತಥಾ ।**
**ಅನಿತ್ಯಮಸುಖಂ ಲೋಕಮಿಮಂ ಪ್ರಾಪ್ಯ ಭಜಸ್ವ ಮಾಮ್ ॥**

ಪುಣ್ಯಶೀಲರಾದ ಬ್ರಾಹ್ಮಣರು ಹಾಗೂ ರಾಜರ್ಷಿ ಭಕ್ತಜನರು ನನ್ನಲ್ಲಿ ಶರಣಾಗಿ ಪರಮಗತಿ ಯನ್ನು ಪಡೆಯುತ್ತಾರೆ, ಇದರಲ್ಲಿ ಹೇಳುವುದಾದರೂ ಏನಿದೆ! ಅದಕ್ಕಾಗಿ ಸುಖರಹಿತ

ವಾದ, ಕ್ಷಣಭಂಗುರವಾದ ಈ ಮನುಷ್ಯ ಶರೀರವನ್ನು ಪಡೆದುಕೊಂಡು ನೀನು ನಿರಂತರ ನನ್ನನ್ನೇ ಭಜಿಸು. ॥ ೩೩॥

**ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।**
**ಮಾಮೇವೈಷ್ಯಸಿ ಯುಕ್ತ್ವೈವಮಾತ್ಮಾನಂ ಮತ್ಪರಾಯಣಃ ॥**

ನನ್ನಲ್ಲಿ ಮನಸ್ಸುಳ್ಳವನಾಗು, ನನ್ನ ಭಕ್ತನಾಗು, ನನ್ನನ್ನು ಪೂಜಿಸುವವನಾಗು. ನನಗೆ ನಮಸ್ಕರಿಸು, ಈ ಪ್ರಕಾರ ಆತ್ಮವನ್ನು ನನ್ನಲ್ಲಿ ನಿಯುಕ್ತಗೊಳಿಸಿ ನನ್ನ ಪರಾಯಣನಾಗಿ ನೀನು ನನ್ನನ್ನೇ ಪಡೆಯುವೆ. ॥ ೩೪॥

*॥ ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ರಾಜವಿದ್ಯಾರಾಜಗುಹ್ಯಯೋಗೋ ನಾಮ ನವಮೋಽಧ್ಯಾಯಃ ॥*

❀ ❀ ❀ ❀ ❀

## ॥ ಅಥ ದಶಮೋಽಧ್ಯಾಯಃ॥

## ವಿಭೂತಿಯೋಗವು

*ಶ್ರೀಭಗವಾನುವಾಚ*

**ಭೂಯ ಏವ ಮಹಾಬಾಹೋ ಶೃಣು ಮೇ ಪರಮಂ ವಚಃ ।**
**ಯತ್ತೇಽಹಂ ಪ್ರೀಯಮಾಣಾಯ ವಕ್ಷ್ಯಾಮಿ ಹಿತಕಾಮ್ಯಯಾ**

ಶ್ರೀಭಗವಂತನು ಹೇಳಿದನು - ಹೇ ಮಹಾಬಾಹುವೇ! ನನ್ನಲ್ಲಿ ಮಿಗಿಲಾದ ಪ್ರೀತಿಯುಳ್ಳವನಾದ ನಿನಗೆ ನನ್ನ ಪರಮ

ರಹಸ್ಯವಾದ ಮತ್ತು ಮಹಾತ್ಮ್ಯಸಹಿತ ವಚನಗಳನ್ನು ನಿನ್ನ ಹಿತಕ್ಕಾಗಿ ಇನ್ನೊಮ್ಮೆ ಹೇಳಿವೆನು, ಅದನ್ನು ಕೇಳು. ॥ ೧॥

**ನ ಮೇ ವಿದುಃ ಸುರಗಣಾಃ ಪ್ರಭವಂ ನ ಮಹರ್ಷಯಃ ।**
**ಅಹಮಾದಿರ್ಹಿ ದೇವಾನಾಂ ಮಹರ್ಷೀಣಾಂ ಚ ಸರ್ವಶಃ ॥**

ನನ್ನ ಉತ್ಪತ್ತಿಯನ್ನು ಅರ್ಥಾತ್ ಲೀಲೆಯಿಂದ ಪ್ರಕಟವಾಗುವುದನ್ನು ದೇವತೆಗಳಾಗಲೀ, ಮಹರ್ಷಿಗಳಾಗಲಿ ತಿಳಿಯುವುದಿಲ್ಲ; ಏಕೆಂದರೆ ನಾನು ಎಲ್ಲ ಪ್ರಕಾರದಿಂದ ದೇವತೆಗಳಿಗೂ ಮತ್ತು ಮಹರ್ಷಿಗಳಿಗೂ ಕೂಡ ಆದಿಕಾರಣನಾಗಿದ್ದೇನೆ ॥ ೨॥

**ಯೋ ಮಾಮಜಮನಾದಿಂ ಚ ವೇತ್ತಿ ಲೋಕಮಹೇಶ್ವರಮ್ ।**
**ಅಸಮ್ಮೂಢಃ ಸ ಮರ್ತ್ಯೇಷು ಸರ್ವಪಾಪೈಃ ಪ್ರಮುಚ್ಯತೇ ॥ ೩॥**

ಯಾರು ನನ್ನನ್ನು ಅಜನ್ಮಾ ಅರ್ಥಾತ್ ವಾಸ್ತವವಾಗಿ ಜನ್ಮರಹಿತ, ಅನಾದಿ ಮತ್ತು ಲೋಕಗಳ ಮಹಾನ್ ಒಡೆಯನೆಂದು ತತ್ತ್ವದಿಂದ ತಿಳಿಯುತ್ತಾನೋ, ಮನುಷ್ಯರಲ್ಲಿ ಜ್ಞಾನಿಯಾದ ಅವನು ಸಮಸ್ತ ಪಾಪಗಳಿಂದ ಮುಕ್ತನಾಗಿ ಬಿಡುತ್ತಾನೆ. ॥ ೩॥

**ಬುದ್ಧಿರ್ಜ್ಞಾನಮಸಂಮೋಹಃ ಕ್ಷಮಾ ಸತ್ಯಂ ದಮಃ ಶಮಃ ।**
**ಸುಖಂ ದುಃಖಂ ಭವೋಽಭಾವೋ ಭಯಂ ಚಾಭಯಮೇವ ಚ**
**ಅಹಿಂಸಾ ಸಮತಾ ತುಷ್ಟಿಸ್ತಪೋ ದಾನಂ ಯಶೋಽಯಶಃ ।**
**ಭವಂತಿ ಭಾವಾ ಭೂತಾನಾಂ ಮತ್ತ ಏವ ಪೃಥಗ್ವಿಧಾಃ ॥ ೫॥**

ನಿಶ್ಚಯ ಮಾಡುವ ಶಕ್ತಿ, ಯಥಾರ್ಥಜ್ಞಾನ, ಅಸಂಮೂಢತೆ (ಜ್ಞಾನ), ಕ್ಷಮಾಗುಣ, ಸತ್ಯ, ಇಂದ್ರಿಯಗಳನ್ನು ವಶದಲ್ಲಿಡುವುದು, ಮನೋನಿಗ್ರಹ ಹಾಗೂ ಸುಖ-ದುಃಖ, ಉತ್ಪತ್ತಿ-ಪ್ರಳಯ ಮತ್ತು ಭಯ-ಅಭಯ ಹಾಗೂ ಅಹಿಂಸೆ, ಸಮತ್ವ, ಸಂತೋಷ, ತಪಸ್ಸು, ದಾನ, ಕೀರ್ತಿ ಮತ್ತು ಅಪಕೀರ್ತಿ, ಇಂತಹ ಅನೇಕ ಪ್ರಕಾರದ ಪ್ರಾಣಿಗಳ ಭಾವಗಳೆಲ್ಲವೂ ನನ್ನಿಂದಲೇ ಉತ್ಪತ್ತಿಯಾಗುತ್ತವೆ. ॥ ೪ - ೫॥

**ಮಹರ್ಷಯಃ ಸಪ್ತ ಪೂರ್ವೇ ಚತ್ವಾರೋ ಮನವಸ್ತಥಾ ।**
**ಮದ್ಭಾವಾ ಮಾನಸಾ ಜಾತಾ ಯೇಷಾಂ ಲೋಕ ಇಮಾಃ ಪ್ರಜಾಃ**

ಈ ಜಗತ್ತಿನಲ್ಲಿ ಯಾರ ಸಮಸ್ತ ಪ್ರಜೆಗಳು ಇವೆಯೋ ಅಂತಹ – ಸಪ್ತಋಷಿಗಳು, ಅವರಿಗಿಂತಲೂ ಹಿಂದೆ ಆಗಿಹೋದ ನಾಲ್ವರು ಸನಕಾದಿಗಳು ಹಾಗೂ ಸ್ವಾಯಂಭುವ ಮೊದಲಾದ ಹದಿನಾಲ್ಕು ಮನುಗಳು, ಇವರೆಲ್ಲ ನನ್ನಲ್ಲಿ ಭಾವವುಳ್ಳವರಾಗಿ ನನ್ನ ಸಂಕಲ್ಪದಿಂದಲೇ ಹುಟ್ಟಿದವರಾಗಿದ್ದಾರೆ.

**ಏತಾಂ ವಿಭೂತಿಂ ಯೋಗಂ ಚ ಮಮ ಯೋ ವೇತ್ತಿ ತತ್ತ್ವತಃ।**
**ಸೋಽವಿಕಂಪೇನ ಯೋಗೇನ ಯುಜ್ಯತೇ ನಾತ್ರ ಸಂಶಯಃ ॥**

ಯಾವ ಪುರುಷನು ನನ್ನ ಈ ಪರಮೈಶ್ವರ್ಯರೂಪೀ ವಿಭೂತಿಯನ್ನು ಮತ್ತು ಯೋಗಶಕ್ತಿಯನ್ನು ತತ್ವದಿಂದ ತಿಳಿಯುತ್ತಾನೋ ಅವನು ನಿಶ್ಚಲವಾದ ಭಕ್ತಿಯೋಗದಿಂದ

ಯುಕ್ತನಾಗುತ್ತಾನೆ ಎಂಬುದರಲ್ಲಿ ಯಾವುದೇ ಸಂಶಯವೂ ಇಲ್ಲ. ॥ ೭॥

**ಅಹಂ ಸರ್ವಸ್ಯ ಪ್ರಭವೋ ಮತ್ತಃ ಸರ್ವಂ ಪ್ರವರ್ತತೇ ।**
**ಇತಿ ಮತ್ವಾ ಭಜಂತೇ ಮಾಂ ಬುಧಾ ಭಾವಸಮನ್ವಿತಾಃ ॥ ೮॥**

ವಾಸುದೇವನಾದ ನಾನೇ ಸಂಪೂರ್ಣ ಜಗತ್ತಿನ ಉತ್ಪತ್ತಿಗೆ ಕಾರಣನಾಗಿದ್ದೇನೆ ಮತ್ತು ನನ್ನಿಂದಲೇ ಎಲ್ಲ ಜಗತ್ತು ವರ್ತಿಸುತ್ತದೆ. ಈ ಪ್ರಕಾರವಾಗಿ ತಿಳಿದುಕೊಂಡು ಶ್ರದ್ಧೆ ಮತ್ತು ಭಕ್ತಿಯಿಂದ ಕೂಡಿದವರು ಬುದ್ಧಿವಂತರಾದ ಭಕ್ತಜನರು ಪರಮೇಶ್ವರನಾದ ನನ್ನನ್ನೇ ನಿರಂತರ ಭಜಿಸುತ್ತಾರೆ. ॥ ೮॥

**ಮಚ್ಚಿತ್ತಾ ಮದ್ಗತಪ್ರಾಣಾ ಬೋಧಯಂತಃ ಪರಸ್ಪರಮ್।**
**ಕಥಯಂತಶ್ಚ ಮಾಂ ನಿತ್ಯಂ ತುಷ್ಯಂತಿ ಚ ರಮಂತಿ ಚ ॥ ೯॥**

ನಿರಂತರವಾಗಿ ನನ್ನಲ್ಲಿ ಮನಸ್ಸನ್ನು ತೊಡಗಿಸುವವರು ಮತ್ತು ನನ್ನಲ್ಲೇ ಪ್ರಾಣಗಳನ್ನು ಅರ್ಪಿಸುವ ಭಕ್ತಜನರು, ನನ್ನ ಭಕ್ತಿಯ ಚರ್ಚೆಯ ಮೂಲಕ ತಮ್ಮ ತಮ್ಮಲ್ಲಿ ನನ್ನ ಪ್ರಭಾವವನ್ನು ತಿಳಿಸಿಕೊಡುತ್ತ ಹಾಗೂ ಗುಣ ಮತ್ತು ಪ್ರಭಾವ ಸಹಿತ ನನ್ನ ಕಥೆಗಳನ್ನು ಹೇಳಿಕೊಳ್ಳುತ್ತಲೇ ನಿರಂತರ ಸಂತುಷ್ಟರಾಗುತ್ತಾರೆ ಮತ್ತು ವಾಸುದೇವನಾದ ನನ್ನಲ್ಲಿಯೇ ನಿರಂತರ ರಮಿಸುತ್ತಾರೆ.

**ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಮ್ ।**
**ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾಂತಿ ತೇ**

ಆ ನಿರಂತರ ನನ್ನ ಧ್ಯಾನಾದಿಗಳಲ್ಲಿ ತೊಡಗಿರುವ ಮತ್ತು ಪ್ರೇಮಪೂರ್ವಕವಾಗಿ ಭಜಿಸುವ ಭಕ್ತರಿಗೆ ನಾನು ಯಾವುದರಿಂದ ಅವರು ನನ್ನನ್ನೇ ಪಡೆಯುತ್ತಾರೋ ಅಂತಹ ತತ್ವಜ್ಞಾನ ರೂಪವಾದ ಯೋಗವನ್ನು ಕೊಡುತ್ತೇನೆ. ॥ ೧೦॥

**ತೇಷಾಮೇವಾನುಕಂಪಾರ್ಥಮಹಮಜ್ಞಾನಜಂ ತಮಃ ।**
**ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ ॥**

ಹೇ ಅರ್ಜುನನೇ! ಅವರನ್ನು ಅನುಗ್ರಹಿಸುವುದಕ್ಕಾಗಿ ಅವರ ಅಂತಃಕರಣದಲ್ಲಿ ಸ್ಥಿತನಾಗಿ ಸ್ವಯಂ ನಾನೇ ಅವರ ಅಜ್ಞಾನದಿಂದ ಉಂಟಾದ ಅಂಧಕಾರವನ್ನು ಪ್ರಕಾಶಮಯವಾದ, ತತ್ವಜ್ಞಾನ ರೂಪೀ ದೀಪದ ಮೂಲಕ ನಾಶಗೊಳಿಸುತ್ತೇನೆ. ॥ ೧೧॥

*ಅರ್ಜುನ ಉವಾಚ*

**ಪರಂ ಬ್ರಹ್ಮ ಪರಂ ಧಾಮ ಪವಿತ್ರಂ ಪರಮಂ ಭವಾನ್ ।**
**ಪುರುಷಂ ಶಾಶ್ವತಂ ದಿವ್ಯಮಾದಿದೇವಮಜಂ ವಿಭುಮ್ ॥ ೧೨॥**
**ಆಹುಸ್ತ್ವಾಮೃಷಯಃ ಸರ್ವೇ ದೇವರ್ಷಿರ್ನಾರದಸ್ತಥಾ ।**
**ಅಸಿತೋ ದೇವಲೋ ವ್ಯಾಸಃ ಸ್ವಯಂ ಚೈವ ಬ್ರವೀಷಿ ಮೇ ॥**

ಅರ್ಜುನನು ಹೇಳಿದನು – ನೀನು ಪರಮಬ್ರಹ್ಮ, ಪರಮಧಾಮ ಮತ್ತು ಪರಮ ಪವಿತ್ರನಾಗಿದ್ದೀಯೇ, ಏಕೆಂದರೆ ನಿನ್ನನ್ನು ಎಲ್ಲ ಋಷಿಗಳು ಸನಾತನ ದಿವ್ಯ ಪುರುಷನೆಂದೂ,

ಮತ್ತು ದೇವತೆಗಳಿಗೂ ಆದಿದೇವನೆಂದೂ, ಜನ್ಮರಹಿತನೆಂದೂ, ಸರ್ವವ್ಯಾಪಿಯೆಂದೂ ಹೇಳುತ್ತಾರೆ. ಹಾಗೆಯೇ ದೇವರ್ಷಿಗಳಾದ ನಾರದರು ಹಾಗೂ ಅಸಿತರೂ, ದೇವಲಋಷಿಗಳೂ ಹಾಗೂ ಮಹರ್ಷಿಗಳಾದ ವೇದವ್ಯಾಸರು ಕೂಡ ಹೇಳುತ್ತಾರೆ ಮತ್ತು ಸ್ವಯಂ ನೀನು ಕೂಡ ನನ್ನ ಬಳಿ ಹಾಗೆಯೇ ಹೇಳುತ್ತಿರುವೆ. ॥ ೧೨ - ೧೩॥

**ಸರ್ವಮೇತದೃತಂ ಮನ್ಯೇ ಯನ್ಮಾಂ ವದಸಿ ಕೇಶವ।**
**ನ ಹಿ ತೇ ಭಗವನ್ವ್ಯಕ್ತಿಂ ವಿದುರ್ದೇವಾ ನ ದಾನವಾಃ ॥ ೧೪॥**

ಹೇ ಕೇಶವಾ! ಏನೆಲ್ಲವನ್ನು ನನ್ನ ಬಳಿಯಲ್ಲಿ ನೀನು ಹೇಳುತ್ತಿರುವಿಯೋ ಆ ಎಲ್ಲ ಮಾತುಗಳನ್ನು ನಾನು ಸತ್ಯವೆಂದು ತಿಳಿಯುತ್ತೇನೆ. ಹೇ ಭಗವಂತಾ! ನಿನ್ನ ಲೀಲಾಮಯ ಸ್ವರೂಪವನ್ನು ದಾನವರಾಗಲೀ, ದೇವತೆಗಳಾಗಲೀ ತಿಳಿಯಲಾರರು. ॥ ೧೪॥

**ಸ್ವಯಮೇವಾತ್ಮನಾऽತ್ಮಾನಂ ವೇತ್ಥ ತ್ವಂ ಪುರುಷೋತ್ತಮ ।**
**ಭೂತಭಾವನ ಭೂತೇಶ ದೇವದೇವ ಜಗತ್ಪತೇ ॥ ೧೫॥**

ಹೇ ಭೂತಗಳನ್ನು ಉತ್ಪತ್ತಿ ಮಾಡುವವನೇ! ಹೇ ಭೂತಗಳ ಒಡೆಯನೇ! ಹೇ ದೇವತೆಗಳ ದೇವನೇ! ಹೇ ಜಗತ್ತಿನ ಸ್ವಾಮಿಯೇ! ಹೇ ಪುರುಷೋತ್ತಮನೇ! ನೀನು ಸ್ವಯಂ ತನ್ನಿಂದಲೇ ತನ್ನನ್ನು ಅರಿಯುತ್ತೀಯೆ. ॥ ೧೫॥

**ವಕ್ತುಮರ್ಹಸ್ಯಶೇಷೇಣ ದಿವ್ಯಾ ಹ್ಯಾತ್ಮವಿಭೂತಯಃ ।**
**ಯಾಭಿರ್ವಿಭೂತಿಭಿರ್ಲೋಕಾನಿಮಾಂಸ್ತ್ವಂ ವ್ಯಾಪ್ಯ ತಿಷ್ಠಸಿ ॥**

ಆದ್ದರಿಂದ ಹೇ ಭಗವಂತ! ಯಾವ ವಿಭೂತಿಗಳ ಮೂಲಕ ನೀನು ಈ ಎಲ್ಲ ಲೋಕಗಳನ್ನು ವ್ಯಾಪಿಸಿಕೊಂಡು ಸ್ಥಿತನಾಗಿರುವೆಯೋ ಆ ನಿನ್ನ ದಿವ್ಯ ವಿಭೂತಿಗಳನ್ನು ಸಂಪೂರ್ಣವಾಗಿ ಹೇಳಲು ನೀನೇ ಸಮರ್ಥನಾಗಿರುವೆ. ॥ ೧೬॥

**ಕಥಂ ವಿದ್ಯಾಮಹಂ ಯೋಗಿಂಸ್ತ್ವಾಂ ಸದಾ ಪರಿಚಿಂತಯನ್ ।**
**ಕೇಷು ಕೇಷು ಚ ಭಾವೇಷು ಚಿಂತ್ಯೋಽಸಿ ಭಗವನ್ಮಯಾ ॥ ೧೭॥**

ಹೇ ಯೋಗೀಶ್ವರ! ನಾನು ಯಾವ ಪ್ರಕಾರವಾಗಿ ನಿರಂತರ ಚಿಂತನೆ ಮಾಡುತ್ತಾ ನಿನ್ನನ್ನು ಅರಿಯಲಿ; ಮತ್ತು ಹೇ ಭಗವಂತಾ! ನೀನು ಯಾವ ಯಾವ ಭಾವಗಳಿಂದ ನನ್ನ ಮೂಲಕ ಚಿಂತಿಸಲ್ಪಡಲು ಯೋಗ್ಯನಾಗಿರುವೆ? ॥ ೧೭॥

**ವಿಸ್ತರೇಣಾತ್ಮನೋ ಯೋಗಂ ವಿಭೂತಿಂ ಚ ಜನಾರ್ದನ ।**
**ಭೂಯಃ ಕಥಯ ತೃಪ್ತಿರ್ಹಿ ಶೃಣ್ವತೋ ನಾಸ್ತಿ ಮೇಽಮೃತಮ್**

ಹೇ ಜನಾರ್ದನ! ನಿನ್ನ ಯೋಗಶಕ್ತಿಯನ್ನು ಮತ್ತು ವಿಭೂತಿಗಳನ್ನು ಇನ್ನೂ ವಿಸ್ತಾರಪೂರ್ವಕವಾಗಿ ಹೇಳು. ಏಕೆಂದರೆ ನಿನ್ನ ಅಮೃತಮಯವಾದ ವಚನಗಳನ್ನು ಕೇಳಿದಷ್ಟು ತೃಪ್ತಿ ಆಗುವುದಿಲ್ಲ. ಅರ್ಥಾತ್ ಕೇಳಬೇಕೆನ್ನುವ ಉತ್ಕಂಠತೆ ಹೆಚ್ಚುತ್ತಾ ಇದೆ. ॥ ೧೮॥

ಶ್ರೀಭಗವಾನುವಾಚ

**ಹಂತ ತೇ ಕಥಯಿಷ್ಯಾಮಿ ದಿವ್ಯಾ ಹ್ಯಾತ್ಮವಿಭೂತಯಃ ।**
**ಪ್ರಾಧಾನ್ಯತಃ ಕುರುಶ್ರೇಷ್ಠ ನಾಸ್ತ್ಯಂತೋ ವಿಸ್ತರಸ್ಯ ಮೇ ॥ ೧೯॥**

ಶ್ರೀಭಗವಂತನು ಹೇಳಿದನು - ಹೇ ಕುರುಶ್ರೇಷ್ಠನೆ! ನಾನು ನನ್ನ ದಿವ್ಯವಾದ ವಿಭೂತಿಗಳನ್ನು ಈಗ ನಿನಗೋಸ್ಕರ ಪ್ರಧಾನತೆಯಿಂದ ಹೇಳುವೆನು. ಏಕೆಂದರೆ ನನ್ನ ವಿಸ್ತಾರದ ಅಂತ್ಯ ಇರುವುದಿಲ್ಲ. ॥ ೧೯॥

**ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ ।**
**ಅಹಮಾದಿಶ್ಚ ಮಧ್ಯಂ ಚ ಭೂತಾನಾಮಂತ ಏವ ಚ ॥ ೨೦॥**

ಹೇ ಅರ್ಜುನನೇ! ನಾನು ಎಲ್ಲ ಭೂತಗಳ ಹೃದಯದಲ್ಲಿ ಸ್ಥಿತನಾಗಿದ್ದು ಎಲ್ಲರ ಆತ್ಮವಾಗಿದ್ದೇನೆ ಹಾಗೂ ಸಂಪೂರ್ಣ ಭೂತಗಳ ಆದಿ, ಮಧ್ಯ ಮತ್ತು ಅಂತ್ಯವು ಸಹ ನಾನೇ ಆಗಿದ್ದೇನೆ. ॥ ೨೦॥

**ಆದಿತ್ಯಾನಾಮಹಂ ವಿಷ್ಣುರ್ಜ್ಯೋತಿಷಾಂ ರವಿರಂಶುಮಾನ್ ।**
**ಮರೀಚಿರ್ಮರುತಾಮಸ್ಮಿ ನಕ್ಷತ್ರಾಣಾಮಹಂ ಶಶೀ ॥ ೨೧॥**

ನಾನು ಅದಿತಿಯ ಹನ್ನೆರಡು ಪುತ್ರರಲ್ಲಿ ವಿಷ್ಣುವು ಮತ್ತು ಜ್ಯೋತಿಗಳಲ್ಲಿ ಕಿರಣಗಳುಳ್ಳ ಸೂರ್ಯನಾಗಿದ್ದೇನೆ. ಹಾಗೆಯೇ ನಾನು ನಲವತ್ತೊಂಭತ್ತು ವಾಯುದೇವತೆಗಳ ತೇಜಸ್ಸು ಮತ್ತು ನಕ್ಷತ್ರಗಳ ಅಧಿಪತಿಯಾದ ಚಂದ್ರನಾಗಿದ್ದೇನೆ. ॥ ೨೧॥

**ವೇದಾನಾಂ ಸಾಮವೇದೋಽಸ್ಮಿ ದೇವಾನಾಮಸ್ಮಿ ವಾಸವಃ ।**
**ಇಂದ್ರಿಯಾಣಾಂ ಮನಶ್ಚಾಸ್ಮಿ ಭೂತಾನಾಮಸ್ಮಿ ಚೇತನಾ ॥ ೨೨॥**

ನಾನು ವೇದಗಳಲ್ಲಿ ಸಾಮವೇದವಾಗಿದ್ದೇನೆ, ದೇವತೆಗಳಲ್ಲಿ ಇಂದ್ರನಾಗಿದ್ದೇನೆ. ಇಂದ್ರಿಯಗಳಲ್ಲಿ ಮನಸ್ಸಾಗಿದ್ದೇನೆ ಮತ್ತು ಭೂತ-ಪ್ರಾಣಿಗಳ ಚೇತನ ಅರ್ಥಾತ್ ಜೀವನ ಶಕ್ತಿಯಾಗಿದ್ದೇನೆ. ॥ ೨೨॥

**ರುದ್ರಾಣಾಂ ಶಂಕರಶ್ಚಾಸ್ಮಿ ವಿತ್ತೇಶೋ ಯಕ್ಷರಕ್ಷಸಾಮ್ ।**
**ವಸೂನಾಂ ಪಾವಕಶ್ಚಾಸ್ಮಿ ಮೇರುಃ ಶಿಖರಿಣಾಮಹಮ್ ॥ ೨೩॥**

ನಾನು ಏಕಾದಶರುದ್ರರಲ್ಲಿ ಶಂಕರನಾಗಿದ್ದೇನೆ ಮತ್ತು ಯಕ್ಷ-ರಾಕ್ಷಸರಲ್ಲಿ ಧನಾಧಿಪತಿಯಾದ ಕುಬೇರನಾಗಿದ್ದೇನೆ. ಅಷ್ಟ ವಸುಗಳಲ್ಲಿ ಅಗ್ನಿಯಾಗಿದ್ದೇನೆ ಮತ್ತು ಪರ್ವತಗಳಲ್ಲಿ ಮೇರು ಪರ್ವತನಾಗಿದ್ದೇನೆ. ॥ ೨೩॥

**ಪುರೋಧಸಾಂ ಚ ಮುಖ್ಯಂ ಮಾಂ ವಿದ್ಧಿ ಪಾರ್ಥ ಬೃಹಸ್ಪತಿಮ್।**
**ಸೇನಾನೀನಾಮಹಂ ಸ್ಕಂದಃ ಸರಸಾಮಸ್ಮಿ ಸಾಗರಃ ॥ ೨೪॥**

ಪುರೋಹಿತರಲ್ಲಿ ಮುಖ್ಯನಾದ ಬೃಹಸ್ಪತಿಯು ನಾನೆಂದು ತಿಳಿ. ಹೇ ಪಾರ್ಥನೇ! ನಾನು ಸೇನಾಪತಿಗಳಲ್ಲಿ ಸ್ಕಂದನೂ ಮತ್ತು ಜಲಾಶಯಗಳಲ್ಲಿ ಸಮುದ್ರವೂ ಆಗಿದ್ದೇನೆ. ॥ ೨೪॥

**ಮಹರ್ಷೀಣಾಂ ಭೃಗುರಹಂ ಗಿರಾಮಸ್ಮ್ಯೇಕಮಕ್ಷರಮ್**
**ಯಜ್ಞಾನಾಂ ಜಪಯಜ್ಞೋಽಸ್ಮಿ ಸ್ಥಾವರಾಣಾಂ ಹಿಮಾಲಯಃ ॥**

ಮಹರ್ಷಿಗಳಲ್ಲಿ ಭೃಗುವು ನಾನು ಮತ್ತು ಶಬ್ದಗಳಲ್ಲಿ ಏಕಾಕ್ಷರ ಅರ್ಥಾತ್ ಓಂಕಾರನಾಗಿದ್ದೇನೆ. ಎಲ್ಲ ಪ್ರಕಾರದ ಯಜ್ಞಗಳಲ್ಲಿ ಜಪಯಜ್ಞವೂ ಮತ್ತು ಸ್ಥಿರವಾಗಿರುವುದರಲ್ಲಿ ಹಿಮಾಲಯ ಪರ್ವತವು ನಾನಾಗಿದ್ದೇನೆ. ॥ ೨೫॥

**ಅಶ್ವತ್ಥಃ ಸರ್ವವೃಕ್ಷಾಣಾಂ ದೇವರ್ಷೀಣಾಂ ಚ ನಾರದಃ ।**
**ಗಂಧರ್ವಾಣಾಂ ಚಿತ್ರರಥಃ ಸಿದ್ಧಾನಾಂ ಕಪಿಲೋ ಮುನಿಃ ॥**

ನಾನು ಎಲ್ಲಾ ವೃಕ್ಷಗಳಲ್ಲಿ ಅಶ್ವತ್ಥವೃಕ್ಷವೂ ದೇವರ್ಷಿಗಳಲ್ಲಿ ನಾರದಮುನಿಯೂ ಗಂಧರ್ವರಲ್ಲಿ ಚಿತ್ರರಥನು ಮತ್ತು ಸಿದ್ಧರಲ್ಲಿ ಕಪಿಲ ಮುನಿಯು ಆಗಿದ್ದೇನೆ. ॥ ೨೬॥

**ಉಚ್ಚೈಃಶ್ರವಸಮಶ್ವಾನಾಂ ವಿದ್ಧಿ ಮಾಮಮೃತೋದ್ಭವಮ್ ।**
**ಐರಾವತಂ ಗಜೇಂದ್ರಾಣಾಂ ನರಾಣಾಂ ಚ ನರಾಧಿಪಮ್ ॥**

ಕುದುರೆಗಳಲ್ಲಿ ಅಮೃತದ ಜೊತೆಯಲ್ಲಿ ಉತ್ಪನ್ನವಾದ ಉಚ್ಚೈಃಶ್ರವಾ ಎಂಬ ಹೆಸರಿನ ಕುದುರೆಯೂ ಶ್ರೇಷ್ಠವಾದ ಆನೆಗಳಲ್ಲಿ ಐರಾವತವೆಂಬ ಹೆಸರಿನ ಆನೆಯೂ ಮತ್ತು ಮನುಷ್ಯರಲ್ಲಿ ರಾಜನೂ ನಾನೇ ಎಂಬುದನ್ನು ತಿಳಿ. ॥ ೨೭॥

**ಆಯುಧಾನಾಮಹಂ ವಜ್ರಂ ಧೇನೂನಾಮಸ್ಮಿ ಕಾಮಧುಕ್ ।**
**ಪ್ರಜನಶ್ಚಾಸ್ಮಿ ಕಂದರ್ಪಃ ಸರ್ಪಾಣಾಮಸ್ಮಿ ವಾಸುಕಿಃ ॥ ೨೮॥**

ನಾನು ಶಸ್ತ್ರಗಳಲ್ಲಿ ವಜ್ರಾಯುಧವೂ ಮತ್ತು ಗೋವುಗಳಲ್ಲಿ ಕಾಮಧೇನುವೂ ಆಗಿದ್ದೇನೆ. ಶಾಸ್ತ್ರೋಕ್ತವಾದ

ರೀತಿಯಲ್ಲಿ ಸಂತಾನೋತ್ಪತ್ತಿಗೆ ಕಾರಣವಾದ ಕಾಮದೇವನಾಗಿದ್ದೇನೆ ಮತ್ತು ಸರ್ಪಗಳಲ್ಲಿ ಸರ್ಪರಾಜ ವಾಸುಕಿಯಾಗಿದ್ದೇನೆ ॥ ೨೮॥

**ಅನಂತಶ್ಚಾಸ್ಮಿ ನಾಗಾನಾಂ ವರುಣೋ ಯಾದಸಾಮಹಮ್ ।**
**ಪಿತೄಣಾಮರ್ಯಮಾ ಚಾಸ್ಮಿ ಯಮಃ ಸಂಯಮತಾಮಹಮ್**

ನಾನು ನಾಗಗಳಲ್ಲಿ ಆದಿಶೇಷ ಮತ್ತು ಜಲಚರಗಳ ಅಧಿಪತಿ ವರುಣ ದೇವತೆ ಆಗಿದ್ದೇನೆ. ಪಿತೃದೇವತೆಗಳಲ್ಲಿ ಅರ್ಯಮಾ ಎಂಬ ಹೆಸರಿನ ಪಿತೃವು ಹಾಗೂ ಶಾಸನಮಾಡುವವರಲ್ಲಿ ಯಮಧರ್ಮನೂ ಆಗಿದ್ದೇನೆ ॥ ೨೯॥

**ಪ್ರಹ್ಲಾದಶ್ಚಾಸ್ಮಿ ದೈತ್ಯಾನಾಂ ಕಾಲಃ ಕಲಯತಾಮಹಮ್ ।**
**ಮೃಗಾಣಾಂ ಚ ಮೃಗೇಂದ್ರೋऽಹಂ ವೈನತೇಯಶ್ಚ ಪಕ್ಷಿಣಾಮ್**

ನಾನು ದೈತ್ಯರಲ್ಲಿ ಪ್ರಹ್ಲಾದನು ಮತ್ತು ಎಣಿಸುವುದರಲ್ಲಿ ಸಮಯವು ಆಗಿದ್ದೇನೆ, ಮೃಗಗಳಲ್ಲಿ ಮೃಗರಾಜನಾದ ಸಿಂಹನೂ ಮತ್ತು ಪಕ್ಷಿಗಳಲ್ಲಿ ಗರುಡನೂ ಆಗಿದ್ದೇನೆ. ॥ ೩೦॥

**ಪವನಃ ಪವತಾಮಸ್ಮಿ ರಾಮಃ ಶಸ್ತ್ರಭೃತಾಮಹಮ್ ।**
**ಝಷಾಣಾಂ ಮಕರಶ್ಚಾಸ್ಮಿ ಸ್ರೋತಸಾಮಸ್ಮಿ ಜಾಹ್ನವೀ ॥ ೩೧॥**

ನಾನು ಪವಿತ್ರಗೊಳಿಸುವವರಲ್ಲಿ ವಾಯುವು ಮತ್ತು ಶಸ್ತ್ರಧಾರಿಗಳಲ್ಲಿ ಶ್ರೀರಾಮನಾಗಿದ್ದೇನೆ. ಮೀನುಗಳಲ್ಲಿ ಮೊಸಳೆಯೂ ಮತ್ತು ನದಿಗಳಲ್ಲಿ ಗಂಗಾಭಾಗೀರಥೀ ಆಗಿದ್ದೇನೆ. ॥ ೩೧॥

**ಸರ್ಗಾಣಾಮಾದಿರಂತಶ್ಚ ಮಧ್ಯಂ ಚೈವಾಹಮರ್ಜುನ ।**
**ಅಧ್ಯಾತ್ಮವಿದ್ಯಾ ವಿದ್ಯಾನಾಂ ವಾದಃ ಪ್ರವದತಾಮಹಮ್ ॥ ೩೨॥**

ಹೇ ಅರ್ಜುನನೇ! ಸೃಷ್ಟಿಗಳ ಆದಿ, ಮಧ್ಯ ಮತ್ತು ಅಂತ್ಯವು ನಾನೇ ಆಗಿದ್ದೇನೆ. ವಿದ್ಯೆಗಳಲ್ಲಿ ಅಧ್ಯಾತ್ಮವಿದ್ಯೆ ಅರ್ಥಾತ್ ಬ್ರಹ್ಮವಿದ್ಯೆ ಮತ್ತು ಪರಸ್ಪರ ವಾದ ಮಾಡುವವರು ತತ್ವ-ನಿರ್ಣಯಕ್ಕಾಗಿ ಮಾಡಲಾಗುವ ವಾದವು ನಾನೇ ಆಗಿದ್ದೇನೆ.

**ಅಕ್ಷರಾಣಾಮಕಾರೋಽಸ್ಮಿ ದ್ವಂದ್ವಃ ಸಾಮಾಸಿಕಸ್ಯ ಚ ।**
**ಅಹಮೇವಾಕ್ಷಯಃ ಕಾಲೋ ಧಾತಾಹಂ ವಿಶ್ವತೋಮುಖಃ ॥**

ನಾನು ಅಕ್ಷರಗಳಲ್ಲಿ ಅಕಾರವು ಮತ್ತು ಸಮಾಸಗಳಲ್ಲಿ ದ್ವಂದ್ವ ಸಮಾಸವು ಆಗಿದ್ದೇನೆ. ಅಕ್ಷಯ ಕಾಲ ಅರ್ಥಾತ್ ಕಾಲಕ್ಕೂ ಮಹಾಕಾಲನಾದವನು ಹಾಗೂ ಎಲ್ಲ ಕಡೆ ಮುಖವುಳ್ಳವನಾದ ವಿರಾಟ್ ಸ್ವರೂಪನು, ಎಲ್ಲರ ಧಾರಣೆ ಪೋಷಣೆ ಮಾಡುವವನು ಸಹ ನಾನೇ ಆಗಿದ್ದೇನೆ. ॥ ೩೩ ॥

**ಮೃತ್ಯುಃ ಸರ್ವಹರಶ್ಚಾಹಮುದ್ಭವಶ್ಚ ಭವಿಷ್ಯತಾಮ್ ।**
**ಕೀರ್ತಿಃ ಶ್ರೀರ್ವಾಕ್ಚ ನಾರೀಣಾಂ ಸ್ಮೃತಿರ್ಮೇಧಾ ಧೃತಿಃ ಕ್ಷಮಾ**

ನಾನು ಎಲ್ಲವನ್ನೂ ನಾಶಪಡಿಸುವ ಮೃತ್ಯು ಮತ್ತು ಉತ್ಪನ್ನವಾಗುವವರ ಉತ್ಪತ್ತಿಗೆ ಕಾರಣನೂ ಆಗಿದ್ದೇನೆ.

ಹಾಗೆಯೇ ಸ್ತ್ರೀಯರಲ್ಲಿ ಕೀರ್ತಿ, ಶ್ರೀ, ವಾಕ್, ಸ್ಮೃತಿ, ಮೇಧಾ, ಧೃತಿ, ಮತ್ತು ಕ್ಷಮೆ ನಾನೇ ಆಗಿದ್ದೇನೆ. ॥ ೩೪॥

**ಬೃಹತ್ಸಾಮ ತಥಾ ಸಾಮ್ನಾಂ ಗಾಯತ್ರೀ ಛಂದಸಾಮಹಮ್ ।**
**ಮಾಸಾನಾಂ ಮಾರ್ಗಶೀರ್ಷೋಽಹಮೃತೂನಾಂ ಕುಸುಮಾಕರಃ**

ಹಾಗೂ ಗಾಯನ ಮಾಡಲು ಯೋಗ್ಯವಾದ ಶ್ರುತಿಗಳಲ್ಲಿ ನಾನು ಬೃಹತ್ಸಾಮನೂ ಮತ್ತು ಛಂದಸ್ಸುಗಳಲ್ಲಿ ಗಾಯತ್ರೀ ಛಂದಸ್ಸು ನಾನು. ಮಾಸಗಳಲ್ಲಿ ಮಾರ್ಗಶೀರ್ಷವೂ, ಋತುಗಳಲ್ಲಿ ವಸಂತನೂ ನಾನಾಗಿದ್ದೇನೆ. ॥ ೩೫॥

**ದ್ಯೂತಂ ಛಲಯತಾಮಸ್ಮಿ ತೇಜಸ್ತೇಜಸ್ವಿನಾಮಹಮ್ ।**
**ಜಯೋಽಸ್ಮಿ ವ್ಯವಸಾಯೋಽಸ್ಮಿ ಸತ್ತ್ವಂ ಸತ್ತ್ವವತಾಮಹಮ್ ॥**

ನಾನು ಕಪಟ ಮಾಡುವವರಲ್ಲಿ ದ್ಯೂತನಾಗಿದ್ದೇನೆ ಮತ್ತು ಪ್ರಭಾವಶಾಲಿ ಪುರುಷರ ಪ್ರಭಾವವಾಗಿದ್ದೇನೆ. ನಾನು ಜಯಶಾಲಿಗಳ ಜಯವು ಆಗಿದ್ದೇನೆ. ನಿಶ್ಚಯಿಸುವವರ ನಿಶ್ಚಯಾತ್ಮಿಕಾ ಬುದ್ಧಿ ಮತ್ತು ಸಾತ್ತ್ವಿಕ ಪುರುಷರ ಸಾತ್ತ್ವಿಕ ಭಾವವಾಗಿದ್ದೇನೆ. ॥ ೩೬॥

**ವೃಷ್ಣೀನಾಂ ವಾಸುದೇವೋಽಸ್ಮಿ ಪಾಂಡವಾನಾಂ ಧನಂಜಯಃ।**
**ಮುನೀನಾಮಪ್ಯಹಂ ವ್ಯಾಸಃ ಕವೀನಾಮುಶನಾ ಕವಿಃ ॥ ೩೭॥**

ವೃಷ್ಣಿವಂಶೀಯರಲ್ಲಿ ವಾಸುದೇವ, ಅರ್ಥಾತ್ ಸ್ವತಃ ನಿನ್ನ ಸಖನಾದ ನಾನು, ಪಾಂಡವರಲ್ಲಿ ಧನಂಜಯ, ಅರ್ಥಾತ್

ನೀನು, ಮುನಿಗಳಲ್ಲಿ ವೇದವ್ಯಾಸರು ಮತ್ತು ಕವಿಗಳಲ್ಲಿ ಶುಕ್ರಾಚಾರ್ಯ ಕವಿಗಳು ನಾನೇ ಆಗಿದ್ದೇನೆ. ॥ ೩೭॥

**ದಂಡೋ ದಮಯತಾಮಸ್ಮಿ ನೀತಿರಸ್ಮಿ ಜಿಗೀಷತಾಮ್ ।**
**ಮೌನಂ ಚೈವಾಸ್ಮಿ ಗುಹ್ಯಾನಾಂ ಜ್ಞಾನಂ ಜ್ಞಾನವತಾಮಹಮ್**

ನಾನು ದಮನ ಮಾಡುವವರ ದಂಡ ಅರ್ಥಾತ್ ದಮನ ಮಾಡುವ ಶಕ್ತಿಯು ಆಗಿದ್ದೇನೆ; ಜಯಗಳಿಸುವ ಇಚ್ಛೆಯುಳ್ಳವರ ನೀತಿಯೂ ಆಗಿದ್ದೇನೆ. ಗೋಪ್ಯವಾಗಿಡಲು ಯೋಗ್ಯವಾದ ಭಾವಗಳ ರಕ್ಷಕವಾದ 'ಮೌನ' ನಾಗಿದ್ದೇನೆ ಮತ್ತು ಜ್ಞಾನವಂತರ ತತ್ತ್ವಜ್ಞಾನವು ನಾನೇ ಆಗಿದ್ದೇನೆ. ॥ ೩೮॥

**ಯಚ್ಚಾಪಿ ಸರ್ವಭೂತಾನಾಂ ಬೀಜಂ ತದಹಮರ್ಜುನ ।**
**ನ ತದಸ್ತಿ ವಿನಾ ಯತ್ಸ್ಯಾನ್ಮಯಾ ಭೂತಂ ಚರಾಚರಮ್ ॥ ೩೯॥**

ಮತ್ತು ಹೇ ಅರ್ಜುನಾ! ಯಾವುದು ಎಲ್ಲ ಭೂತಗಳ ಉತ್ಪತ್ತಿಗೆ ಕಾರಣವಾಗಿರುವುದೋ ಅದು ಕೂಡ ನಾನೇ ಆಗಿದ್ದೇನೆ; ಏಕೆಂದರೆ, ನನ್ನಿಂದ ರಹಿತವಾದಂತಹ ಯಾವುದೇ ಚರ ಮತ್ತು ಅಚರ ಪ್ರಾಣಿಗಳು ಇರುವುದಿಲ್ಲ. ॥ ೩೯॥

**ನಾಂತೋಽಸ್ತಿ ಮಮ ದಿವ್ಯಾನಾಂ ವಿಭೂತೀನಾಂ ಪರಂತಪ ।**
**ಏಷ ತೂದ್ದೇಶತಃ ಪ್ರೋಕ್ತೋ ವಿಭೂತೇರ್ವಿಸ್ತರೋ ಮಯಾ**

ಹೇ ಪರಂತಪ ಅರ್ಜುನಾ! ನನ್ನ ದಿವ್ಯವಾದ ವಿಭೂತಿಗಳಿಗೆ ಅಂತ್ಯವೆಂಬುದೇ ಇಲ್ಲ. ನನ್ನ ವಿಭೂತಿಗಳ ಈ ವಿಸ್ತಾರ

ವಾದರೋ ನಿನಗಾಗಿ ಏಕದೇಶದಿಂದ ಅರ್ಥಾತ್ ಸಂಕ್ಷೇಪ ವಾಗಿ ನಾನು ಹೇಳಿದ್ದೇನೆ. ॥ ೪೦॥

**ಯದ್ಯದ್ವಿಭೂತಿಮತ್ಸತ್ತ್ವಂ ಶ್ರೀಮದೂರ್ಜಿತಮೇವ ವಾ ।**
**ತತ್ತದೇವಾವಗಚ್ಛ ತ್ವಂ ಮಮ ತೇಜೋಽಂಶಸಂಭವಮ್ ॥**

ಯಾವ-ಯಾವುದು ವಿಭೂತಿಯುಕ್ತವಾಗಿವೆಯೋ ಅರ್ಥಾತ್ ಐಶ್ವರ್ಯಯುಕ್ತವಾದ, ಕಾಂತಿಯುಕ್ತವಾದ ಮತ್ತು ಶಕ್ತಿಯುಕ್ತವಾದ ವಸ್ತುಗಳಿವೆಯೋ ಅವೆಲ್ಲವನ್ನು ನೀನು ನನ್ನ ತೇಜಸ್ಸಿನ ಅಂಶದ ಅಭಿವ್ಯಕ್ತಿಯೇ ಎಂದು ತಿಳಿ. ॥ ೪೧॥

**ಅಥವಾ ಬಹುನೈತೇನ ಕಿಂ ಜ್ಞಾತೇನ ತವಾರ್ಜುನ ।**
**ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋ ಜಗತ್ ॥ ೪೨॥**

ಅಥವಾ, ಹೇ ಅರ್ಜುನಾ! ಇದಲ್ಲದೆ, ಇದಕ್ಕಿಂತ ಹೆಚ್ಚು ವಿಶದವಾಗಿ ತಿಳಿಯುವುದರಿಂದ ನಿನಗೆ ಯಾವ ಪ್ರಯೋಜನ ವಿದೆ? ನಾನು ಈ ಸಂಪೂರ್ಣ ಜಗತ್ತನ್ನು ನನ್ನ ಯೋಗಶಕ್ತಿಯ ಒಂದಂಶಮಾತ್ರದಿಂದ ಧರಿಸಿಕೊಂಡು ಸ್ಥಿತನಾಗಿದ್ದೇನೆ. ॥ ೪೨॥

*ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು*
*ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ*
*ವಿಭೂತಿಯೋಗೋನಾಮ ದಶಮೋಽಧ್ಯಾಯಃ ॥ ೧೦॥*



## ॥ ಅಥ ಏಕಾದಶೋಽಧ್ಯಾಯಃ॥
## ವಿಶ್ವರೂಪದರ್ಶನಯೋಗವು

### ಅರ್ಜುನ ಉವಾಚ

**ಮದನುಗ್ರಹಾಯ ಪರಮಂ ಗುಹ್ಯಮಧ್ಯಾತ್ಮಸಂಜ್ಞಿತಮ್ ।**
**ಯತ್ತ್ವಯೋಕ್ತಂ ವಚಸ್ತೇನ ಮೋಹೋಽಯಂ ವಿಗತೋ ಮಮ ॥**

ಅರ್ಜುನನು ಹೇಳಿದನು – ನನ್ನ ಮೇಲೆ ಅನುಗ್ರಹಿಸುವುದಕ್ಕಾಗಿ ನೀನು ಯಾವ ಪರಮ ಗೋಪ್ಯವಾದ ಅಧ್ಯಾತ್ಮ ವಿಷಯಕವಾದ ವಚನ ಅರ್ಥಾತ್ ಉಪದೇಶವನ್ನು ಮಾಡಿದೆಯೋ, ಅದರಿಂದ ನನ್ನ ಈ ಅಜ್ಞಾನವು ನಾಶವಾಗಿ ಹೋಗಿದೆ. ॥ ೧॥

**ಭವಾಪ್ಯಯೌ ಹಿ ಭೂತಾನಾಂ ಶ್ರುತೌ ವಿಸ್ತರಶೋ ಮಯಾ।**
**ತ್ವತ್ತಃ ಕಮಲಪತ್ರಾಕ್ಷ ಮಾಹಾತ್ಮ್ಯಮಪಿ ಚಾವ್ಯಯಮ್ ॥ ೨॥**

ಏಕೆಂದರೆ ಹೇ ಕಮಲಪತ್ರಾಕ್ಷನೆ! ನಾನು ನಿನ್ನಿಂದ ಜೀವಜಗತ್ತಿನ ಉತ್ಪತ್ತಿ ಮತ್ತು ಪ್ರಳಯವನ್ನು ವಿಸ್ತಾರಪೂರ್ವಕವಾಗಿ ಕೇಳಿದ್ದೇನೆ ಹಾಗೂ ನಿನ್ನ ಅವಿನಾಶಿಯಾದ ಮಹಿಮೆಯನ್ನು ಸಹ ಕೇಳಿದ್ದೇನೆ. ॥ ೨॥

**ಏವಮೇತದ್ಯಥಾತ್ಥ ತ್ವಮಾತ್ಮಾನಂ ಪರಮೇಶ್ವರ ।**
**ದ್ರಷ್ಟುಮಿಚ್ಛಾಮಿ ತೇ ರೂಪಮೈಶ್ವರಂ ಪುರುಷೋತ್ತಮ ॥ ೩॥**

ಹೇ ಪರಮೇಶ್ವರನೇ! ನೀನು ನಿನ್ನನ್ನು ಹೇಗೆ ಹೇಳಿಕೊಂಡಿರುವೆಯೋ ಅದು ಸರಿಯಾಗಿ ಹಾಗೆಯೇ ಇದೆ. ಆದರೆ

ಹೇ ಪುರುಷೋತ್ತಮನೆ ! ನಿನ್ನ ಜ್ಞಾನ, ಐಶ್ವರ್ಯ, ಶಕ್ತಿ, ಬಲ, ವೀರ್ಯ ಮತ್ತು ತೇಜಸ್ಸಿನಿಂದ ಕೂಡಿದ ಐಶ್ವರ - ರೂಪವನ್ನು ನಾನು ಪ್ರತ್ಯಕ್ಷವಾಗಿ ನೋಡಬಯಸುತ್ತೇನೆ. ॥ ೩॥

**ಮನ್ಯಸೇ ಯದಿ ತಚ್ಛಕ್ಯಂ ಮಯಾ ದ್ರಷ್ಟುಮಿತಿ ಪ್ರಭೋ ।**
**ಯೋಗೇಶ್ವರ ತತೋ ಮೇ ತ್ವಂ ದರ್ಶಯಾತ್ಮಾನಮವ್ಯಯಮ್**

ಹೇ ಪ್ರಭುವೆ! ಒಂದು ವೇಳೆ ನನ್ನ ಮೂಲಕ ನಿನ್ನ ರೂಪವು ನೋಡಲ್ಪಡುವುದು ಶಕ್ಯವಾದುದು ಎಂದು ನೀನು ಭಾವಿಸುವೆಯಾದರೆ, ಆಗ ಹೇ ಯೋಗೀಶ್ವರನೆ! ನೀನು ನಿನ್ನ ಅವಿನಾಶಿಯಾದ ಸ್ವರೂಪದ ದರ್ಶನವನ್ನು ನನಗೆ ಮಾಡಿಸು. ॥ ೪॥

ಶ್ರೀಭಗವಾನುವಾಚ

**ಪಶ್ಯ ಮೇ ಪಾರ್ಥ ರೂಪಾಣಿ ಶತಶೋಽಥ ಸಹಸ್ರಶಃ ।**
**ನಾನಾವಿಧಾನಿ ದಿವ್ಯಾನಿ ನಾನಾವರ್ಣಾಕೃತೀನಿ ಚ ॥ ೫॥**

ಶ್ರೀಭಗವಂತನು ಹೇಳಿದನು – ಹೇ ಪಾರ್ಥನೇ ! ಈಗ ನೀನು ನನ್ನ ನೂರಾರು, ಸಾವಿರಾರು, ನಾನಾ ಪ್ರಕಾರದ, ಮತ್ತು ಬಗೆಬಗೆಯ ವರ್ಣ ಹಾಗೂ ಆಕೃತಿಗಳುಳ್ಳ ಅಲೌಕಿಕ ವಾದ ರೂಪಗಳನ್ನು ನೋಡು. ॥ ೫॥

**ಪಶ್ಯಾದಿತ್ಯಾನ್ವಸೂನ್ ರುದ್ರಾನಶ್ವಿನೌ ಮರುತಸ್ತಥಾ ।**
**ಬಹೂನ್ಯದೃಷ್ಟಪೂರ್ವಾಣಿ ಪಶ್ಯಾಶ್ಚರ್ಯಾಣಿ ಭಾರತ ॥ ೬॥**

ಹೇ ಭರತವಂಶೀಯನಾದ ಅರ್ಜುನನೇ ! ನನ್ನಲ್ಲಿ ಆದಿತ್ಯರನ್ನು ಅರ್ಥಾತ್ ಅದಿತಿಯ ಹನ್ನೆರಡು ಪುತ್ರರನ್ನು, ಅಷ್ಟವಸುಗಳನ್ನು, ಏಕಾದಶ ರುದ್ರರನ್ನು, ಇಬ್ಬರು ಅಶ್ವಿನೀ ಕುಮಾರರನ್ನು ಮತ್ತು ನಲವತ್ತೊಂಭತ್ತು ಮರುದ್ಗಣರನ್ನು ನೋಡು. ಹಾಗೆಯೇ ಇನ್ನೂ ಕೂಡ ಅನೇಕವಾದ ಮೊದಲು ನೋಡದಿರುವ ಆಶ್ಚರ್ಯಮಯ ರೂಪಗಳನ್ನು ನೋಡು !

**ಇಹೈಕಸ್ಥಂ ಜಗತ್ಕೃತ್ಸ್ನಂ ಪಶ್ಯಾದ್ಯ ಸಚರಾಚರಮ್ ।**
**ಮಮ ದೇಹೇ ಗುಡಾಕೇಶ ಯಚ್ಚಾನ್ಯದ್ದ್ರಷ್ಟುಮಿಚ್ಛಸಿ ॥ ೭॥**

ಹೇ ಅರ್ಜುನನೇ ! ಈಗ ಈ ನನ್ನ ಶರೀರದಲ್ಲಿ ಒಂದೆಡೆ ಸ್ಥಿತವಾಗಿರುವ ಚರಾಚರಸಹಿತವಾದ ಸಂಪೂರ್ಣ ಜಗತ್ತನ್ನು ನೋಡು ಹಾಗೂ ಇನ್ನೂ ಏನೇನನ್ನು ನೋಡಲು ಇಚ್ಛಿಸುವೆಯೋ ಅವನ್ನೂ ನೋಡು ! ॥ ೭॥

**ನ ತು ಮಾಂ ಶಕ್ಯಸೇ ದ್ರಷ್ಟುಮನೇನೈವ ಸ್ವಚಕ್ಷುಷಾ ।**
**ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯ ಮೇ ಯೋಗಮೈಶ್ವರಮ್ ॥**

ಆದರೆ ನನ್ನನ್ನು ನೀನು ಈ ನಿನ್ನ ಪ್ರಾಕೃತವಾದ ನೇತ್ರಗಳ ಮೂಲಕ ನೋಡುವುದರಲ್ಲಿ ನಿಸ್ಸಂದೇಹವಾಗಿ ಸಮರ್ಥನಲ್ಲ; ಆದ್ದರಿಂದ ನಾನು ನಿನಗೆ ದಿವ್ಯದೃಷ್ಟಿಯನ್ನು ಕೊಡುತ್ತೇನೆ. ಅದರಿಂದ ನನ್ನ ಈಶ್ವರೀಯವಾದ ಯೋಗಶಕ್ತಿಯನ್ನು ನೋಡು.

ಸಂಜಯ ಉವಾಚ

**ಏವಮುಕ್ತ್ವಾ ತತೋ ರಾಜನ್ಮಹಾಯೋಗೇಶ್ವರೋ ಹರಿಃ ।**
**ದರ್ಶಯಾಮಾಸ ಪಾರ್ಥಾಯ ಪರಮಂ ರೂಪಮೈಶ್ವರಮ್ ॥**

ಸಂಜಯನು ಹೇಳಿದನು – ಹೇ ರಾಜಾ ! ಮಹಾಯೋಗೇಶ್ವರನಾದ ಮತ್ತು ಎಲ್ಲ ಪಾಪಗಳನ್ನು ನಾಶಪಡಿಸುವ ಭಗವಂತನು ಈ ಪ್ರಕಾರವಾಗಿ ಹೇಳಿ, ಅನಂತರ ಅರ್ಜುನನಿಗೆ ಪರಮ ಐಶ್ವರ್ಯದಿಂದ ಕೂಡಿದ ತನ್ನ ದಿವ್ಯ ಸ್ವರೂಪವನ್ನು ತೋರಿಸಿದನು. ॥ ೯॥

**ಅನೇಕವಕ್ತ್ರನಯನಮನೇಕಾದ್ಭುತದರ್ಶನಮ್ ।**
**ಅನೇಕದಿವ್ಯಾಭರಣಂ ದಿವ್ಯಾನೇಕೋದ್ಯತಾಯುಧಮ್ ॥**

**ದಿವ್ಯಮಾಲ್ಯಾಂಬರಧರಂ ದಿವ್ಯಗಂಧಾನುಲೇಪನಮ್ ।**
**ಸರ್ವಾಶ್ಚರ್ಯಮಯಂ ದೇವಮನಂತಂ ವಿಶ್ವತೋಮುಖಮ್**

ಅನೇಕ ಮುಖ ಮತ್ತು ನೇತ್ರಗಳಿಂದ ಯುಕ್ತನಾದ, ಅನೇಕ ಅದ್ಭುತವಾದ ದರ್ಶನಗಳುಳ್ಳ , ಅನೇಕ ಬಗೆಯ ದಿವ್ಯವಾದ ಭೂಷಣಗಳಿಂದ ಅಲಂಕೃತನಾದ, ಅನೇಕ ವಿಧವಾದ ದಿವ್ಯ ಶಸ್ತ್ರಗಳನ್ನು ಕೈಗಳಲ್ಲಿ ಎತ್ತಿ ಹಿಡಿದಿರುವ, ದಿವ್ಯವಾದ ಮಾಲೆ ಮತ್ತು ವಸ್ತ್ರಗಳನ್ನು ಧರಿಸಿರುವಂತಹ ಮತ್ತು ದಿವ್ಯವಾದ ಪರಿಮಳ ಗಂಧವನ್ನು ಲೇಪಿಸಿಕೊಂಡಿರುವ, ಎಲ್ಲ ಪ್ರಕಾರದ ಆಶ್ಚರ್ಯಗಳಿಂದೊಡಗೂಡಿದ,

ಸೀಮಾತೀತನಾದ ಮತ್ತು ಎಲ್ಲ ಕಡೆ ಮುಖಗಳುಳ್ಳ ವಿರಾಟ್ ಸ್ವರೂಪಿಯಾದ ಪರಮದೇವ ಪರಮೇಶ್ವರನನ್ನು ಅರ್ಜುನನು ನೋಡಿದನು. ॥ ೧೦-೧೧॥

**ದಿವಿ ಸೂರ್ಯಸಹಸ್ರಸ್ಯ ಭವೇದ್ಯುಗಪದುತ್ಥಿತಾ ।**
**ಯದಿ ಭಾಃ ಸದೃಶೀ ಸಾ ಸ್ಯಾದ್ಭಾಸಸ್ತಸ್ಯ ಮಹಾತ್ಮನಃ ॥ ೧೨॥**

ಆಕಾಶದಲ್ಲಿ ಸಾವಿರಾರು ಸೂರ್ಯರು ಒಮ್ಮೆಲೇ ಉದಯಿಸುವುದರಿಂದ ಉಂಟಾಗುವ ಯಾವ ಪ್ರಕಾಶವಿದೆಯೋ ಅದೂ ಕೂಡ ಆ ವಿಶ್ವರೂಪಿಯಾದ ಪರಮಾತ್ಮನ ಪ್ರಕಾಶಕ್ಕೆ ಎಂದಾದರೂ ಸಮವಾಗಬಹುದೇ ಅರ್ಥಾತ್ ಸಮವಾಗ ಲಾರದು. ॥ ೧೨॥

**ತತ್ರೈಕಸ್ಥಂ ಜಗತ್ಕೃತ್ಸ್ನಂ ಪ್ರವಿಭಕ್ತಮನೇಕಧಾ ।**
**ಅಪಶ್ಯದ್ದೇವದೇವಸ್ಯ ಶರೀರೇ ಪಾಂಡವಸ್ತದಾ ॥ ೧೩॥**

ಪಾಂಡುಪುತ್ರನಾದ ಅರ್ಜುನನು ಆ ಸಮಯದಲ್ಲಿ ಅನೇಕ ಪ್ರಕಾರದಿಂದ ವಿಭಕ್ತವಾದ ಅರ್ಥಾತ್ ಬಿಡಿ-ಬಿಡಿ ಯಾಗಿ ಸಂಪೂರ್ಣವಾದ ಜಗತ್ತನ್ನು ದೇವರ ದೇವನಾದ ಭಗವಾನ್ ಶ್ರೀಕೃಷ್ಣನ ಆ ಶರೀರದಲ್ಲಿ ಒಂದೆಡೆ ಸ್ಥಿತವಾಗಿರು ವುದನ್ನು ನೋಡಿದನು. ॥ ೧೩॥

**ತತಃ ಸ ವಿಸ್ಮಯಾವಿಷ್ಟೋ ಹೃಷ್ಟರೋಮಾ ಧನಂಜಯಃ ।**
**ಪ್ರಣಮ್ಯ ಶಿರಸಾ ದೇವಂ ಕೃತಾಂಜಲಿರಭಾಷತ ॥ ೧೪॥**

ಇದಾದನಂತರ ಆಶ್ಚರ್ಯಚಕಿತನಾದ ಮತ್ತು ಪುಲಕಿತ ಶರೀರಿಯಾದ ಆ ಅರ್ಜುನನು, ಪ್ರಕಾಶಮಯನೂ, ವಿಶ್ವರೂಪಿಯೂ ಆದ ಪರಮಾತ್ಮನಿಗೆ, ಶ್ರದ್ಧಾ ಮತ್ತು ಭಕ್ತಿಸಹಿತವಾಗಿ ಶಿರಬಾಗಿ ನಮಸ್ಕರಿಸಿ ಕೈಜೋಡಿಸಿಕೊಂಡು ಸ್ತುತಿಸತೊಡಗಿದನು. ॥ ೧೪॥

ಅರ್ಜುನ ಉವಾಚ

**ಪಶ್ಯಾಮಿ ದೇವಾಂಸ್ತವ ದೇವ ದೇಹೇ**
**ಸರ್ವಾಂಸ್ತಥಾ ಭೂತವಿಶೇಷಸಂಘಾನ್ ।**
**ಬ್ರಹ್ಮಾಣಮೀಶಂ ಕಮಲಾಸನಸ್ಥ-**
**ಮೃಷೀಂಶ್ಚ ಸರ್ವಾನುರಗಾಂಶ್ಚ ದಿವ್ಯಾನ್ ॥ ೧೫॥**

ಅರ್ಜುನನು ಹೇಳಿದನು – ಹೇ ದೇವಾ ! ನಾನು ನಿನ್ನ ಶರೀರದಲ್ಲಿ ಸಂಪೂರ್ಣ ದೇವತೆಗಳನ್ನು ಹಾಗೂ ಜೀವಿಗಳ ಸಮುದಾಯಗಳನ್ನು, ಕಮಲಾಸನದ ಮೇಲೆ ವಿರಾಜಮಾನನಾಗಿರುವ ಬ್ರಹ್ಮನನ್ನು, ಮಹಾದೇವನನ್ನು ಮತ್ತು ಸಮಸ್ತ ಋಷಿಗಳನ್ನು ಹಾಗೂ ದಿವ್ಯವಾದ ಸರ್ಪಗಳನ್ನು ನೋಡುತ್ತಿದ್ದೇನೆ. ॥ ೧೫॥

**ಅನೇಕಬಾಹೂದರವಕ್ತ್ರನೇತ್ರಂ**
**ಪಶ್ಯಾಮಿ ತ್ವಾಂ ಸರ್ವತೋಽನಂತರೂಪಮ್ ।**
**ನಾಂತಂ ನ ಮಧ್ಯಂ ನ ಪುನಸ್ತವಾದಿಂ**
**ಪಶ್ಯಾಮಿ ವಿಶ್ವೇಶ್ವರ ವಿಶ್ವರೂಪ ॥ ೧೬॥**

ಹೇ ಸಂಪೂರ್ಣ ವಿಶ್ವದ ಒಡೆಯನೇ! ನಿನ್ನನ್ನು ಅನೇಕ ಭುಜಗಳು, ಉದರಗಳು, ಮುಖ ಮತ್ತು ನೇತ್ರಗಳನ್ನುಳ್ಳವನಾಗಿಯೂ ಮತ್ತು ಎಲ್ಲಕಡೆಗಳಿಂದ ಅನಂತರೂಪವುಳ್ಳವನಾಗಿಯೂ ನೋಡುತ್ತೇನೆ. ಹೇ ವಿಶ್ವರೂಪಿಯೇ! ನಿನ್ನ ಅಂತ್ಯವನ್ನಾಗಲೀ, ಮಧ್ಯವನ್ನಾಗಲೀ ಮತ್ತು ಆದಿಯನ್ನಾಗಲೀ ನೋಡಲಾಗುವುದಿಲ್ಲ. ॥ ೧೬॥

**ಕಿರೀಟಿನಂ ಗದಿನಂ ಚಕ್ರಿಣಂ ಚ**
**ತೇಜೋರಾಶಿಂ ಸರ್ವತೋದೀಪ್ತಿಮಂತಮ್ ।**
**ಪಶ್ಯಾಮಿ ತ್ವಾಂ ದುರ್ನಿರೀಕ್ಷ್ಯಂ ಸಮಂತಾ-**
**ದ್ದೀಪ್ತಾನಲಾರ್ಕದ್ಯುತಿಮಪ್ರಮೇಯಮ್ ॥ ೧೭॥**

ಮುಕುಟದಿಂದ ಅಲಂಕೃತನಾಗಿ ಗದಾಧಾರಿಯಾಗಿ ಮತ್ತು ಚಕ್ರಪಾಣಿಯಾಗಿ ಹಾಗೆಯೇ ಎಲ್ಲ ಕಡೆಗಳಿಂದ ಪ್ರಕಾಶಮಾನವಾದ ತೇಜಃಪುಂಜದಂತೆಯೂ, ಪ್ರಜ್ವಲಿತ ಅಗ್ನಿ ಮತ್ತು ಸೂರ್ಯನ ಸದೃಶಜ್ಯೋತಿಯುಕ್ತನೂ, ಕಷ್ಟದಿಂದ ನೋಡಲ್ಪಡಲು ಯೋಗ್ಯನಾದ ಮತ್ತು ಎಲ್ಲ ಕಡೆಗಳಿಂದ ಅಪ್ರಮೇಯ ಸ್ವರೂಪಿಯಾದ ನಿನ್ನನ್ನು ನಾನು ನೋಡುತ್ತೇನೆ. ॥ ೧೭॥

**ತ್ವಮಕ್ಷರಂ ಪರಮಂ ವೇದಿತವ್ಯಂ**
**ತ್ವಮಸ್ಯ ವಿಶ್ವಸ್ಯ ಪರಂ ನಿಧಾನಮ್ ।**
**ತ್ವಮವ್ಯಯಃ ಶಾಶ್ವತಧರ್ಮಗೋಪ್ತಾ**
**ಸನಾತನಸ್ತ್ವಂ ಪುರುಷೋ ಮತೋ ಮೇ ॥ ೧೮॥**

ನೀನೇ ತಿಳಿಯಲು ಯೋಗ್ಯನಾದ ಪರಮ ಅಕ್ಷರನು ಅರ್ಥಾತ್ ಪರಬ್ರಹ್ಮ ಪರಮಾತ್ಮನಾಗಿದ್ದೀಯೆ. ನೀನೇ ಈ ಜಗತ್ತಿನ ಪರಮ ಆಶ್ರಯನಾಗಿದ್ದೀಯೆ. ನೀನೇ ಅನಾದಿಯಾದ ಧರ್ಮದ ರಕ್ಷಕನಾಗಿದ್ದಿಯೆ ಮತ್ತು ನೀನೇ ಅವಿನಾಶಿ ಮತ್ತು ಸನಾತನ ಪುರುಷನಾಗಿದ್ದೀಯೆ ಹೀಗೆಂದು ನನ್ನ ಅಭಿಪ್ರಾಯವಾಗಿದೆ. ॥ ೧೮॥

**ಅನಾದಿಮಧ್ಯಾಂತಮನಂತವೀರ್ಯ-**
**ಮನಂತಬಾಹುಂ ಶಶಿಸೂರ್ಯನೇತ್ರಮ್ ।**
**ಪಶ್ಯಾಮಿ ತ್ವಾಂ ದೀಪ್ತಹುತಾಶವಕ್ತ್ರಂ**
**ಸ್ವತೇಜಸಾ ವಿಶ್ವಮಿದಂ ತಪನ್ತಮ್ ॥ ೧೯॥**

ನಿನ್ನನ್ನು ಆದಿ, ಅಂತ್ಯ ಮತ್ತು ಮಧ್ಯದಿಂದ ರಹಿತನಾಗಿ, ಅನಂತ ಸಾಮರ್ಥ್ಯದಿಂದ ಕೂಡಿದವನಾಗಿ, ಅನಂತ ಬಾಹುಗಳನ್ನು ಹೊಂದಿದವನಾಗಿ, ಚಂದ್ರ - ಸೂರ್ಯರೂಪ ವಾದ ನೇತ್ರಗಳುಳ್ಳವನಾಗಿ, ಪ್ರಜ್ವಲಿತ ಅಗ್ನಿರೂಪೀ ಮುಖವುಳ್ಳವನಾಗಿ ಮತ್ತು ನಿನ್ನ ತೇಜಸ್ಸಿನಿಂದ ಈ ಜಗತ್ತನ್ನು ಬೆಳಗುವವನಾಗಿ ನಾನು ನೋಡುತ್ತೇನೆ. ॥ ೧೯॥

**ದ್ಯಾವಾಪೃಥಿವ್ಯೋರಿದಮಂತರಂ ಹಿ**
**ವ್ಯಾಪ್ತಂ ತ್ವಯೈಕೇನ ದಿಶಶ್ಚ ಸರ್ವಾಃ ।**
**ದೃಷ್ಟ್ವಾದ್ಭುತಂ ರೂಪಮುಗ್ರಂ ತವೇದಂ**
**ಲೋಕತ್ರಯಂ ಪ್ರವ್ಯಥಿತಂ ಮಹಾತ್ಮನ್ ॥ ೨೦॥**

ಹೇ ಮಹಾತ್ಮನೇ! ಈ ಸ್ವರ್ಗ ಮತ್ತು ಪೃಥ್ವಿಯ ನಡುವಿನ ಸಂಪೂರ್ಣ ಆಕಾಶ ಹಾಗೂ ಎಲ್ಲಾ ದಿಕ್ಕುಗಳೂ ನಿನ್ನೊಬ್ಬನಿಂದಲೇ ಪರಿಪೂರ್ಣವಾಗಿವೆ; ಹಾಗೂ ನಿನ್ನ ಈ ಅಲೌಕಿಕವಾದ ಮತ್ತು ಭಯಂಕರವಾದ ರೂಪವನ್ನು ನೋಡಿ ಮೂರೂ ಲೋಕಗಳು ಅತಿಯಾದ ಭಯದಿಂದ ನಡುಗುತ್ತಿವೆ.

ಅಮೀ ಹಿ ತ್ವಾಂ ಸುರಸಂಘಾ ವಿಶಂತಿ
ಕೇಚಿದ್ಭೀತಾಃ ಪ್ರಾಂಜಲಯೋ ಗೃಣಂತಿ ।
ಸ್ವಸ್ತೀತ್ಯುಕ್ತ್ವಾ ಮಹರ್ಷಿಸಿದ್ಧಸಂಘಾಃ
ಸ್ತುವಂತಿ ತ್ವಾಂ ಸ್ತುತಿಭಿಃ ಪುಷ್ಕಲಾಭಿಃ ॥ ೨೧॥

ಅದೇ ದೇವತೆಗಳ ಸಮೂಹಗಳು ನಿನ್ನಲ್ಲಿ ಪ್ರವೇಶ ಮಾಡುತ್ತವೆ ಮತ್ತು ಕೆಲವರು ಭಯಭೀತರಾಗಿ ಕೈಜೋಡಿಸಿ ನಿನ್ನ ನಾಮ ಮತ್ತು ಗುಣಗಳನ್ನು ಕೊಂಡಾಡುತ್ತಾರೆ ಹಾಗೂ ಮಹರ್ಷಿಗಳು ಮತ್ತು ಸಿದ್ಧರುಗಳ ಸಮುದಾಯವು ಸ್ವಸ್ತಿವಾಚನಗೈದು ಉತ್ತಮೋತ್ತಮ ಸ್ತೋತ್ರಗಳಿಂದ ನಿನ್ನನ್ನು ಸ್ತುತಿಮಾಡುತ್ತಾರೆ. ॥ ೨೧॥

ರುದ್ರಾದಿತ್ಯಾ ವಸವೋ ಯೇ ಚ ಸಾಧ್ಯಾ
ವಿಶ್ವೇಽಶ್ವಿನೌ ಮರುತಶ್ಚೋಷ್ಮಪಾಶ್ಚ ।
ಗಂಧರ್ವಯಕ್ಷಾಸುರಸಿದ್ಧಸಂಘಾ
ವೀಕ್ಷಂತೇ ತ್ವಾಂ ವಿಸ್ಮಿತಾಶ್ಚೈವ ಸರ್ವೇ ॥ ೨೨॥

ಯಾವ ಏಕಾದಶರುದ್ರರು ಮತ್ತು ದ್ವಾದಶಾದಿತ್ಯರು ಹಾಗೂ ಅಷ್ಟವಸುಗಳು, ಸಾಧ್ಯರು, ವಿಶ್ವೇದೇವತೆಗಳು, ಅಶ್ವಿನೀಕುಮಾರರು ಹಾಗೂ ಮರುದ್ಗಣರು ಮತ್ತು ಪಿತೃಗಳ ಸಮುದಾಯವು ಹಾಗೆಯೇ ಗಂಧರ್ವರು, ಯಕ್ಷರು, ರಾಕ್ಷಸರು ಮತ್ತು ಸಿದ್ಧರುಗಳ ಸಮುದಾಯವಿದೆಯೋ ಅವರೆಲ್ಲರೂ ವಿಸ್ಮಿತರಾಗಿ ನಿನ್ನನ್ನು ನೋಡುತ್ತಿದ್ದಾರೆ. ॥ ೨೨॥

ರೂಪಂ ಮಹತ್ತೇ ಬಹುವಕ್ತ್ರನೇತ್ರಂ
ಮಹಾಬಾಹೋ ಬಹುಬಾಹೂರುಪಾದಮ್ ।
ಬಹೂದರಂ ಬಹುದಂಷ್ಟ್ರಾಕರಾಲಂ
ದೃಷ್ಟ್ವಾ ಲೋಕಾಃ ಪ್ರವ್ಯಥಿತಾಸ್ತಥಾಹಮ್ ॥ ೨೩॥

ಹೇ ಮಹಾಬಾಹುವೇ! ನಿನ್ನ ಅನೇಕ ಮುಖಗಳು ಮತ್ತು ಬಹುನೇತ್ರಗಳುಳ್ಳ, ಅನೇಕ ಬಾಹುಗಳೂ, ತೊಡೆಗಳು ಮತ್ತು ಕಾಲುಗಳುಳ್ಳ, ಅನೇಕ ಉದರಗಳುಳ್ಳ ಮತ್ತು ಹಲವು ಕೋರೆದಾಡೆಗಳ ಕಾರಣದಿಂದ ಅತ್ಯಂತ ವಿಕರಾಳವಾದ, ಮಹತ್ತಾದ ರೂಪವನ್ನು ನೋಡಿ ಎಲ್ಲ ಜನರು ವ್ಯಾಕುಲರಾಗುತ್ತಿದ್ದಾರೆ ಹಾಗೂ ನಾನೂ ಕೂಡ ವ್ಯಾಕುಲನಾಗುತ್ತಿದ್ದೇನೆ.

ನಭಃಸ್ಪೃಶಂ ದೀಪ್ತಮನೇಕವರ್ಣಂ
ವ್ಯಾತ್ತಾನನಂ ದೀಪ್ತವಿಶಾಲನೇತ್ರಮ್ ।
ದೃಷ್ಟ್ವಾ ಹಿ ತ್ವಾಂ ಪ್ರವ್ಯಥಿತಾಂತರಾತ್ಮಾ
ಧೃತಿಂ ನ ವಿಂದಾಮಿ ಶಮಂ ಚ ವಿಷ್ಣೋ ॥ ೨೪॥

ಏಕೆಂದರೆ ಹೇ ವಿಷ್ಣುವೇ! ಆಕಾಶವನ್ನು ಸ್ಪರ್ಶಿಸುವ, ದೇದೀಪ್ಯಮಾನವಾದ ಅನೇಕ ಬಣ್ಣಗಳಿಂದ ಕೂಡಿದ ಹಾಗೂ ತೆರೆದಿರುವ ಮುಖ ಮತ್ತು ಪ್ರಕಾಶಮಾನ ವಿಶಾಲ ವಾದ ನೇತ್ರಗಳಿಂದ ಯುಕ್ತವಾದ ನಿನ್ನನ್ನು ನೋಡಿ, ಭಯಭೀತ ವಾದ ಅಂತಃಕರಣವುಳ್ಳವನಾದ ನಾನು ಧೈರ್ಯ ಮತ್ತು ಶಾಂತಿಯನ್ನು ಪಡೆಯುವುದಿಲ್ಲ. ॥ ೨೪॥

**ದಂಷ್ಟ್ರಾಕರಾಲಾನಿ ಚ ತೇ ಮುಖಾನಿ ದೃಷ್ಟ್ವೈವ ಕಾಲಾನಲಸನ್ನಿಭಾನಿ**
**ದಿಶೋ ನ ಜಾನೇ ನ ಲಭೇ ಚ ಶರ್ಮ ಪ್ರಸೀದ ದೇವೇಶ ಜಗನ್ನಿವಾಸ**

ಕೋರೆದಾಡೆಗಳ ಕಾರಣದಿಂದ ವಿಕರಾಳವಾದ, ಪ್ರಳಯ ಕಾಲದ ಅಗ್ನಿಗೆ ಸಮಾನವಾಗಿ ಪ್ರಜ್ವಲಿತವಾದ ನಿನ್ನ ಮುಖಗಳನ್ನು ನೋಡಿ ನಾನು ದಿಕ್ಕುಗಾಣದವನಾಗಿದ್ದೇನೆ ಮತ್ತು ನೆಮ್ಮದಿಯನ್ನೂ ಪಡೆಯದವನಾಗಿದ್ದೇನೆ. ಆದ್ದರಿಂದ ಹೇ ದೇವೇಶನೇ! ಹೇ ಜಗನ್ನಿವಾಸನೇ! ನೀನು ಪ್ರಸನ್ನನಾಗು. ॥ ೨೫॥

**ಅಮೀ ಚ ತ್ವಾಂ ಧೃತರಾಷ್ಟ್ರಸ್ಯ ಪುತ್ರಾಃ**
**ಸರ್ವೇ ಸಹೈವಾವನಿಪಾಲಸಂಘೈಃ ।**
**ಭೀಷ್ಮೋ ದ್ರೋಣಃ ಸೂತಪುತ್ರಸ್ತಥಾಸೌ**
**ಸಹಾಸ್ಮದೀಯೈರಪಿ ಯೋಧಮುಖ್ಯೈಃ ॥ ೨೬॥**

**ವಕ್ತ್ರಾಣಿ ತೇ ತ್ವರಮಾಣಾ ವಿಶಂತಿ**
**ದಂಷ್ಟ್ರಾಕರಾಲಾನಿ ಭಯಾನಕಾನಿ ।**
**ಕೇಚಿದ್ವಿಲಗ್ನಾ ದಶನಾಂತರೇಷು**
**ಸಂದೃಶ್ಯಂತೇ ಚೂರ್ಣಿತೈರುತ್ತಮಾಂಗೈಃ ॥ ೨೭॥**

ಆ ಎಲ್ಲಾ ಧೃತರಾಷ್ಟ್ರನ ಪುತ್ರರೂ, ರಾಜರುಗಳ ಸಮುದಾಯ ಸಹಿತರಾಗಿ ನಿನ್ನೊಳಗೆ ಪ್ರವೇಶಿಸುತ್ತಿದ್ದಾರೆ ಮತ್ತು ಭೀಷ್ಮ ಪಿತಾಮಹರು, ದ್ರೋಣಾಚಾರ್ಯರು ಹಾಗೂ ಆ ಕರ್ಣ ಮತ್ತು ನಮ್ಮ ಪಕ್ಷದವರೂ ಸಹ ಪ್ರಧಾನ ಯೋಧರುಗಳ ಸಹಿತ, ಎಲ್ಲರೂ ನಿನ್ನ ಕೋರೆದಾಡೆಗಳ ಕಾರಣದಿಂದ ವಿಕರಾಳವಾದ ಭಯಾನಕವಾದ ಮುಖಗಳಲ್ಲಿ ಅತಿವೇಗದಿಂದ ಧಾವಿಸುತ್ತಾ ಪ್ರವೇಶ ಮಾಡುತ್ತಿದ್ದಾರೆ ಮತ್ತು ಕೆಲವರಾದರೋ ಪುಡಿಪುಡಿಯಾದ ತಲೆಗಳ ಸಹಿತ ನಿನ್ನ ಹಲ್ಲುಗಳ ನಡುವೆ ಸಿಕ್ಕಿಕೊಂಡವರಾಗಿ ಕಾಣುತ್ತಿದ್ದಾರೆ. ॥ ೨೬ - ೨೭॥

**ಯಥಾ ನದೀನಾಂ ಬಹವೋಽಂಬುವೇಗಾಃ**
**ಸಮುದ್ರಮೇವಾಭಿಮುಖಾ ದ್ರವಂತಿ ।**
**ತಥಾ ತವಾಮೀ ನರಲೋಕವೀರಾ**
**ವಿಶಂತಿ ವಕ್ತ್ರಾಣ್ಯಭಿವಿಜ್ವಲಂತಿ ॥ ೨೮॥**

ಹೇಗೆ ನದಿಗಳ ಅನೇಕವಾದ ಜಲ ಪ್ರವಾಹಗಳು ಸ್ವಾಭಾವಿಕವಾಗಿಯೇ ಸಮುದ್ರಕ್ಕೆ ಸಮ್ಮುಖವಾಗಿ ಧಾವಿಸುತ್ತವೆಯೋ ಅರ್ಥಾತ್ ಸಮುದ್ರದಲ್ಲಿ ಪ್ರವೇಶಿಸುತ್ತವೆಯೋ ಹಾಗೆಯೇ ಈ ನರಲೋಕದ ಶ್ರೇಷ್ಠ ವೀರರೂ ಸಹ ಪ್ರಜ್ವಲಿತವಾದ ನಿನ್ನ ಮುಖಗಳಲ್ಲಿ ಪ್ರವೇಶಮಾಡುತ್ತಿದ್ದಾರೆ. ॥ ೨೮॥

ಯಥಾ ಪ್ರದೀಪ್ತಂ ಜ್ವಲನಂ ಪತಂಗಾ
ವಿಶಂತಿ ನಾಶಾಯ ಸಮೃದ್ಧವೇಗಾಃ ।
ತಥೈವ ನಾಶಾಯ ವಿಶಂತಿ ಲೋಕಾ-
ಸ್ತವಾಪಿ ವಕ್ತ್ರಾಣಿ ಸಮೃದ್ಧವೇಗಾಃ ॥ ೨೯॥

ಹೇಗೆ ಪತಂಗಗಳು ಮೋಹವಶವಾಗಿ ನಾಶವಾಗುವುದಕ್ಕೆ ಪ್ರಜ್ವಲಿತವಾದ ಅಗ್ನಿಯಲ್ಲಿ ಅತಿವೇಗದಿಂದ ಧಾವಿಸುತ್ತಾ ಪ್ರವೇಶಿಸುತ್ತವೆಯೋ ಹಾಗೆಯೇ ಈ ಎಲ್ಲಾ ಜನರೂ ಕೂಡ ತಮ್ಮ ನಾಶಕ್ಕಾಗಿ ನಿನ್ನ ಮುಖಗಳಲ್ಲಿ ಅತಿವೇಗದಿಂದ ಧಾವಿಸುತ್ತಾ ಪ್ರವೇಶಮಾಡುತ್ತಿದ್ದಾರೆ. ॥ ೨೯॥

ಲೇಲಿಹ್ಯಸೇ ಗ್ರಸಮಾನಃ ಸಮಂತಾ-
ಲ್ಲೋಕಾನ್ಸಮಗ್ರಾನ್ವದನೈರ್ಜ್ವಲದ್ಭಿಃ ।
ತೇಜೋಭಿರಾಪೂರ್ಯ ಜಗತ್ಸಮಗ್ರಂ
ಭಾಸಸ್ತವೋಗ್ರಾಃ ಪ್ರತಪಂತಿ ವಿಷ್ಣೋ ॥ ೩೦॥

ನೀನು ಆ ಸಮಸ್ತ ಲೋಕಗಳನ್ನು ಪ್ರಜ್ವಲಿತವಾದ ಮುಖಗಳ ಮೂಲಕ ಮಹಾಕಾಲನಂತೆ ನುಂಗಿಹಾಕುತ್ತಾ ಎಲ್ಲಾ ಕಡೆಯಿಂದ ಪದೇ ಪದೇ ಚಪ್ಪರಿಸುತ್ತಿರುವೆ. ಹೇ ವಿಷ್ಣುವೇ ! ನಿನ್ನ ಉಗ್ರವಾದ ಪ್ರಕಾಶವು ಸಂಪೂರ್ಣ ಜಗತ್ತನ್ನು ತೇಜಸ್ಸಿನ ಮೂಲಕ ಪರಿಪೂರ್ಣವಾಗಿ ಸಂತಪ್ತಗೊಳಿಸುತ್ತಿದ್ದೀಯೆ.

**ಆಖ್ಯಾಹಿ ಮೇ ಕೋ ಭವಾನುಗ್ರರೂಪೋ**
**ನಮೋಽಸ್ತು ತೇ ದೇವವರ ಪ್ರಸೀದ ।**
**ವಿಜ್ಞಾತುಮಿಚ್ಛಾಮಿ ಭವಂತಮಾದ್ಯಂ**
**ನ ಹಿ ಪ್ರಜಾನಾಮಿ ತವ ಪ್ರವೃತ್ತಿಮ್ ॥ ೩೧॥**

ಉಗ್ರರೂಪಿಯಾದ ನೀನು ಯಾರು? ಎಂಬುದನ್ನು ಕೃಪೆಮಾಡಿ ನನಗೆ ತಿಳಿಸು, ಹೇ ದೇವ ಶ್ರೇಷ್ಠನೆ! ನಿನಗೆ ಪ್ರಣಾಮಗಳು. ನೀನು ಪ್ರಸನ್ನನಾಗು! ಆದಿಪುರುಷನಾದ ನಿನ್ನನ್ನು ನಾನು ವಿಶೇಷರೂಪದಿಂದ ತಿಳಿಯಲು ಬಯಸುತ್ತೇನೆ. ಏಕೆಂದರೆ ನಾನು ನಿನ್ನ ಪ್ರವೃತ್ತಿಯನ್ನು ತಿಳಿಯಲಾರೆ. ॥ ೩೧॥

**ಶ್ರೀಭಗವಾನುವಾಚ**

**ಕಾಲೋಽಸ್ಮಿ ಲೋಕಕ್ಷಯಕೃತ್ಪ್ರವೃದ್ಧೋ**
**ಲೋಕಾನ್ ಸಮಾಹರ್ತುಮಿಹ ಪ್ರವೃತ್ತಃ ।**
**ಋತೇಽಪಿ ತ್ವಾಂ ನ ಭವಿಷ್ಯಂತಿ ಸರ್ವೇ**
**ಯೇಽವಸ್ಥಿತಾಃ ಪ್ರತ್ಯನೀಕೇಷು ಯೋಧಾಃ ॥ ೩೨॥**

ಶ್ರೀಭಗವಂತನು ಹೇಳಿದನು – ನಾನು ಲೋಕಗಳನ್ನು ನಾಶಮಾಡಲು ಬೆಳೆದಿರುವಂತಹ ಮಹಾಕಾಲನಾಗಿದ್ದೇನೆ. ಈ ಸಮಯದಲ್ಲಿ ಈ ಲೋಕಗಳನ್ನು ನಾಶಗೊಳಿಸುವುದಕ್ಕಾಗಿ ಪ್ರವೃತ್ತನಾಗಿದ್ದೇನೆ. ಅದಕ್ಕಾಗಿ ಯಾವ ಪ್ರತಿಪಕ್ಷದ ಸೇನೆಯಲ್ಲಿ ಸ್ಥಿತರಾದ ಯೋಧರುಗಳಿದ್ದಾರೋ ಅವರೆಲ್ಲರೂ

ನೀನು ಯುದ್ಧಮಾಡದಿದ್ದರೂ ಉಳಿಯಲಾರರು ಅರ್ಥಾತ್ ಇವರೆಲ್ಲರೂ ನಾಶವಾಗುವರು. ॥ ೩೨॥

**ತಸ್ಮಾತ್ತ್ವಮುತ್ತಿಷ್ಠ ಯಶೋ ಲಭಸ್ವ**
**ಜಿತ್ವಾ ಶತ್ರೂನ್ ಭುಂಕ್ಷ್ವ ರಾಜ್ಯಂ ಸಮೃದ್ಧಮ್ ।**
**ಮಯೈವೈತೇ ನಿಹತಾಃ ಪೂರ್ವಮೇವ**
**ನಿಮಿತ್ತಮಾತ್ರಂ ಭವ ಸವ್ಯಸಾಚಿನ್ ॥ ೩೩॥**

ಆದ್ದರಿಂದ ನೀನು ಎದ್ದು ನಿಲ್ಲು! ಯಶಸ್ಸನ್ನು ಗಳಿಸು ಮತ್ತು ಶತ್ರುಗಳನ್ನು ಜಯಿಸಿ, ಧನ-ಧಾನ್ಯ ಸಂಪನ್ನವಾದ ರಾಜ್ಯವನ್ನು ಅನುಭವಿಸು. ಈ ಎಲ್ಲ ಶೂರವೀರರೂ ಮೊದಲೇ ನನ್ನ ಮೂಲಕ ಕೊಲ್ಲಲ್ಪಟ್ಟಿದ್ದಾರೆ. ಹೇ ಸವ್ಯಸಾಚಿಯೇ! ನೀನಾದರೋ ಕೇವಲ ನಿಮಿತ್ತ ಮಾತ್ರನಾಗು. ॥ ೩೩॥

**ದ್ರೋಣಂ ಚ ಭೀಷ್ಮಂ ಚ ಜಯದ್ರಥಂ ಚ**
**ಕರ್ಣಂ ತಥಾನ್ಯಾನಪಿ ಯೋಧವೀರಾನ್ ।**
**ಮಯಾ ಹತಾಂಸ್ತ್ವಂ ಜಹಿ ಮಾ ವ್ಯಥಿಷ್ಠಾ**
**ಯುಧ್ಯಸ್ವ ಜೇತಾಸಿ ರಣೇ ಸಪತ್ನಾನ್ ॥ ೩೪॥**

ದ್ರೋಣಾಚಾರ್ಯರು, ಭೀಷ್ಮಾಚಾರ್ಯರು ಹಾಗೂ ಜಯದ್ರಥ ಮತ್ತು ಕರ್ಣ, ಹಾಗೆಯೇ ಇನ್ನೂ ಅನೇಕರು ನನ್ನ ಮೂಲಕ ಕೊಲ್ಲಲ್ಪಟ್ಟ ಶೂರವೀರ ಯೋಧರನ್ನು ನೀನು ಕೊಲ್ಲು. ನೀನು ಚಿಂತಿಸಬೇಡ, ನಿಸ್ಸಂದೇಹವಾಗಿ ನೀನು ಯುದ್ಧದಲ್ಲಿ ವೈರಿಗಳನ್ನು ಗೆಲ್ಲುವೆ. ಅದಕ್ಕಾಗಿ ಯುದ್ಧಮಾಡು. ॥ ೩೪॥

*ಸಂಜಯ ಉವಾಚ*

**ಏತಚ್ಛ್ರುತ್ವಾ ವಚನಂ ಕೇಶವಸ್ಯ**
**ಕೃತಾಂಜಲಿರ್ವೇಪಮಾನಃ ಕಿರೀಟೀ**
**ನಮಸ್ಕೃತ್ವಾ ಭೂಯ ಏವಾಹ ಕೃಷ್ಣಂ**
**ಸಗದ್ಗದಂ ಭೀತಭೀತಃ ಪ್ರಣಮ್ಯ ॥**

ಸಂಜಯನು ಹೇಳಿದನು – ಭಗವಾನ್ ಕೇಶವನ ಈ ವಚನವನ್ನು ಕೇಳಿ ಕಿರೀಟಿ ಅರ್ಜುನನು ಕೈಜೋಡಿಸಿದವನಾಗಿ, ನಡುಗುತ್ತಾ, ನಮಸ್ಕರಿಸಿ ಇನ್ನೊಮ್ಮೆ ಅತ್ಯಂತ ಭಯಭೀತನಾಗಿ ನಮಸ್ಕಾರಮಾಡಿ ಭಗವಾನ್ ಶ್ರೀಕೃಷ್ಣನಿಗೆ ಗದ್ಗದ ವಾಣಿಯಿಂದ ಹೇಳಿದನು. ಅರ್ಥಾತ್ ಸ್ತುತಿಸತೊಡಗಿದನು.

*ಅರ್ಜುನ ಉವಾಚ*

**ಸ್ಥಾನೇ ಹೃಷೀಕೇಶ ತವ ಪ್ರಕೀರ್ತ್ಯಾ**
**ಜಗತ್ಪ್ರಹೃಷ್ಯತ್ಯನುರಜ್ಯತೇ ಚ ।**
**ರಕ್ಷಾಂಸಿ ಭೀತಾನಿ ದಿಶೋ ದ್ರವಂತಿ**
**ಸರ್ವೇ ನಮಸ್ಯಂತಿ ಚ ಸಿದ್ಧಸಂಘಾಃ**

ಅರ್ಜುನನು ಹೇಳಿದನು – ಹೇ ಅಂತರ್ಯಾಮಿಯೆ ! ನಿನ್ನ ನಾಮ, ಗುಣ ಮತ್ತು ಪ್ರಭಾವದ ಕೀರ್ತನೆಯಿಂದ ಜಗತ್ತು ಅತಿಹರ್ಷಪಡುತ್ತಿದೆ ಮತ್ತು ಅನುರಾಗವನ್ನು ಪಡೆಯುತ್ತಿದೆ. ಅರ್ಥಾತ್ ಪ್ರೇಮವಿಹ್ವಲವಾಗುತ್ತಿದೆ. ಭಯಭೀತರಾದ ರಾಕ್ಷಸಜನರು ದಶದಿಕ್ಕುಗಳಲ್ಲಿ ಧಾವಿಸುತ್ತಿದ್ದಾರೆ

ಮತ್ತು ಎಲ್ಲ ಸಿದ್ಧಗಣಗಳ ಸಮುದಾಯವು ನಮಸ್ಕರಿಸುತ್ತಿರುವುದು ಯೋಗ್ಯವೇ ಆಗಿದೆ. ॥ ೩೬॥

ಕಸ್ಮಾಚ್ಚ ತೇ ನ ನಮೇರನ್ಮಹಾತ್ಮನ್
ಗರೀಯಸೇ ಬ್ರಹ್ಮಣೋऽಪ್ಯಾದಿಕರ್ತ್ರೇ ।
ಅನಂತ ದೇವೇಶ ಜಗನ್ನಿವಾಸ
ತ್ವಮಕ್ಷರಂ ಸದಸತ್ತತ್ಪರಂ ಯತ್ ॥ ೩೭॥

ಹೇ ಮಹಾತ್ಮನೇ! ಚತುರ್ಮುಖ ಬ್ರಹ್ಮನಿಗೂ ಸಹ ಆದಿಕರ್ತನಾದ ಮತ್ತು ಎಲ್ಲರಿಗೂ ಹಿರಿಯವನಾದ ನಿನಗಾಗಿ ಇವರು ಹೇಗೆ ನಮಸ್ಕಾರಮಾಡದಿರುವರು! ಏಕೆಂದರೆ ಹೇ ಅನಂತನೇ! ಹೇ ದೇವೇಶನೇ! ಹೇ ಜಗನ್ನಿವಾಸನೇ! ಯಾರು ಸತ್, ಅಸತ್ ಮತ್ತು ಅದಕ್ಕಿಂತ ಶ್ರೇಷ್ಠವಾದ ಅಕ್ಷರ ಅರ್ಥಾತ್ ಸಚ್ಚಿದಾನಂದಘನ ಬ್ರಹ್ಮನಿದ್ದಾನೋ ಅವನು ನೀನೇ ಆಗಿದ್ದೀಯೆ. ॥ ೩೭॥

ತ್ವಮಾದಿದೇವಃ ಪುರುಷಃ ಪುರಾಣ-
ಸ್ತ್ವಮಸ್ಯ ವಿಶ್ವಸ್ಯ ಪರಂ ನಿಧಾನಮ್ ।
ವೇತ್ತಾಸಿ ವೇದ್ಯಂ ಚ ಪರಂ ಚ ಧಾಮ
ತ್ವಯಾ ತತಂ ವಿಶ್ವಮನಂತರೂಪ ॥ ೩೮॥

ನೀನು ಆದಿದೇವನೂ ಮತ್ತು ಸನಾತನ ಪುರುಷನೂ ಆಗಿರುವೆ, ನೀನು ಈ ಜಗತ್ತಿನ ಪರಮ ಆಶ್ರಯ ಮತ್ತು

ಅರಿಯುವವನೂ, ತಿಳಿಯಲು ಯೋಗ್ಯನೂ ಮತ್ತು ಪರಮ ಧಾಮವಾಗಿರುವೆ. ಹೇ ಅನಂತರೂಪನೆ ! ನಿನ್ನಿಂದ ಈ ಎಲ್ಲಾ ಜಗತ್ತು ವ್ಯಾಪ್ತ ಅರ್ಥಾತ್ ಪರಿಪೂರ್ಣವಾಗಿದೆ. ॥ ೩೮॥

**ವಾಯುರ್ಯಮೋಽಗ್ನಿರ್ವರುಣಃ ಶಶಾಂಕಃ**
**ಪ್ರಜಾಪತಿಸ್ತ್ವಂ ಪ್ರಪಿತಾಮಹಶ್ಚ ।**
**ನಮೋ ನಮಸ್ತೇಽಸ್ತು ಸಹಸ್ರಕೃತ್ವಃ**
**ಪುನಶ್ಚ ಭೂಯೋಽಪಿ ನಮೋ ನಮಸ್ತೇ ॥ ೩೯॥**

ನೀನೇ ವಾಯು, ಅಗ್ನಿ, ಯಮ, ವರುಣ ಮತ್ತು ಚಂದ್ರ, ಪ್ರಜೆಗಳ ಒಡೆಯನಾದ ಬ್ರಹ್ಮ ಮತ್ತು ಬ್ರಹ್ಮನಿಗೂ ತಂದೆಯಾಗಿದ್ದೀಯೆ. ನಿನಗೆ ಸಾವಿರಬಾರಿ ನಮಸ್ಕಾರ ! ನಮಸ್ಕಾರಗಳು !! ನಿನಗೆ ಮತ್ತೂ ಪದೇ ಪದೇ ನಮಸ್ಕಾರ ! ನಮಸ್ಕಾರಗಳು !! ॥ ೩೯॥

**ನಮಃ ಪುರಸ್ತಾದಥ ಪೃಷ್ಠತಸ್ತೇ**
**ನಮೋಽಸ್ತು ತೇ ಸರ್ವತ ಏವ ಸರ್ವ ।**
**ಅನಂತವೀರ್ಯಾಮಿತವಿಕ್ರಮಸ್ತ್ವಂ**
**ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ ॥ ೪೦॥**

ಹೇ ಅನಂತ ಸಾಮರ್ಥ್ಯವುಳ್ಳವನೇ! ನಿನಗೆ ಮುಂದುಗಡೆ ಯಿಂದ ಮತ್ತು ಹಿಂದುಗಡೆಯಿಂದಲೂ ನಮಸ್ಕಾರಗಳು ಹೇ ಸರ್ವಾತ್ಮನೇ! ನಿನಗೆ ಎಲ್ಲಕಡೆಗಳಿಂದಲೂ ನಮಸ್ಕಾರ

ವಿರಲಿ. ಏಕೆಂದರೆ ಅನಂತ ಪರಾಕ್ರಮ ಶಾಲಿಯಾದ ನೀನು ಎಲ್ಲ ಜಗತ್ತನ್ನು ವ್ಯಾಪಿಸಿಕೊಂಡಿರುವೆ. ಆದ್ದರಿಂದ ನೀನೇ ಸರ್ವರೂಪನಾಗಿರುವೆ. ॥ ೪೦॥

ಸಖೇತಿ ಮತ್ವಾ ಪ್ರಸಭಂ ಯದುಕ್ತಂ
ಹೇ ಕೃಷ್ಣ ಹೇ ಯಾದವ ಹೇ ಸಖೇತಿ ।
ಅಜಾನತಾ ಮಹಿಮಾನಂ ತವೇದಂ
ಮಯಾ ಪ್ರಮಾದಾತ್ಪ್ರಣಯೇನ ವಾಪಿ ॥ ೪೧॥
ಯಚ್ಚಾವಹಾಸಾರ್ಥಮಸತ್ಕೃತೋಽಸಿ
ವಿಹಾರಶಯ್ಯಾಸನಭೋಜನೇಷು ।
ಏಕೋಽಥವಾಪ್ಯಚ್ಯುತ ತತ್ಸಮಕ್ಷಂ
ತತ್ಕ್ಷಾಮಯೇ ತ್ವಾಮಹಮಪ್ರಮೇಯಮ್ ॥ ೪೨॥

ಹೇ ಪರಮೇಶ್ವರನೆ ! ನಿನ್ನ ಈ ಪ್ರಭಾವವನ್ನು ತಿಳಿಯದೆ ನೀನು ನನ್ನ ಸಖನಾಗಿದ್ದೀಯೆ ಎಂಬುದಾಗಿ ತಿಳಿದು ಪ್ರೇಮದಿಂದಲೂ ಅಥವಾ ಪ್ರಮಾದದಿಂದಲೂ ಕೂಡ ನಾನು 'ಹೇ ಕೃಷ್ಣ'!, 'ಹೇ ಯಾದವ'!, 'ಹೇ ಸಖಾ' ಈ ಪ್ರಕಾರವಾಗಿ ಯಾವುದನ್ನೂ ತಿಳಿಯದೆ - ಯೋಚಿಸದೆ ಹಠಾತ್ತನೆ ಹೇಳಿರುವೆನೋ ಮತ್ತು ಹೇ ಅಚ್ಯುತಾ! ಯಾವ ನೀನು ನನ್ನ ಮೂಲಕ ವಿನೋದಕ್ಕಾಗಿ ವಿಹಾರ, ಶಯ್ಯೆ, ಆಸನ ಮತ್ತು ಭೋಜನಾದಿಗಳಲ್ಲಿ ಒಬ್ಬನಿದ್ದಾಗ ಅಥವಾ ಆ

ಮಿತ್ರರ ಸಮ್ಮುಖದಲ್ಲಿಯೂ ಕೂಡ ಅವಮಾನಿಸಲ್ಪಟ್ಟಿರುವೆಯೋ, ಆ ಎಲ್ಲ ಅಪರಾಧಗಳಿಗಾಗಿ ಅಪ್ರಮೇಯ ಸ್ವರೂಪೀ ಅರ್ಥಾತ್ ಅಚಿಂತ್ಯ ಪ್ರಭಾವಶಾಲಿಯಾದ ನಿನ್ನಲ್ಲಿ ನಾನು ಕ್ಷಮೆಯನ್ನು ಬೇಡುತ್ತೇನೆ. ॥ ೪೧ - ೪೨॥

**ಪಿತಾಸಿ ಲೋಕಸ್ಯ ಚರಾಚರಸ್ಯ**
**ತ್ವಮಸ್ಯ ಪೂಜ್ಯಶ್ಚ ಗುರುರ್ಗರೀಯಾನ್ ।**
**ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯೋ**
**ಲೋಕತ್ರಯೇಽಪ್ಯಪ್ರತಿಮಪ್ರಭಾವ ॥ ೪೩॥**

ನೀನು ಚರಾಚರ ಈ ಜಗತ್ತಿನ ತಂದೆಯಾಗಿರುವೆ ಮತ್ತು ಎಲ್ಲರಿಗೂ ಹಿರಿಯವನಾದ ಗುರು ಮತ್ತು ಅತಿ ಪೂಜನೀಯನಾಗಿರುವೆ. ಹೇ ಅನುಪಮ ಪ್ರಭಾವವುಳ್ಳವನೇ! ಮೂರೂ ಲೋಕಗಳಲ್ಲಿ ನಿನಗೆ ಸಮಾನರು ಕೂಡ ಬೇರೆ ಯಾರೂ ಇಲ್ಲ. ಇನ್ನು ಹೆಚ್ಚಿನವರಾದರೋ ಹೇಗಿರಲು ಸಾಧ್ಯ?

**ತಸ್ಮಾತ್ಪ್ರಣಮ್ಯ ಪ್ರಣಿಧಾಯ ಕಾಯಂ**
**ಪ್ರಸಾದಯೇ ತ್ವಾಮಹಮೀಶಮೀಡ್ಯಮ್ ।**
**ಪಿತೇವ ಪುತ್ರಸ್ಯ ಸಖೇವ ಸಖ್ಯುಃ**
**ಪ್ರಿಯಃ ಪ್ರಿಯಾಯಾರ್ಹಸಿ ದೇವ ಸೋಢುಮ್ ॥ ೪೪॥**

ಆದುದರಿಂದ ಪ್ರಭುವೇ! ನಾನು ಶರೀರವನ್ನು ನಿನ್ನ ಚರಣಗಳಲ್ಲಿ ಪೂರ್ಣವಾಗಿ ನಿವೇದಿಸಿ, ನಮಸ್ಕಾರ ಮಾಡಿ

ಸ್ತುತಿಸಲು ಯೋಗ್ಯನಾಗಿರುವ ಒಡೆಯನಾದ ನಿನ್ನನ್ನು ಪ್ರಸನ್ನನಾಗೆಂದು ಪ್ರಾರ್ಥಿಸುತ್ತೇನೆ. ಹೇ ದೇವಾ! ತಂದೆಯು ಹೇಗೆ ಮಗನ, ಸಖನು ಹೇಗೆ ಸ್ನೇಹಿತನ ಮತ್ತು ಪತಿಯು ಹೇಗೆ ಪ್ರಿಯತಮೆಯಾದ ಪತ್ನಿಯ ಅಪರಾಧಗಳನ್ನು ಸಹಿಸುತ್ತಾರೋ - ಹಾಗೆಯೇ ನೀನೂ ಸಹ ನನ್ನ ಅಪರಾಧ ಗಳನ್ನು ಸಹಿಸಲು ಯೋಗ್ಯನಾಗಿರುವೆ. ॥ ೪೪॥

ಅದೃಷ್ಟಪೂರ್ವಂ ಹೃಷಿತೋಽಸ್ಮಿ ದೃಷ್ಟ್ವಾ
ಭಯೇನ ಚ ಪ್ರವ್ಯಥಿತಂ ಮನೋ ಮೇ ।
ತದೇವ ಮೇ ದರ್ಶಯ ದೇವರೂಪಂ
ಪ್ರಸೀದ ದೇವೇಶ ಜಗನ್ನಿವಾಸ ॥ ೪೫॥

ನಾನು ಮೊದಲು ಎಂದೂ ನೋಡದಿದ್ದ ನಿನ್ನ ಈ ಆಶ್ಚರ್ಯಮಯವಾದ ರೂಪವನ್ನು ನೋಡಿ ಹರ್ಷಿತನಾಗು ತ್ತಿದ್ದೇನೆ ಮತ್ತು ನನ್ನ ಮನಸ್ಸು ಭಯದಿಂದ ಅತಿ ವ್ಯಾಕುಲವೂ ಆಗುತ್ತಿದೆ, ಅದಕ್ಕಾಗಿ ನೀನು ಆ ನಿನ್ನ ಚತುರ್ಭುಜ ವಿಷ್ಣು ರೂಪವನ್ನೇ ನನಗೆ ತೋರಿಸು. ಹೇ ದೇವೇಶನೇ! ಹೇ ಜಗನ್ನಿವಾಸನೇ! ಪ್ರಸನ್ನನಾಗು. ॥ ೪೫॥

ಕಿರೀಟಿನಂ ಗದಿನಂ ಚಕ್ರಹಸ್ತ
ಮಿಚ್ಛಾಮಿ ತ್ವಾಂ ದ್ರಷ್ಟುಮಹಂ ತಥೈವ ।
ತೇನೈವ ರೂಪೇಣ ಚತುರ್ಭುಜೇನ
ಸಹಸ್ರಬಾಹೋ ಭವ ವಿಶ್ವಮೂರ್ತೇ ॥ ೪೬॥

ಮುಕುಟವನ್ನು ಧರಿಸಿರುವ ಹಾಗೂ ಗದೆ ಮತ್ತು ಚಕ್ರವನ್ನು ಕೈಯಲ್ಲಿ ಧರಿಸಿರುವಂತೆಯೇ ನಿನ್ನ ರೂಪವನ್ನು ನೋಡಲು ನಾನು ಬಯಸುತ್ತೇನೆ. ಆದ್ದರಿಂದ ಹೇ ವಿಶ್ವ ಸ್ವರೂಪಿಯೇ! ಹೇ ಸಹಸ್ರಬಾಹುವೇ! ನೀನು ಅದೇ ಚತುರ್ಭುಜ ರೂಪದಿಂದ ಪ್ರಕಟನಾಗು. ॥ ೪೬॥

*ಶ್ರೀಭಗವಾನುವಾಚ*

ಮಯಾ ಪ್ರಸನ್ನೇನ ತವಾರ್ಜುನೇದಂ
ರೂಪಂ ಪರಂ ದರ್ಶಿತಮಾತ್ಮಯೋಗಾತ್ ।
ತೇಜೋಮಯಂ ವಿಶ್ವಮನಂತಮಾದ್ಯಂ
ಯನ್ಮೇ ತ್ವದನ್ಯೇನ ನ ದೃಷ್ಟಪೂರ್ವಮ್ ॥ ೪೭॥

ಭಗವಂತನು ಹೇಳಿದನು – ಹೇ ಅರ್ಜುನಾ! ಅನುಗ್ರಹ ಪೂರ್ವಕವಾಗಿ ನಾನು ನನ್ನ ಯೋಗಶಕ್ತಿಯ ಪ್ರಭಾವದಿಂದ ಈ ನನ್ನ ಪರಮ ತೇಜೋಮಯವಾದ, ಎಲ್ಲರ ಆದಿಯೂ ಮತ್ತು ಅಸೀಮವಾದ ವಿರಾಟ್ ರೂಪವನ್ನು ನಿನಗೆ ತೋರಿಸಿ ದ್ದೇನೆ, ಅದನ್ನು ನೀನಲ್ಲದೆ ಬೇರಾರೂ ಮೊದಲು ನೋಡಿರಲಿಲ್ಲ.

ನ ವೇದಯಜ್ಞಾಧ್ಯಯನೈರ್ನ ದಾನೈ-
ರ್ನ ಚ ಕ್ರಿಯಾಭಿರ್ನ ತಪೋಭಿರುಗ್ರೈಃ ।
ಏವಂರೂಪಃ ಶಕ್ಯ ಅಹಂ ನೃಲೋಕೇ
ದ್ರಷ್ಟುಂ ತ್ವದನ್ಯೇನ ಕುರುಪ್ರವೀರ ॥ ೪೮॥

ಹೇ ಅರ್ಜುನಾ! ಮನುಷ್ಯಲೋಕದಲ್ಲಿ ಈ ಪ್ರಕಾರದ ವಿಶ್ವರೂಪವುಳ್ಳ ನಾನು ವೇದ ಮತ್ತು ಯಜ್ಞಗಳ ಅಧ್ಯಯನದಿಂದಾಗಲಿ, ದಾನದಿಂದಾಗಲಿ, ಕ್ರಿಯೆಗಳಿಂದಾಗಲಿ ಮತ್ತು ಉಗ್ರವಾದ ತಪಸ್ಸುಗಳಿಂದಾಗಲೀ - ನೀನಲ್ಲದೆ ಬೇರೆಯವರ ಮೂಲಕ ನೋಡಲು ಶಕ್ಯನಲ್ಲ. ॥ ೪೮॥

ಮಾ ತೇ ವ್ಯಥಾ ಮಾ ಚ ವಿಮೂಢಭಾವೋ
ದೃಷ್ಟ್ವಾ ರೂಪಂ ಘೋರಮೀದೃಙ್ಮಮೇದಮ್ ।
ವ್ಯಪೇತಭೀಃ ಪ್ರೀತಮನಾಃ ಪುನಸ್ತ್ವಂ
ತದೇವ ಮೇ ರೂಪಮಿದಂ ಪ್ರಪಶ್ಯ ॥ ೪೯॥

ನನ್ನ ಈ ಪ್ರಕಾರವಾದ, ಈ ಭಯಂಕರವಾದ ರೂಪವನ್ನು ನೋಡಿ ನಿನಗೆ ವ್ಯಾಕಲತೆಯುಂಟಾಗಬಾರದು ಮತ್ತು ಮೂಢಭಾವವು ಸಹ ಆಗಬಾರದು. ನೀನು ಭಯ ರಹಿತ ಮತ್ತು ಪ್ರೀತಿಯುಕ್ತ ಮನಸ್ಸಿನವನಾಗಿ ಅದೇ ನನ್ನ ಈ ಶಂಖ, ಚಕ್ರ, ಗದಾ ಮತ್ತು ಪದ್ಮಯುಕ್ತವಾದ ಚತುರ್ಭುಜ ರೂಪವನ್ನು ಪುನಃ ನೋಡು ! ॥ ೪೯॥

*ಸಂಜಯ ಉವಾಚ*

ಇತ್ಯರ್ಜುನಂ ವಾಸುದೇವಸ್ತಥೋಕ್ತ್ವಾ
ಸ್ವಕಂ ರೂಪಂ ದರ್ಶಯಾಮಾಸ ಭೂಯಃ ।
ಆಶ್ವಾಸಯಾಮಾಸ ಚ ಭೀತಮೇನಂ
ಭೂತ್ವಾ ಪುನಃ ಸೌಮ್ಯವಪುರ್ಮಹಾತ್ಮಾ ॥ ೫೦॥

ಸಂಜಯನು ಹೇಳಿದನು – ಭಗವಾನ್ ವಾಸುದೇವನು ಅರ್ಜುನನನ್ನುದ್ದೇಶಿಸಿ ಈ ಪ್ರಕಾರವಾಗಿ ಹೇಳಿ ನಂತರ ತನ್ನ ಚತುರ್ಭುಜರೂಪವನ್ನು ತೋರಿಸಿದನು ಮತ್ತು ಪುನಃ ಮಹಾತ್ಮನಾದ ಶ್ರೀಕೃಷ್ಣನು ಸೌಮ್ಯಮೂರ್ತಿಯಾಗಿ ಆ ಭಯಗ್ರಸ್ತನಾದ ಅರ್ಜುನನಿಗೆ ಧೈರ್ಯ ತುಂಬಿದನು. ॥ ೫೦॥

ಅರ್ಜುನ ಉವಾಚ

**ದೃಷ್ಟ್ವೇದಂ ಮಾನುಷಂ ರೂಪಂ ತವ ಸೌಮ್ಯಂ ಜನಾರ್ದನ ।**
**ಇದಾನೀಮಸ್ಮಿ ಸಂವೃತ್ತಃ ಸಚೇತಾಃ ಪ್ರಕೃತಿಂ ಗತಃ ॥ ೫೧॥**

ಅರ್ಜುನನು ಹೇಳಿದನು – ಹೇ ಜನಾರ್ದನಾ! ನಿನ್ನ ಈ ಅತಿಶಾಂತವಾದ ಮನುಷ್ಯರೂಪವನ್ನು ನೋಡಿ ಈಗ ನಾನು ಸ್ಥಿರಚಿತ್ತನಾಗಿದ್ದೇನೆ ಮತ್ತು ನನ್ನ ಸ್ವಾಭಾವಿಕವಾದ ಸ್ಥಿತಿಯನ್ನು ಪಡೆದಿದ್ದೇನೆ. ॥ ೫೧॥

ಶ್ರೀಭಗವಾನುವಾಚ

**ಸುದುರ್ದರ್ಶಮಿದಂ ರೂಪಂ ದೃಷ್ಟವಾನಸಿ ಯನ್ಮಮ ।**
**ದೇವಾ ಅಪ್ಯಸ್ಯ ರೂಪಸ್ಯ ನಿತ್ಯಂ ದರ್ಶನಕಾಂಕ್ಷಿಣಃ ॥ ೫೨॥**

ಭಗವಂತನು ಹೇಳಿದನು – ನನ್ನ ಯಾವ ಚತುರ್ಭುಜ ರೂಪವನ್ನು ನೀನು ನೋಡಿದ್ದೀಯೋ ಇದರ ದರ್ಶನವು ತುಂಬಾ ದುರ್ಲಭವಾಗಿದೆ. ದೇವತೆಗಳು ಸಹ ಸದಾ ಈ ರೂಪದ ದರ್ಶನದ ಆಕಾಂಕ್ಷೆಯನ್ನು ಮಾಡುತ್ತಿರುತ್ತಾರೆ.

**ನಾಹಂ ವೇದೈರ್ನ ತಪಸಾ ನ ದಾನೇನ ನ ಚೇಜ್ಯಯಾ ।**
**ಶಕ್ಯ ಏವಂವಿಧೋ ದ್ರಷ್ಟುಂ ದೃಷ್ಟವಾನಸಿ ಮಾಂ ಯಥಾ ॥**

ಯಾವ ಪ್ರಕಾರವಾಗಿ ನೀನು ನನ್ನನ್ನು ನೋಡಿದ್ದೀಯೋ, ಈ ಪ್ರಕಾರ ಚತುರ್ಭುಜರೂಪನಾದ ನನ್ನನ್ನು ವೇದಗಳಿಂದ, ತಪಸ್ಸಿನಿಂದ, ದಾನದಿಂದ ಮತ್ತು ಯಜ್ಞದಿಂದಲೂ ನೋಡಲಾಗುವುದಿಲ್ಲ. ॥ ೫೩॥

**ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂವಿಧೋಽರ್ಜುನ ।**
**ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ ॥**

ಆದರೆ ಹೇ ಪರಂತಪ ಅರ್ಜುನಾ! ಅನನ್ಯ ಭಕ್ತಿಯ ಮೂಲಕ ಈ ಪ್ರಕಾರವಾದ ಚತುರ್ಭುಜರೂಪವುಳ್ಳ ನಾನು ಪ್ರತ್ಯಕ್ಷವಾಗಿ ನೋಡಲು, ತತ್ತ್ವದಿಂದ ತಿಳಿಯಲು ಹಾಗೂ ಪ್ರವೇಶಿಸಲು ಅರ್ಥಾತ್ ಏಕೀಭಾವದಿಂದ ಪ್ರಾಪ್ತವಾಗುವುದಕ್ಕೂ ಸಹ ಶಕ್ಯನಾಗಿದ್ದೇನೆ. ॥ ೫೪॥

**ಮತ್ಕರ್ಮಕೃನ್ಮತ್ಪರಮೋ ಮದ್ಭಕ್ತಃ ಸಂಗವರ್ಜಿತಃ ।**
**ನಿರ್ವೈರಃ ಸರ್ವಭೂತೇಷು ಯಃ ಸ ಮಾಮೇತಿ ಪಾಂಡವ ॥**

ಹೇ ಅರ್ಜುನಾ! ಯಾವ ಪುರುಷನು ಕೇವಲ ನನಗಾಗಿಯೇ ಸಂಪೂರ್ಣ ಕರ್ತವ್ಯ - ಕರ್ಮಗಳನ್ನು ಮಾಡುವವ ನಾಗಿದ್ದಾನೋ, ನನ್ನ ಪರಾಯಣನಾಗಿದ್ದಾನೋ,

ನನ್ನ ಭಕ್ತನಾಗಿದ್ದಾನೋ, ಆಸಕ್ತಿರಹಿತನಾಗಿದ್ದಾನೋ ಮತ್ತು ಸಮಸ್ತ ಪ್ರಾಣಿಗಳಲ್ಲಿ ವೈರಭಾವರಹಿತನಾಗಿದ್ದಾನೋ ಆ ಅನನ್ಯ ಭಕ್ತಿಯುಕ್ತನಾದ ಪುರುಷನು ನನ್ನನ್ನೇ ಹೊಂದುತ್ತಾನೆ.

*ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು*
*ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ*
*ವಿಶ್ವರೂಪದರ್ಶನಯೋಗೋ ನಾಮ ಏಕಾದಶೋಽಧ್ಯಾಯಃ ॥*

❀ ❀ ❀ ❀ ❀

## ॥ ಅಥ ದ್ವಾದಶೋಽಧ್ಯಾಯಃ॥

## ಭಕ್ತಿಯೋಗವು

*ಅರ್ಜುನ ಉವಾಚ*

**ಏವಂ ಸತತಯುಕ್ತಾ ಯೇ ಭಕ್ತಾಸ್ತ್ವಾಂ ಪರ್ಯುಪಾಸತೇ**
**ಯೇ ಚಾಪ್ಯಕ್ಷರಮವ್ಯಕ್ತಂ ತೇಷಾಂ ಕೇ ಯೋಗವಿತ್ತಮಾಃ ॥ ೧॥**

ಅರ್ಜುನನು ಹೇಳಿದನು – ಹೇ ಮನಮೋಹನಾ! ಯಾವ ಅನನ್ಯಪ್ರೇಮೀ, ಭಕ್ತಜನರೂ ಹಿಂದೆ ಹೇಳಿದ ಪ್ರಕಾರವಾಗಿ ನಿರಂತರವಾಗಿ ನಿನ್ನ ಭಜನೆ-ಧ್ಯಾನದಲ್ಲಿ ತೊಡಗಿದ್ದು, ಸಗುಣರೂಪೀ ಪರಮೇಶ್ವರನಾದ ನಿನ್ನನ್ನು ಉಪಾಸನೆಮಾಡುತ್ತಾರೆ ಮತ್ತು ಬೇರೆಯವರು ಕೇವಲ ಅವಿನಾಶಿ ಸಚ್ಚಿದಾನಂದಘನ ನಿರಾಕಾರ ಬ್ರಹ್ಮನನ್ನೇ

ಅತಿಶ್ರೇಷ್ಠಭಾವದಿಂದ ಭಜಿಸುತ್ತಾರೆ - ಈ ಎರಡೂ ಪ್ರಕಾರದ ಉಪಾಸಕರಲ್ಲಿ ಅತ್ಯುತ್ತಮಯೋಗವೇತ್ತರು ಯಾರಾಗಿದ್ದಾರೆ?

ಶ್ರೀಭಗವಾನುವಾಚ

**ಮಯ್ಯಾವೇಶ್ಯ ಮನೋ ಯೇ ಮಾಂ ನಿತ್ಯಯುಕ್ತಾ ಉಪಾಸತೇ**
**ಶ್ರದ್ಧಯಾ ಪರಯೋಪೇತಾಸ್ತೇ ಮೇ ಯುಕ್ತತಮಾ ಮತಾಃ ॥**

ಶ್ರೀಭಗವಂತನು ಹೇಳಿದನು – ನನ್ನಲ್ಲಿ ಮನಸ್ಸನ್ನು ಏಕಾಗ್ರಮಾಡಿ, ನಿರಂತರ ನನ್ನ ಭಜನೆ-ಧ್ಯಾನದಲ್ಲಿ ತೊಡಗಿದ್ದ ಯಾವ ಭಕ್ತ ಜನರು ಅತಿಶಯ, ಶ್ರೇಷ್ಠವಾದ ಶ್ರದ್ಧೆಯಿಂದ ಕೂಡಿದವರಾಗಿ, ಸಗುಣರೂಪೀ, ಪರಮೇಶ್ವರನಾದ ನನ್ನನ್ನು ಭಜಿಸುತ್ತಾರೋ ಅವರು ನನಗೆ ಯೋಗಿಗಳಲ್ಲಿ ಅತಿ ಉತ್ತಮಯೋಗಿಯೆಂದು ಮಾನ್ಯರಾಗಿದ್ದಾರೆ. ॥ ೨॥

**ಯೇ ತ್ವಕ್ಷರಮನಿರ್ದೇಶ್ಯಮವ್ಯಕ್ತಂ ಪರ್ಯುಪಾಸತೇ ।**
**ಸರ್ವತ್ರಗಮಚಿಂತ್ಯಂ ಚ ಕೂಟಸ್ಥಮಚಲಂ ಧ್ರುವಮ್ ॥ ೩॥**
**ಸಂನಿಯಮ್ಯೇಂದ್ರಿಯಗ್ರಾಮಂ ಸರ್ವತ್ರ ಸಮಬುದ್ಧಯಃ ।**
**ತೇ ಪ್ರಾಪ್ನುವಂತಿ ಮಾಮೇವ ಸರ್ವಭೂತಹಿತೇ ರತಾಃ ॥ ೪॥**

ಆದರೆ ಯಾವ ಪುರುಷರು, ಇಂದ್ರಿಯಗಳ ಸಮುದಾಯವನ್ನು ಸಂಪೂರ್ಣವಾಗಿ ವಶಪಡಿಸಿಕೊಂಡು, ಮನಸ್ಸು-ಬುದ್ಧಿಗಳಿಗೆ ಅತೀತವಾದ, ಸರ್ವವ್ಯಾಪೀ ಅವರ್ಣನೀಯ ಸ್ವರೂಪವುಳ್ಳವನೂ ಮತ್ತು ಸದಾ ಏಕರಸವಾಗಿರುವ,

ನಿತ್ಯನು, ಅಚಲನು, ನಿರಾಕಾರನೂ, ಅವಿನಾಶಿಯೂ ಆದ, ಸಚ್ಚಿದಾನಂದಘನನಾದ ಬ್ರಹ್ಮನನ್ನು ನಿರಂತರ ಏಕೀಭಾವ ದಿಂದ ಧ್ಯಾನಿಸುತ್ತ ಭಜಿಸುತ್ತಾರೋ ಅವರು ಸಮಸ್ತ ಪ್ರಾಣಿಗಳ ಹಿತದಲ್ಲಿ ನಿರತರಾಗಿ ಮತ್ತು ಎಲ್ಲರಲ್ಲಿ ಸಮಾನಭಾವ ವುಳ್ಳ ಯೋಗಿಗಳು ನನ್ನನ್ನೇ ಪಡೆಯುತ್ತಾರೆ. ॥ ೩-೪॥

**ಕ್ಲೇಶೋಽಧಿಕತರಸ್ತೇಷಾಮವ್ಯಕ್ತಾಸಕ್ತಚೇತಸಾಮ್ ।**
**ಅವ್ಯಕ್ತಾ ಹಿ ಗತಿರ್ದುಃಖಂ ದೇಹವದ್ಭಿರವಾಪ್ಯತೇ ॥ ೫॥**

ಆದರೆ ಆ ಸಚ್ಚಿದಾನಂದಘನ ನಿರಾಕಾರಬ್ರಹ್ಮನಲ್ಲಿ ಆಸಕ್ತಚಿತ್ತರಾದ ಪುರುಷರ ಸಾಧನೆಯಲ್ಲಿ ಪರಿಶ್ರಮವು ವಿಶೇಷವಾಗಿದೆ; ಏಕೆಂದರೆ ದೇಹಾಭಿಮಾನಿಗಳ ಮೂಲಕ ಅವ್ಯಕ್ತವಿಷಯಕವಾದ ಗತಿಯು ದುಃಖಪೂರ್ವಕವಾಗಿ ಪಡೆಯ ಲಾಗುತ್ತದೆ ಅರ್ಥಾತ್ ದೇಹಾಭಿಮಾನವಿರುವಾಗ ನಿರ್ಗುಣ ಬ್ರಹ್ಮನ ಪ್ರಾಪ್ತಿಯು ಕಠಿಣವಾಗಿದೆ. ॥ ೫॥

**ಯೇ ತು ಸರ್ವಾಣಿ ಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಾಃ ।**
**ಅನನ್ಯೇನೈವ ಯೋಗೇನ ಮಾಂ ಧ್ಯಾಯಂತ ಉಪಾಸತೇ ॥**

ಆದರೆ ಯಾರು ನನ್ನ ಪರಾಯಣರಾಗಿರುವ ಭಕ್ತಜನರು ಸಂಪೂರ್ಣ ಕರ್ಮಗಳನ್ನು ನನ್ನಲ್ಲಿ ಅರ್ಪಣೆಮಾಡಿ, ಸಗುಣ ರೂಪೀ ಪರಮೇಶ್ವರನಾದ ನನ್ನನ್ನೇ ಅನನ್ಯವಾದ ಭಕ್ತಿಯೋಗ ದಿಂದ ನಿರಂತರವಾಗಿ ಚಿಂತನೆಮಾಡುತ್ತಾ ಭಜಿಸುತ್ತಾರೋ –

**ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ ।**
**ಭವಾಮಿ ನಚಿರಾತ್ಪಾರ್ಥ ಮಯ್ಯಾವೇಶಿತಚೇತಸಾಮ್ ॥ ೭॥**

ಹೇ ಅರ್ಜುನಾ! ನನ್ನಲ್ಲಿ ಚಿತ್ತವನ್ನು ತೊಡಗಿಸುವ ಆ ಪ್ರೇಮಿಭಕ್ತರನ್ನು ನಾನು ಶೀಘ್ರವಾಗಿಯೇ ಮೃತ್ಯುರೂಪವಾದ ಸಂಸಾರಸಾಗರದಿಂದ ಉದ್ಧರಿಸುತ್ತೇನೆ.

**ಮಯ್ಯೇವ ಮನ ಆಧತ್ಸ್ವ ಮಯಿ ಬುದ್ಧಿಂ ನಿವೇಶಯ ।**
**ನಿವಸಿಷ್ಯಸಿ ಮಯ್ಯೇವ ಅತ ಊರ್ಧ್ವಂ ನ ಸಂಶಯಃ ॥ ೮॥**

ಮನಸ್ಸನ್ನು ನನ್ನಲ್ಲಿ ತೊಡಗಿಸು ಮತ್ತು ಬುದ್ಧಿಯನ್ನು ನನ್ನಲ್ಲೇ ತೊಡಗಿಸು; ಇದಾದನಂತರ ನೀನು ನನ್ನಲ್ಲಿಯೇ ನೆಲೆಸುವೆ, ಇದರಲ್ಲಿ ಯಾವುದೇ ಸಂಶಯವಿಲ್ಲ. ॥ ೮॥

**ಅಥ ಚಿತ್ತಂ ಸಮಾಧಾತುಂ ನ ಶಕ್ನೋಷಿ ಮಯಿ ಸ್ಥಿರಮ್ ।**
**ಅಭ್ಯಾಸಯೋಗೇನ ತತೋ ಮಾಮಿಚ್ಛಾಪ್ತುಂ ಧನಂಜಯ ॥**

ಒಂದು ವೇಳೆ ನೀನು ಮನಸ್ಸನ್ನು ನನ್ನಲ್ಲಿ ಅಚಲವಾಗಿ ಸ್ಥಾಪಿಸಲು ಸಮರ್ಥನಲ್ಲವಾದರೆ, ಹೇ ಅರ್ಜುನಾ! ಅಭ್ಯಾಸ ರೂಪೀ ಯೋಗದ ಮೂಲಕ ನನ್ನನ್ನು ಹೊಂದುವುದಕ್ಕಾಗಿ ಇಚ್ಛಿಸು. ॥ ೯॥

**ಅಭ್ಯಾಸೇಽಪ್ಯಸಮರ್ಥೋಽಸಿ ಮತ್ಕರ್ಮಪರಮೋ ಭವ ।**
**ಮದರ್ಥಮಪಿ ಕರ್ಮಾಣಿ ಕುರ್ವನ್ಸಿದ್ಧಿಮವಾಪ್ಸ್ಯಸಿ ॥ ೧೦॥**

ಒಂದು ವೇಳೆ ಅಭ್ಯಾಸದಲ್ಲಿಯೂ ಕೂಡ ನೀನು ಅಸಮರ್ಥನಾಗಿರುವೆಯಾದರೆ ಕೇವಲ ನನಗಾಗಿಯೇ ಕರ್ಮ ಮಾಡಲಿಕ್ಕಾಗಿ ಪರಾಯಣನಾಗು. ಈ ಪ್ರಕಾರ ನನ್ನ ನಿಮಿತ್ತ ವಾಗಿ ಕರ್ಮಗಳನ್ನು ಮಾಡುತ್ತಾ ನನ್ನ ಪ್ರಾಪ್ತಿರೂಪೀ ಸಿದ್ಧಿಯನ್ನು ಪಡೆಯುವೆ. ॥ ೧೦॥

**ಅಥೈತದಪ್ಯಶಕ್ತೋಽಸಿ ಕರ್ತುಂ ಮದ್ಯೋಗಮಾಶ್ರಿತಃ ।**
**ಸರ್ವಕರ್ಮಫಲತ್ಯಾಗಂ ತತಃ ಕುರು ಯತಾತ್ಮವಾನ್ ॥ ೧೧॥**

ಒಂದು ವೇಳೆ ನನ್ನ ಪ್ರಾಪ್ತಿರೂಪೀ ಯೋಗದ ಆಶ್ರಿತ ನಾಗಿ ಮೇಲೆ ಹೇಳಿದ ಸಾಧನೆಯನ್ನು ಮಾಡುವುದರಲ್ಲಿಯೂ ಕೂಡ ನೀನು ಅಸಮರ್ಥನಾಗಿದ್ದರೆ, ಮನಸ್ಸು-ಬುದ್ಧಿ ಮೊದಲಾದುವುಗಳ ಮೇಲೆ ವಿಜಯವನ್ನು ಪಡೆಯುವವ ನಾಗಿ ಎಲ್ಲ ಕರ್ಮಗಳ ಫಲದ ತ್ಯಾಗಮಾಡು. ॥ ೧೧॥

**ಶ್ರೇಯೋ ಹಿ ಜ್ಞಾನಮಭ್ಯಾಸಾಜ್ಜ್ಞಾನಾದ್ಧ್ಯಾನಂ ವಿಶಿಷ್ಯತೇ ।**
**ಧ್ಯಾನಾತ್ ಕರ್ಮಫಲತ್ಯಾಗಸ್ತ್ಯಾಗಾಚ್ಛಾಂತಿರನಂತರಮ್ ॥**

ಮರ್ಮವನ್ನರಿಯದೆ ಮಾಡಲ್ಪಟ್ಟ ಅಭ್ಯಾಸಕ್ಕಿಂತ ಜ್ಞಾನವು ಶ್ರೇಷ್ಠವಾಗಿದೆ. ಜ್ಞಾನಕ್ಕಿಂತ ಪರಮೇಶ್ವರನಾದ ನನ್ನ ಸ್ವರೂಪದ ಧ್ಯಾನವು ಶ್ರೇಷ್ಠವಾಗಿದೆ ಮತ್ತು ಧ್ಯಾನಕ್ಕಿಂತಲೂ ಸಹ ಎಲ್ಲ ಕರ್ಮಗಳ ಫಲದ ತ್ಯಾಗವು ಶ್ರೇಷ್ಠವಾಗಿದೆ, - ಏಕೆಂದರೆ, ತ್ಯಾಗದಿಂದ ತತ್ಕಾಲದಲ್ಲಿಯೇ ಪರಮಶಾಂತಿಯು ದೊರೆಯುತ್ತದೆ. ॥ ೧೨॥

**ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ ಕರುಣ ಏವ ಚ ।**
**ನಿರ್ಮಮೋ ನಿರಹಂಕಾರಃ ಸಮದುಃಖಸುಖಃ ಕ್ಷಮೀ ॥ ೧೩॥**
**ಸಂತುಷ್ಟಃ ಸತತಂ ಯೋಗೀ ಯತಾತ್ಮಾ ದೃಢನಿಶ್ಚಯಃ ।**
**ಮಯ್ಯರ್ಪಿತಮನೋಬುದ್ಧಿರ್ಯೋ ಮದ್ಭಕ್ತಃ ಸ ಮೇ ಪ್ರಿಯಃ**

ಯಾವ ಪುರುಷನು ಎಲ್ಲ ಪ್ರಾಣಿಗಳಲ್ಲಿಯೂ ದ್ವೇಷಭಾವರಹಿತನಾಗಿ, ಸ್ವಾರ್ಥರಹಿತ ಎಲ್ಲರ ಪ್ರೇಮಿಯಾಗಿದ್ದಾನೋ ಮತ್ತು ಕಾರಣವಿಲ್ಲದೇ ದಯಾಳುವಾಗಿದ್ದಾನೋ ಹಾಗೂ ಮಮತಾರಹಿತನೋ, ಅಹಂಕಾರರಹಿತನೋ, ಸುಖ-ದುಃಖಗಳಪ್ರಾಪ್ತಿಯಲ್ಲಿ ಸಮನಾಗಿರುವವನೋ ಕ್ಷಮಾವಂತನಾಗಿರುವವನೋ ಅರ್ಥಾತ್ ಅಪರಾಧ ಮಾಡುವವರಿಗೂ ಕೂಡ ಅಭಯ ನೀಡುವವನಾಗಿರುವನೋ - ಹಾಗೂ ಯಾವ ಯೋಗಿಯು, ನಿರಂತರವಾಗಿ ಸಂತುಷ್ಟನಾಗಿರುವನೋ, ಮನಸ್ಸು-ಇಂದ್ರಿಯಗಳ ಸಹಿತ ಶರೀರವನ್ನು ವಶದಲ್ಲಿಟ್ಟುಕೊಂಡಿರುವನೋ ಮತ್ತು ನನ್ನಲ್ಲಿ ದೃಢನಿಶ್ಚಯವುಳ್ಳವನಾಗಿದ್ದಾನೋ - ನನ್ನಲ್ಲಿ ಮನಸ್ಸು-ಬುದ್ಧಿಗಳನ್ನು ಅರ್ಪಿಸಿರುವ ಆ ನನ್ನ ಭಕ್ತನು ನನಗೆ ಪ್ರಿಯನಾಗಿದ್ದಾನೆ.

**ಯಸ್ಮಾನ್ನೋದ್ವಿಜತೇ ಲೋಕೋ ಲೋಕಾನ್ನೋದ್ವಿಜತೇ ಚ ಯಃ ।**
**ಹರ್ಷಾಮರ್ಷಭಯೋದ್ವೇಗೈರ್ಮುಕ್ತೋ ಯಃ ಸ ಚ ಮೇ ಪ್ರಿಯಃ**

ಯಾರಿಂದ ಯಾವುದೇ ಜೀವಿಯು ಉದ್ವೇಗವನ್ನು ಪಡೆಯುವುದಿಲ್ಲವೋ ಮತ್ತು ಯಾರು, ತಾನೂ ಸಹ ಯಾವುದೇ

ಜೀವಿಯಿಂದ ಉದ್ವೇಗವನ್ನು ಪಡೆಯುವುದಿಲ್ಲವೋ ಹಾಗೂ ಯಾರು ಹರ್ಷ, ಅಮರ್ಷ, ಭಯ ಮತ್ತು ಉದ್ವೇಗಾದಿಗಳಿಂದ ರಹಿತನಾಗಿದ್ದಾನೋ ಆ ಭಕ್ತನು ನನಗೆ ಪ್ರಿಯನಾಗಿದ್ದಾನೆ.

**ಅನಪೇಕ್ಷಃ ಶುಚಿರ್ದಕ್ಷ ಉದಾಸೀನೋ ಗತವ್ಯಥಃ ।**
**ಸರ್ವಾರಂಭಪರಿತ್ಯಾಗೀ ಯೋ ಮದ್ಭಕ್ತಃ ಸ ಮೇ ಪ್ರಿಯಃ ॥**

ಯಾವ ಪುರುಷನು ಆಕಾಂಕ್ಷಾರಹಿತನಾಗಿದ್ದಾನೋ, ಒಳಹೊರಗಿನಿಂದ ಶುದ್ಧನಾಗಿದ್ದಾನೋ, ದಕ್ಷನೂ, ಪಕ್ಷಪಾತ ರಹಿತನೂ, ದುಃಖರಹಿತನಾಗಿದ್ದಾನೋ ಎಲ್ಲಾ ಕ್ರಿಯೆಗಳಲ್ಲಿ ಕರ್ತೃತ್ವದ ಅಭಿಮಾನದ ತ್ಯಾಗಿಯಾದ ಆ ನನ್ನ ಭಕ್ತನು ನನಗೆ ಪ್ರಿಯನಾಗಿದ್ದಾನೆ. ॥ ೧೬॥

**ಯೋ ನ ಹೃಷ್ಯತಿ ನ ದ್ವೇಷ್ಟಿ ನ ಶೋಚತಿ ನ ಕಾಂಕ್ಷತಿ ।**
**ಶುಭಾಶುಭಪರಿತ್ಯಾಗೀ ಭಕ್ತಿಮಾನ್ಯಃ ಸ ಮೇ ಪ್ರಿಯಃ ॥ ೧೭॥**

ಯಾರು ಎಂದಿಗೂ ಹರ್ಷಿತನಾಗುವುದಿಲ್ಲವೋ, ದ್ವೇಷಿಸುವುದಿಲ್ಲವೋ, ಶೋಕಿಸುವುದಿಲ್ಲವೋ, ಏನನ್ನೂ ಬಯಸುವುದಿಲ್ಲವೋ ಹಾಗೂ ಯಾರು ಶುಭ ಮತ್ತು ಅಶುಭವಾದ ಸಂಪೂರ್ಣ ಕರ್ಮಗಳ ತ್ಯಾಗಿಯಾಗಿದ್ದಾನೋ ಆ ಭಕ್ತಿಯುಕ್ತನಾದ ಪುರುಷನು ನನಗೆ ಪ್ರಿಯನಾಗಿದ್ದಾನೆ. ॥ ೧೭॥

**ಸಮಃ ಶತ್ರೌ ಚ ಮಿತ್ರೇ ಚ ತಥಾ ಮಾನಾಪಮಾನಯೋಃ ।**
**ಶೀತೋಷ್ಣಸುಖದುಃಖೇಷು ಸಮಃ ಸಂಗವಿವರ್ಜಿತಃ ॥ ೧೮॥**

ಯಾರು ಶತ್ರು-ಮಿತ್ರರಲ್ಲಿ ಮತ್ತು ಮಾನಾಪಮಾನಗಳಲ್ಲಿ ಸಮನಾಗಿದ್ದಾನೋ ಹಾಗೂ ಚಳಿ, ಸೆಕೆ ಮತ್ತು ಸುಖ-ದುಃಖ ಮೊದಲಾದ ದ್ವಂದ್ವಗಳಲ್ಲಿ ಸಮನಾಗಿದ್ದಾನೋ ಮತ್ತು ಆಸಕ್ತಿಯಿಂದ ರಹಿತನಾಗಿದ್ದಾನೋ – ॥ ೧೮॥

**ತುಲ್ಯನಿಂದಾಸ್ತುತಿರ್ಮೌನೀ ಸಂತುಷ್ಟೋ ಯೇನ ಕೇನಚಿತ್ ।**
**ಅನಿಕೇತಃ ಸ್ಥಿರಮತಿರ್ಭಕ್ತಿಮಾನ್ ಮೇ ಪ್ರಿಯೋ ನರಃ ॥ ೧೯॥**

ಹಾಗೂ ಯಾರು ನಿಂದಾಸ್ತುತಿಯನ್ನು ಸಮಾನವಾಗಿ ತಿಳಿಯುತ್ತಾನೋ, ಮನನಶೀಲನೋ ಮತ್ತು ಯಾವುದೇ ಪ್ರಕಾರದಿಂದಲಾದರೂ ಶರೀರ ನಿರ್ವಾಹವಾಗುವುದರಲ್ಲಿ ಸದಾ ಸಂತುಷ್ಟನಾಗಿದ್ದಾನೋ ಮತ್ತು ಇರುವ ಸ್ಥಾನದಲ್ಲಿ ಮಮತೆ ಮತ್ತು ಆಸಕ್ತಿಯಿಂದ ರಹಿತನಾಗಿದ್ದಾನೆಯೋ, ಆ ಸ್ಥಿರಬುದ್ಧಿಯುಳ್ಳ, ಭಕ್ತಿಸಂಪನ್ನನಾದ ಪುರುಷನು ನನಗೆ ಪ್ರಿಯನು. ॥ ೧೯॥

**ಯೇ ತು ಧರ್ಮ್ಯಾಮೃತಮಿದಂ ಯಥೋಕ್ತಂ ಪರ್ಯುಪಾಸತೇ।**
**ಶ್ರದ್ದಧಾನಾ ಮತ್ಪರಮಾ ಭಕ್ತಾಸ್ತೇಽತೀವ ಮೇ ಪ್ರಿಯಾಃ ॥**

ಆದರೆ ಯಾರು ಶ್ರದ್ಧೆಯಿಂದ ಕೂಡಿದ ಪುರುಷರು, ನನ್ನ ಪರಾಯಣರಾಗಿ, ಈ ಮೇಲೆ ಹೇಳಿರುವ ಧರ್ಮಮಯವಾದ ಅಮೃತವನ್ನು ನಿಷ್ಕಾಮಪ್ರೇಮಭಾವದಿಂದ ಸೇವನೆ

ಮಾಡುವರೋ ಆ ಭಕ್ತರು ನನಗೆ ಅತಿಶಯವಾಗಿ ಪ್ರಿಯರಾಗಿದ್ದಾರೆ. ॥ ೨೦॥

*ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ಭಕ್ತಿಯೋಗೋ ನಾಮ ದ್ವಾದಶೋಽಧ್ಯಾಯಃ ॥ ೧೨॥*



## ॥ ಅಥ ತ್ರಯೋದಶೋಽಧ್ಯಾಯಃ॥

## ಕ್ಷೇತ್ರಕ್ಷೇತ್ರಜ್ಞವಿಭಾಗಯೋಗವು

*ಶ್ರೀಭಗವಾನುವಾಚ*

**ಇದಂ ಶರೀರಂ ಕೌಂತೇಯ ಕ್ಷೇತ್ರಮಿತ್ಯಭಿಧೀಯತೇ ।**
**ಏತದ್ಯೋ ವೇತ್ತಿ ತಂ ಪ್ರಾಹುಃ ಕ್ಷೇತ್ರಜ್ಞ ಇತಿ ತದ್ವಿದಃ ॥ ೧॥**

ಶ್ರೀಭಗವಂತನು ಹೇಳಿದನು - ಹೇ ಅರ್ಜುನಾ! ಈ ಶರೀರವು 'ಕ್ಷೇತ್ರ' ಎಂಬ ಹೆಸರಿನಿಂದ ಮತ್ತು ಇದನ್ನು ಯಾರು ತಿಳಿದಿರುವನೋ ಅವನನ್ನು 'ಕ್ಷೇತ್ರಜ್ಞ' ಎಂಬ ಹೆಸರಿನಿಂದ ಹೇಳಲಾಗಿದೆ. ಅವುಗಳ ತತ್ತ್ವವನ್ನು ಅರಿತಿರುವ ಜ್ಞಾನಿಗಳು ಹೀಗೆ ತಿಳಿಸುತ್ತಾರೆ. ॥ ೧॥

**ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ ।**
**ಕ್ಷೇತ್ರಕ್ಷೇತ್ರಜ್ಞಯೋರ್ಜ್ಞಾನಂ ಯತ್ತಜ್ಜ್ಞಾನಂ ಮತಂ ಮಮ ॥**

ಹೇ ಅರ್ಜುನಾ ! ನೀನು ಎಲ್ಲಾ ಕ್ಷೇತ್ರಗಳಲ್ಲಿ ಕ್ಷೇತ್ರಜ್ಞ ಅರ್ಥಾತ್ ಜೀವಾತ್ಮನು ಸಹ ನಾನೆಂದೇ ತಿಳಿ, ಮತ್ತು ಕ್ಷೇತ್ರ-ಕ್ಷೇತ್ರಜ್ಞನ ಅರ್ಥಾತ್ ವಿಕಾರಸಹಿತ ಪ್ರಕೃತಿಯ ಮತ್ತು ಪುರುಷನನ್ನು ಯಾವುದು ತತ್ವದಿಂದ ತಿಳಿಯುವುದಾಗಿದೆಯೋ ಅದು ಜ್ಞಾನವಾಗಿದೆ – ಎಂಬುದೇ ನನ್ನ ಮತವಾಗಿದೆ. ॥ ೨॥

**ತತ್ಕ್ಷೇತ್ರಂ ಯಚ್ಚ ಯಾದೃಕ್ಚ ಯದ್ವಿಕಾರಿ ಯತಶ್ಚ ಯತ್ ।**
**ಸ ಚ ಯೋ ಯತ್ಪ್ರಭಾವಶ್ಚ ತತ್ಸಮಾಸೇನ ಮೇ ಶೃಣು ॥ ೩॥**

ಆ ಕ್ಷೇತ್ರವು ಯಾವುದು ಮತ್ತು ಹೇಗಿದೆ ಹಾಗೂ ಯಾವ ವಿಕಾರಗಳುಳ್ಳದ್ದಾಗಿದೆ ಮತ್ತು ಯಾವುದರಿಂದ ಯಾವುದು ಉಂಟಾಗಿದೆ, ಹಾಗೂ ಆ ಕ್ಷೇತ್ರಜ್ಞನೂ ಕೂಡ ಯಾರು ಮತ್ತು ಯಾವ ಪ್ರಭಾವವುಳ್ಳವನಾಗಿದ್ದಾನೆ – ಅದೆಲ್ಲವನ್ನೂ ಸಂಕ್ಷೇಪವಾಗಿ ನನ್ನಿಂದ ಕೇಳು. ॥ ೩॥

**ಋಷಿಭಿರ್ಬಹುಧಾ ಗೀತಂ ಛಂದೋಭಿರ್ವಿವಿಧೈಃ ಪೃಥಕ್**
**ಬ್ರಹ್ಮಸೂತ್ರಪದೈಶ್ಚೈವ ಹೇತುಮದ್ಭಿರ್ವಿನಿಶ್ಚಿತೈಃ ॥ ೪॥**

ಈ ಕ್ಷೇತ್ರ ಮತ್ತು ಕ್ಷೇತ್ರಜ್ಞನ ತತ್ವವು ಋಷಿಗಳ ಮೂಲಕ ಅನೇಕ ಪ್ರಕಾರಗಳಿಂದ ಹೇಳಲ್ಪಟ್ಟಿದೆ ಮತ್ತು ವಿವಿಧ ವೇದ ಮಂತ್ರಗಳ ಮೂಲಕವೂ ವಿಭಾಗಪೂರ್ವಕವಾಗಿ ಹೇಳ

ಲಾಗಿದೆ, ಹಾಗೆಯೇ ಚೆನ್ನಾಗಿ ನಿಶ್ಚಯಿಸಲ್ಪಟ್ಟ ಯುಕ್ತಿ ಯುಕ್ತವಾದ ಬ್ರಹ್ಮಸೂತ್ರದ ಪದಗಳ ಮೂಲಕವೂ ಹೇಳಲಾಗಿದೆ.

**ಮಹಾಭೂತಾನ್ಯಹಂಕಾರೋ ಬುದ್ಧಿರವ್ಯಕ್ತಮೇವ ಚ ।**
**ಇಂದ್ರಿಯಾಣಿ ದಶೈಕಂ ಚ ಪಂಚ ಚೇಂದ್ರಿಯಗೋಚರಾಃ ॥ ೫॥**

ಐದು ಮಹಾಭೂತಗಳು, ಅಹಂಕಾರ, ಬುದ್ಧಿ ಮತ್ತು ಮೂಲಪ್ರಕೃತಿ ಕೂಡ ಹಾಗೂ ಹತ್ತು ಇಂದ್ರಿಯಗಳು, ಒಂದು ಮನಸ್ಸು ಮತ್ತು ಐದು ಇಂದ್ರಿಯಗಳ ವಿಷಯಗಳು ಅರ್ಥಾತ್ ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧ – ॥ ೫॥

**ಇಚ್ಛಾ ದ್ವೇಷಃ ಸುಖಂ ದುಃಖಂ ಸಂಘಾತಶ್ಚೇತನಾ ಧೃತಿಃ।**
**ಏತತ್ಕ್ಷೇತ್ರಂ ಸಮಾಸೇನ ಸವಿಕಾರಮುದಾಹೃತಮ್ ॥ ೬॥**

ಹಾಗೂ, ಇಚ್ಛೆ, ದ್ವೇಷ, ಸುಖ, ದುಃಖ, ಸ್ಥೂಲ ದೇಹದ ಪಿಂಡ, ಚೈತನ್ಯ ಮತ್ತು ಧೃತಿ - ಈ ಪ್ರಕಾರವಾಗಿ ವಿಕಾರಗಳ ಸಹಿತ ಈ ಕ್ಷೇತ್ರವನ್ನು ಸಂಕ್ಷೇಪವಾಗಿ ಹೇಳಲಾಗಿದೆ. ॥ ೬॥

**ಅಮಾನಿತ್ವಮದಂಭಿತ್ವಮಹಿಂಸಾ ಕ್ಷಾಂತಿರಾರ್ಜವಮ್ ।**
**ಆಚಾರ್ಯೋಪಾಸನಂ ಶೌಚಂ ಸ್ಥೈರ್ಯಮಾತ್ಮವಿನಿಗ್ರಹಃ ॥**

ಶ್ರೇಷ್ಠತೆಯ ಅಭಿಮಾನದ ಅಭಾವ, ಡಂಭಾಚಾರದ ಅಭಾವ, ಯಾವುದೇ ಪ್ರಾಣಿಯನ್ನು ಯಾವ ರೀತಿಯಲ್ಲಿಯೂ ಹಿಂಸಿಸದಿರುವುದು, ಕ್ಷಮಾಗುಣ, ಮನಸ್ಸು-ವಾಣಿ ಮೊದಲಾದುವುಗಳ ಸರಳತೆ, ಶ್ರದ್ಧಾಭಕ್ತಿ ಸಹಿತ ಗುರುಗಳ ಸೇವೆ,

ಹೊರಗೊಳಗಿನ ಶುದ್ಧಿ, ಅಂತಃಕರಣದ ಸ್ಥಿರತೆ ಮತ್ತು ಮನಸ್ಸು ಇಂದ್ರಿಯಗಳ ಸಹಿತ ಶರೀರದ ನಿಗ್ರಹ – ॥ ೭॥

**ಇಂದ್ರಿಯಾರ್ಥೇಷು ವೈರಾಗ್ಯಮನಹಂಕಾರ ಏವ ಚ ।**
**ಜನ್ಮಮೃತ್ಯುಜರಾವ್ಯಾಧಿದುಃಖದೋಷಾನುದರ್ಶನಮ್ ॥ ೮॥**

ಈ ಲೋಕ ಮತ್ತು ಪರಲೋಕದ ಸಂಪೂರ್ಣವಾದ ಭೋಗಗಳಲ್ಲಿ ಆಸಕ್ತಿಯ ಅಭಾವ ಮತ್ತು ಅಹಂಕಾರವು ಕೂಡ ಇಲ್ಲದಿರುವುದು, ಜನ್ಮ, ಮೃತ್ಯು, ಜರಾ ಮತ್ತು ರೋಗ ಮುಂತಾದವುಗಳಲ್ಲಿ ದುಃಖ ಮತ್ತು ದೋಷಗಳನ್ನು ಪದೇ ಪದೇ ವಿಚಾರ ಮಾಡುವುದು – ॥ ೮॥

**ಅಸಕ್ತಿರನಭಿಷ್ವಂಗಃ ಪುತ್ರದಾರಗೃಹಾದಿಷು ।**
**ನಿತ್ಯಂ ಚ ಸಮಚಿತ್ತತ್ವಮಿಷ್ಟಾನಿಷ್ಟೋಪಪತ್ತಿಷು ॥ ೯॥**

ಪುತ್ರ, ಪತ್ನೀ, ಮನೆ ಮತ್ತು ಧನಾದಿಗಳಲ್ಲಿ ಆಸಕ್ತಿಯ ಅಭಾವ, ಮಮತೆಯಿಲ್ಲದಿರುವುದು ಹಾಗೂ ಪ್ರಿಯ ಮತ್ತು ಅಪ್ರಿಯಗಳ ಪ್ರಾಪ್ತಿಯಲ್ಲಿ ಸದಾಕಾಲವೂ ಚಿತ್ತವು ಸಮನಾಗಿರುವುದು – ॥ ೯॥

**ಮಯಿ ಚಾನನ್ಯಯೋಗೇನ ಭಕ್ತಿರವ್ಯಭಿಚಾರಿಣೀ ।**
**ವಿವಿಕ್ತದೇಶಸೇವಿತ್ವಮರತಿರ್ಜನಸಂಸದಿ ॥ ೧೦॥**

ಪರಮೇಶ್ವರನಾದ ನನ್ನಲ್ಲಿ ಅನನ್ಯಯೋಗದ ಮೂಲಕ ಅವ್ಯಭಿಚಾರಿಣಿಯಾದ ಭಕ್ತಿ ಹಾಗೂ ಏಕಾಂತ ಮತ್ತು ಶುದ್ಧ

ಪ್ರದೇಶದಲ್ಲಿ ವಾಸಿಸುವ ಸ್ವಭಾವ ಮತ್ತು ವಿಷಯಾಸಕ್ತರಾದ ಮನುಷ್ಯರುಗಳ ಸಮುದಾಯದಲ್ಲಿ ಪ್ರೇಮವಿಲ್ಲದಿರುವಿಕೆ –

**ಅಧ್ಯಾತ್ಮಜ್ಞಾನನಿತ್ಯತ್ವಂ ತತ್ತ್ವಜ್ಞಾನಾರ್ಥದರ್ಶನಮ್ ।**
**ಏತಜ್ಜ್ಞಾನಮಿತಿ ಪ್ರೋಕ್ತಮಜ್ಞಾನಂ ಯದತೋಽನ್ಯಥಾ ॥**

ಅಧ್ಯಾತ್ಮಜ್ಞಾನದಲ್ಲಿ ನಿತ್ಯವಾದ ಸ್ಥಿತಿ ಮತ್ತು ತತ್ತ್ವಜ್ಞಾನದ ಅರ್ಥರೂಪೀ ಪರಮಾತ್ಮನನ್ನೇ ನೋಡುವುದು - ಇದೆಲ್ಲವೂ ಜ್ಞಾನವಾಗಿದೆ ಮತ್ತು ಯಾವುದು ಇದಕ್ಕಿಂತ ವಿಪರೀತ ವಾಗಿದೆಯೋ ಅದು ಅಜ್ಞಾನವಾಗಿದೆ ಎಂದು ಹೇಳಿದೆ.

**ಜ್ಞೇಯಂ ಯತ್ತತ್ಪ್ರವಕ್ಷ್ಯಾಮಿ ಯಜ್ಜ್ಞಾತ್ವಾಮೃತಮಶ್ನುತೇ।**
**ಅನಾದಿಮತ್ಪರಂ ಬ್ರಹ್ಮ ನ ಸತ್ತನ್ನಾಸದುಚ್ಯತೇ ॥ ೧೨॥**

ಯಾವುದು ತಿಳಿಯಲು ಯೋಗ್ಯವಾಗಿದೆಯೋ ಹಾಗೂ ಯಾವುದನ್ನು ತಿಳಿದು ಮನುಷ್ಯನು ಪರಮಾನಂದವನ್ನು ಪಡೆಯುತ್ತಾನೋ ಅದನ್ನು ಚೆನ್ನಾಗಿ ಹೇಳುವೆನು. ಆ ಅನಾದಿಯಾಗಿರುವ ಪರಮಬ್ರಹ್ಮನು ಸತ್ತೆಂದಾಗಲೀ - ಅಸತ್ತೆಂದಾಗಲೀ ಹೇಳಲಾಗುವುದಿಲ್ಲ. ॥ ೧೨॥

**ಸರ್ವತಃಪಾಣಿಪಾದಂ ತತ್ಸರ್ವತೋಽಕ್ಷಿಶಿರೋಮುಖಮ್ ।**
**ಸರ್ವತಃಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ॥ ೧೩॥**

ಅದು ಎಲ್ಲಾ ಕಡೆ ಕೈ ಮತ್ತು ಕಾಲುಗಳುಳ್ಳದ್ದೂ, ಎಲ್ಲಾ ಕಡೆ ಕಣ್ಣು ತಲೆ ಮತ್ತು ಮುಖಗಳುಳ್ಳದ್ದು ಹಾಗೂ ಎಲ್ಲಾ ಕಡೆ

ಕಿವಿಗಳುಳ್ಳದ್ದೂ ಆಗಿದೆ. ಏಕೆಂದರೆ ಅದು ಜಗತ್ತಿನಲ್ಲಿ ಎಲ್ಲವನ್ನೂ ವ್ಯಾಪಿಸಿಕೊಂಡು ಸ್ಥಿತವಾಗಿದೆ. ॥ ೧೩॥

**ಸರ್ವೇಂದ್ರಿಯಗುಣಾಭಾಸಂ ಸರ್ವೇಂದ್ರಿಯವಿವರ್ಜಿತಮ್ ।**
**ಅಸಕ್ತಂ ಸರ್ವಭೃಚ್ಚೈವ ನಿರ್ಗುಣಂ ಗುಣಭೋಕ್ತೃ ಚ ॥ ೧೪॥**

ಅವನು ಸಂಪೂರ್ಣ ಇಂದ್ರಿಯಗಳ ವಿಷಯಗಳನ್ನು ಬಲ್ಲವನಾಗಿದ್ದಾನೆ. ಆದರೆ ವಾಸ್ತವವಾಗಿ ಎಲ್ಲಾ ಇಂದ್ರಿಯ ಗಳಿಂದ ರಹಿತನಾಗಿದ್ದಾನೆ ಹಾಗೆಯೇ ಆಸಕ್ತಿರಹಿತನಾದರೂ ಸಹ ಎಲ್ಲವನ್ನೂ ಧರಿಸಿ ಪೋಷಿಸುವವನು ಮತ್ತು ನಿರ್ಗುಣ ನಾಗಿದ್ದರೂ ಗುಣಗಳ ಭೋಕ್ತೃವಾಗಿದ್ದಾನೆ. ॥ ೧೪॥

**ಬಹಿರಂತಶ್ಚ ಭೂತಾನಾಮಚರಂ ಚರಮೇವ ಚ ।**
**ಸೂಕ್ಷ್ಮತ್ವಾತ್ತದವಿಜ್ಞೇಯಂ ದೂರಸ್ಥಂ ಚಾಂತಿಕೇ ಚ ತತ್ ॥ ೧೫॥**

ಅವನು ಎಲ್ಲಾ ಚರಾಚರ ಪ್ರಾಣಿಗಳ ಹೊರಗೊಳಗೆ ಪರಿಪೂರ್ಣನಾಗಿದ್ದಾನೆ ಮತ್ತು ಚರಾಚರರೂಪಿಯೂ ಸಹ ಅವನೇ ಆಗಿದ್ದಾನೆ ಮತ್ತು ಅವನು ಸೂಕ್ಷ್ಮನಾಗಿರುವುದರಿಂದ ಅವಿಜ್ಞೇಯನಾಗಿದ್ದಾನೆ ಹಾಗೂ ಅತಿ ಸಮೀಪದಲ್ಲಿ ಮತ್ತು ದೂರದಲ್ಲಿಯೂ ಇರುವವನು ಅವನೇ ಆಗಿದ್ದಾನೆ. ॥ ೧೫॥

**ಅವಿಭಕ್ತಂ ಚ ಭೂತೇಷು ವಿಭಕ್ತಮಿವ ಚ ಸ್ಥಿತಮ್।**
**ಭೂತಭರ್ತೃ ಚ ತಜ್ಜ್ಞೇಯಂ ಗ್ರಸಿಷ್ಣು ಪ್ರಭವಿಷ್ಣು ಚ ॥ ೧೬॥**

ಆ ಪರಮಾತ್ಮನು ವಿಭಾಗರಹಿತನಾಗಿ, ಏಕರೂಪದಿಂದ ಆಕಾಶದಂತೆ ಪರಿಪೂರ್ಣನಾದರೂ ಕೂಡ, ಚರಾಚರ ಸಮಸ್ತ ಪ್ರಾಣಿಗಳಲ್ಲಿ ವಿಭಕ್ತನಾದಂತೆ ಸ್ಥಿತನಾಗಿ ತೋರುತ್ತಾನೆ ಹಾಗೂ ಆ ತಿಳಿಯಲು ಯೋಗ್ಯನಾದ ಪರಮಾತ್ಮನು ವಿಷ್ಣುರೂಪದಿಂದ ಪ್ರಾಣಿಗಳನ್ನು ಧಾರಣೆ ಪೋಷಣೆ ಮಾಡುವವನು, ಪೋಷಿಸುವವನು ಮತ್ತು ರುದ್ರರೂಪದಿಂದ ಸಂಹಾರ ಮಾಡುವವನೂ ಹಾಗೂ ಬ್ರಹ್ಮನ ರೂಪದಿಂದ ಎಲ್ಲರನ್ನು ಸೃಷ್ಟಿಮಾಡುವವನೂ ಆಗಿದ್ದಾನೆ. ॥ ೧೬॥

**ಜ್ಯೋತಿಷಾಮಪಿ ತಜ್ಜ್ಯೋತಿಸ್ತಮಸಃ ಪರಮುಚ್ಯತೇ।**
**ಜ್ಞಾನಂ ಜ್ಞೇಯಂ ಜ್ಞಾನಗಮ್ಯಂ ಹೃದಿ ಸರ್ವಸ್ಯ ವಿಷ್ಠಿತಮ್ ॥**

ಆ ಪರಬ್ರಹ್ಮವು ಜ್ಯೋತಿಗಳಿಗೂ ಕೂಡ ಜ್ಯೋತಿಯು ಮತ್ತು ಮಾಯೆಗಿಂತ ಅತೀತವೂ ಬೋಧಸ್ವರೂಪವೂ ತಿಳಿಯಲು ಯೋಗ್ಯವೂ ಹಾಗೂ ತತ್ತ್ವಜ್ಞಾನದಿಂದ ಪಡೆಯಲು ಯೋಗ್ಯವೂ ಮತ್ತು ಎಲ್ಲರ ಹೃದಯದಲ್ಲಿ ವಿಶೇಷರೂಪದಿಂದ ಸ್ಥಿತವೆಂದು ಹೇಳಲಾಗುತ್ತದೆ. ॥ ೧೭॥

**ಇತಿ ಕ್ಷೇತ್ರಂ ತಥಾ ಜ್ಞಾನಂ ಜ್ಞೇಯಂ ಚೋಕ್ತಂ ಸಮಾಸತಃ ।**
**ಮದ್ಭಕ್ತ ಏತದ್ವಿಜ್ಞಾಯ ಮದ್ಭಾವಾಯೋಪಪದ್ಯತೇ ॥ ೧೮॥**

ಈ ಪ್ರಕಾರವಾಗಿ ಕ್ಷೇತ್ರ, ಹಾಗೂ ಜ್ಞಾನ ಮತ್ತು ತಿಳಿಯಲು ಯೋಗ್ಯನಾದ ಪರಮಾತ್ಮನ ಸ್ವರೂಪವನ್ನು ಸಂಕ್ಷೇಪವಾಗಿ

ಹೇಳಲಾಯಿತು. ನನ್ನ ಭಕ್ತನು ಇದನ್ನು ತತ್ತ್ವಶಃ ತಿಳಿದು ಕೊಂಡು ನನ್ನ ಸ್ವರೂಪವನ್ನು ಪಡೆಯುತ್ತಾನೆ. ॥ ೧೮॥

**ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದೀ ಉಭಾವಪಿ।**
**ವಿಕಾರಾಂಶ್ಚ ಗುಣಾಂಶ್ಚೈವ ವಿದ್ಧಿ ಪ್ರಕೃತಿಸಂಭವಾನ್ ॥ ೧೯॥**

ಪ್ರಕೃತಿ ಮತ್ತು ಪುರುಷ - ಇವೆರಡನ್ನೂ ಸಹ ನೀನು ಅನಾದಿಯೆಂದು ತಿಳಿ ಮತ್ತು ರಾಗ-ದ್ವೇಷಾದಿ ವಿಕಾರಗಳನ್ನು ಹಾಗೂ ತ್ರಿಗುಣಾತ್ಮಕವಾದ ಸಂಪೂರ್ಣ ಪದಾರ್ಥಗಳನ್ನು ಸಹ ಪ್ರಕೃತಿಯಿಂದಲೇ ಉತ್ಪನ್ನವಾದುವು ಎಂದು ತಿಳಿ. ॥ ೧೯॥

**ಕಾರ್ಯಕರಣಕರ್ತೃತ್ವೇ ಹೇತುಃ ಪ್ರಕೃತಿರುಚ್ಯತೇ ।**
**ಪುರುಷಃ ಸುಖದುಃಖಾನಾಂ ಭೋಕ್ತೃತ್ವೇ ಹೇತುರುಚ್ಯತೇ ॥ ೨೦॥**

ಕಾರ್ಯ ಮತ್ತು ಕರಣಗಳನ್ನು ಉತ್ಪನ್ನಮಾಡುವುದರಲ್ಲಿ ಪ್ರಕೃತಿಯು ಕಾರಣವೆಂದು ಹೇಳಲಾಗುತ್ತದೆ ಮತ್ತು ಜೀವಾತ್ಮನು ಸುಖ-ದುಃಖಗಳ ಭೋಕ್ತೃತ್ವದಲ್ಲಿ ಅರ್ಥಾತ್ ಭೋಗಿಸುವುದ ರಲ್ಲಿ ಕಾರಣನೆಂದು ಹೇಳಲಾಗುತ್ತದೆ. ॥ ೨೦॥

**ಪುರುಷಃ ಪ್ರಕೃತಿಸ್ಥೋ ಹಿ ಭುಂಕ್ತೇ ಪ್ರಕೃತಿಜಾನ್ಗುಣಾನ್ ।**
**ಕಾರಣಂ ಗುಣಸಂಗೋऽಸ್ಯ ಸದಸದ್ಯೋನಿಜನ್ಮಸು ॥ ೨೧॥**

ಪ್ರಕೃತಿಯಲ್ಲಿ ಸ್ಥಿತನಾದ ಪುರುಷನೇ ಪ್ರಕೃತಿಯಿಂದ ಉತ್ಪನ್ನವಾದ ತ್ರಿಗುಣಾತ್ಮಿಕವಾದ ಪದಾರ್ಥಗಳನ್ನು ಭೋಗಿಸುತ್ತಾನೆ ಮತ್ತು ಆ ಗುಣಗಳ ಸಂಗವೇ ಈ ಜೀವಾತ್ಮನು

ಒಳ್ಳೆಯ ಮತ್ತು ಕೆಟ್ಟ ಯೋನಿಗಳಲ್ಲಿ ಜನಿಸುವುದಕ್ಕೆ ಕಾರಣವಾಗಿದೆ. ॥ ೨೧॥

**ಉಪದ್ರಷ್ಟಾನುಮಂತಾ ಚ ಭರ್ತಾ ಭೋಕ್ತಾ ಮಹೇಶ್ವರಃ।**
**ಪರಮಾತ್ಮೇತಿ ಚಾಪ್ಯುಕ್ತೋ ದೇಹೇಽಸ್ಮಿನ್ ಪುರುಷಃ ಪರಃ ॥**

ಈ ದೇಹದಲ್ಲಿ ಸ್ಥಿತನಾಗಿದ್ದರೂ ಈ ಆತ್ಮನು ವಾಸ್ತವದಲ್ಲಿ ಪರಮಾತ್ಮನೇ ಆಗಿದ್ದಾನೆ. ಅವನೇ ಸಾಕ್ಷಿಯಾಗಿರುವುದರಿಂದ ಉಪದ್ರಷ್ಟಾ ಮತ್ತು ಯಥಾರ್ಥ ಸಮ್ಮತಿಕೊಡುವವನಾದ್ದರಿಂದ ಅನುಮಂತಾ, ಎಲ್ಲರ ಧಾರಣೆ-ಪೋಷಣೆ ಮಾಡುವವನಾದ್ದರಿಂದ ಭರ್ತಾ, ಜೀವರೂಪದಿಂದ ಭೋಕ್ತಾ, ಬ್ರಹ್ಮಾ ಮೊದಲಾದವರ ಒಡೆಯನಾದ್ದರಿಂದ ಮಹೇಶ್ವರ ಮತ್ತು ಶುದ್ಧ ಸಚ್ಚಿದಾನಂದಘನನಾದ್ದರಿಂದ ಪರಮಾತ್ಮಾ ಎಂದು ಹೇಳಲಾಗಿದೆ. ॥ ೨೨॥

**ಯ ಏವಂ ವೇತ್ತಿ ಪುರುಷಂ ಪ್ರಕೃತಿಂ ಚ ಗುಣೈಃ ಸಹ ।**
**ಸರ್ವಥಾ ವರ್ತಮಾನೋಽಪಿ ನ ಸ ಭೂಯೋಽಭಿಜಾಯತೇ**

ಈ ಪ್ರಕಾರವಾಗಿ ಪುರುಷನನ್ನು ಮತ್ತು ಗುಣಗಳ ಸಹಿತವಾಗಿ ಪ್ರಕೃತಿಯನ್ನು ಯಾವ ಮನುಷ್ಯನು ತತ್ತ್ವಶಃ ತಿಳಿಯುತ್ತಾನೋ ಅವನು ಎಲ್ಲ ಪ್ರಕಾರಗಳಿಂದ ಕರ್ತವ್ಯ ಕರ್ಮಗಳನ್ನು ಮಾಡುತ್ತಿದ್ದರೂ ಸಹ ಪುನಃ ಜನಿಸುವುದಿಲ್ಲ. ॥ ೨೩॥

**ಧ್ಯಾನೇನಾತ್ಮನಿ ಪಶ್ಯಂತಿ ಕೇಚಿದಾತ್ಮಾನಮಾತ್ಮನಾ ।**
**ಅನ್ಯೇ ಸಾಂಖ್ಯೇನ ಯೋಗೇನ ಕರ್ಮಯೋಗೇನ ಚಾಪರೇ ॥**

ಆ ಪರಮಾತ್ಮನನ್ನು ಎಷ್ಟೋ ಮನುಷ್ಯರು ಶುದ್ಧವಾದ ಸೂಕ್ಷ್ಮಬುದ್ಧಿಯಿಂದ ಧ್ಯಾನದ ಮೂಲಕ ಹೃದಯದಲ್ಲಿ ನೋಡುತ್ತಾರೆ; ಬೇರೆ ಎಷ್ಟೋ ಜನರು ಜ್ಞಾನಯೋಗದ ಮೂಲಕ ಮತ್ತು ಇನ್ನೂ ಕೆಲವರು ಕರ್ಮಯೋಗದ ಮೂಲಕ ನೋಡುತ್ತಾರೆ ಅಂದರೆ ಪಡೆಯುತ್ತಾರೆ. ॥ ೨೪॥

**ಅನ್ಯೇ ತ್ವೇವಮಜಾನಂತಃ ಶ್ರುತ್ವಾನ್ಯೇಭ್ಯ ಉಪಾಸತೇ ।**
**ತೇಽಪಿ ಚಾತಿತರಂತ್ಯೇವ ಮೃತ್ಯುಂ ಶ್ರುತಿಪರಾಯಣಾಃ ॥**

ಆದರೆ ಇವರಿಗಿಂತ ಬೇರೆಯಾದ ಅರ್ಥಾತ್ ಯಾರು ಮಂದಬುದ್ಧಿಯುಳ್ಳ ಪುರುಷರಿದ್ದಾರೋ ಅವರು ಈ ಪ್ರಕಾರವಾಗಿ ತಿಳಿಯದವರಾಗಿ, ಇತರರಿಂದ ಅರ್ಥಾತ್ ತತ್ತ್ವವನ್ನು ಅರಿತಿರುವ ಪುರುಷರಿಂದ ಕೇಳಿಯೇ ಅದರಂತೆ ಉಪಾಸನೆ ಮಾಡುತ್ತಾರೆ, ಮತ್ತು ಆ ಶ್ರವಣ ಪರಾಯಣರಾದ ಪುರುಷರು ಸಹ ಮೃತ್ಯುರೂಪವಾದ ಸಂಸಾರ ಸಾಗರವನ್ನು ನಿಃಸಂದೇಹವಾಗಿ ದಾಟುತ್ತಾರೆ. ॥ ೨೫॥

**ಯಾವತ್ಸಂಜಾಯತೇ ಕಿಂಚಿತ್ಸತ್ತ್ವಂ ಸ್ಥಾವರಜಂಗಮಮ್।**
**ಕ್ಷೇತ್ರಕ್ಷೇತ್ರಜ್ಞಸಂಯೋಗಾತ್ತದ್ವಿದ್ಧಿ ಭರತರ್ಷಭ ॥ ೨೬॥**

ಹೇ ಅರ್ಜುನಾ! ಸ್ಥಾವರ ಜಂಗಮ ಎಷ್ಟು ಪ್ರಾಣಿಗಳು ಹುಟ್ಟುತ್ತವೆಯೋ ಅವೆಲ್ಲವನ್ನು ನೀನು ಕ್ಷೇತ್ರ ಮತ್ತು ಕ್ಷೇತ್ರಜ್ಞರ

ಸಂಯೋಗದಿಂದಲೇ ಅರ್ಥಾತ್ ಜಡ ಚೇತನದ ಸಂಯೋಗದಿಂದಲೇ ಹುಟ್ಟಿದವುಗಳೆಂದು ತಿಳಿ. ॥ ೨೬॥

**ಸಮಂ ಸರ್ವೇಷು ಭೂತೇಷು ತಿಷ್ಠಂತಂ ಪರಮೇಶ್ವರಮ್ ।**
**ವಿನಶ್ಯತ್ಸ್ವವಿನಶ್ಯಂತಂ ಯಃ ಪಶ್ಯತಿ ಸ ಪಶ್ಯತಿ ॥ ೨೭॥**

ಯಾವ ಪುರುಷನು ನಾಶವಾಗುತ್ತಿರುವ ಎಲ್ಲ ಚರಾಚರ ಪ್ರಾಣಿಗಳಲ್ಲಿ ಪರಮೇಶ್ವರನನ್ನು ನಾಶರಹಿತನಾಗಿ ಮತ್ತು ಸಮಭಾವದಿಂದ, ಸ್ಥಿತನಾಗಿ ನೋಡುತ್ತಾನೋ ಅವನೇ ಯಥಾರ್ಥವಾಗಿ ನೋಡುತ್ತಾನೆ. ॥ ೨೭॥

**ಸಮಂ ಪಶ್ಯನ್ ಹಿ ಸರ್ವತ್ರ ಸಮವಸ್ಥಿತಮೀಶ್ವರಮ್ ।**
**ನ ಹಿನಸ್ತ್ಯಾತ್ಮನಾತ್ಮಾನಂ ತತೋ ಯಾತಿ ಪರಾಂ ಗತಿಮ್ ॥ ೨೮॥**

ಏಕೆಂದರೆ ಯಾವ ಪುರುಷನು ಎಲ್ಲರಲ್ಲಿ ಸಮಭಾವದಿಂದ ಸ್ಥಿತನಾಗಿರುವ ಪರಮೇಶ್ವರನನ್ನು ಸಮಾನವಾಗಿ ನೋಡುತ್ತಾ ತನ್ನ ಮೂಲಕ ತನ್ನನ್ನು ನಾಶಗೊಳಿಸುವುದಿಲ್ಲವೋ ಅವನು ಇದರಿಂದ ಪರಮಗತಿಯನ್ನು ಪಡೆಯುತ್ತಾನೆ. ॥ ೨೮॥

**ಪ್ರಕೃತ್ಯೈವ ಚ ಕರ್ಮಾಣಿ ಕ್ರಿಯಮಾಣಾನಿ ಸರ್ವಶಃ ।**
**ಯಃ ಪಶ್ಯತಿ ತಥಾತ್ಮಾನಮಕರ್ತಾರಂ ಸ ಪಶ್ಯತಿ ॥ ೨೯॥**

ಮತ್ತು ಯಾವ ಪುರುಷನು ಸಂಪೂರ್ಣ ಕರ್ಮಗಳನ್ನು ಎಲ್ಲಾ ಪ್ರಕಾರದಿಂದ ಪ್ರಕೃತಿಯ ಮೂಲಕವೇ ಮಾಡಲ್ಪಡುತ್ತವೆ ಎಂದು ನೋಡುತ್ತಾನೋ ಮತ್ತು ಆತ್ಮನನ್ನು ಅಕರ್ತನೆಂದು

ನೋಡುತ್ತಾನೋ ಅವನೇ ಯಥಾರ್ಥವಾಗಿ ನೋಡು
ನಾಗಿದ್ದಾನೆ. ॥ ೨೯॥

**ಯದಾ ಭೂತಪೃಥಗ್ಭಾವಮೇಕಸ್ಥಮನುಪಶ**
**ತತ ಏವ ಚ ವಿಸ್ತಾರಂ ಬ್ರಹ್ಮ ಸಂಪದ್ಯತೇ ತದಾ ॥**

ಯಾವ ಕ್ಷಣದಲ್ಲಿ ಈ ಪುರುಷನು ಪ್ರಾಣಿಗಳ
ಬೇರೆ ಭಾವಗಳನ್ನು ಒಬ್ಬ ಪರಮಾತ್ಮನಲ್ಲೇ ಸ್ಥಿತನಿರುವು
ಹಾಗೂ ಆ ಪರಮಾತ್ಮನಿಂದಲೇ ಸಮಸ್ತ ಭೂ
ವಿಸ್ತಾರವನ್ನು ನೋಡುತ್ತಾನೋ ಅದೇ ಕ್ಷಣ ಅ
ಸಚ್ಚಿದಾನಂದಘನ ಬ್ರಹ್ಮನನ್ನು ಪಡೆಯುತ್ತಾನೆ. ॥ ೩೦॥

**ಅನಾದಿತ್ವಾನ್ನಿರ್ಗುಣತ್ವಾತ್ಪರಮಾತ್ಮಾಯಮವ್ಯಯಃ**
**ಶರೀರಸ್ಥೋಽಪಿ ಕೌಂತೇಯ ನ ಕರೋತಿ ನ ಲಿಪ್ಯತೇ ॥**

ಹೇ ಅರ್ಜುನಾ! ಅನಾದಿಯಾದ್ದರಿಂದ ಮತ್ತು ನಿಗು
ಣಾದ್ದರಿಂದ ಈ ಅವಿನಾಶಿಯಾದ ಪರಮಾತ್ಮನು ಶರೀರ
ಸ್ಥಿತನಾಗಿದ್ದರೂ ಕೂಡ, ವಾಸ್ತವದಲ್ಲಿ ಏನೂ ಮಾಡುವು
ಮತ್ತು ಲಿಪ್ತನಾಗುವುದೂ ಇಲ್ಲ. ॥ ೩೧॥

**ಯಥಾ ಸರ್ವಗತಂ ಸೌಕ್ಷ್ಮ್ಯಾದಾಕಾಶಂ ನೋಪಲಿಪ್ಯತೆ**
**ಸರ್ವತ್ರಾವಸ್ಥಿತೋ ದೇಹೇ ತಥಾತ್ಮಾ ನೋಪಲಿಪ್ಯತೇ ॥**

ಹೇಗೆ ಸರ್ವತ್ರ ವ್ಯಾಪಿಸಿರುವ ಆಕಾಶವು ಸೂಕ್ಷ್ಮವಾಗಿ
ಕಾರಣ ಲಿಪ್ತವಾಗುವುದಿಲ್ಲವೋ ಹಾಗೆಯೇ ದೇಹದಲ್ಲಿ ಸವ

ಸ್ಥಿತನಾಗಿರುವ ಆತ್ಮನು ನಿರ್ಗುಣನಾದ ಕಾರಣ ದೇಹದ ಗುಣಗಳಿಂದ ಲಿಪ್ತನಾಗುವುದಿಲ್ಲ. ॥ ೩೨॥

**ಯಥಾ ಪ್ರಕಾಶಯತ್ಯೇಕಃ ಕೃತ್ಸ್ನಂ ಲೋಕಮಿಮಂ ರವಿಃ ।**
**ಕ್ಷೇತ್ರಂ ಕ್ಷೇತ್ರೀ ತಥಾ ಕೃತ್ಸ್ನಂ ಪ್ರಕಾಶಯತಿ ಭಾರತ ॥ ೩೩॥**

ಹೇ ಅರ್ಜುನಾ! ಯಾವ ಪ್ರಕಾರವಾಗಿ ಒಬ್ಬನೇ ಸೂರ್ಯನು ಈ ಸಂಪೂರ್ಣ ಬ್ರಹ್ಮಾಂಡವನ್ನು ಬೆಳಗಿಸುತ್ತಾನೋ ಅದೇ ಪ್ರಕಾರ ಒಬ್ಬನೇ ಆತ್ಮನು ಸಂಪೂರ್ಣ ಕ್ಷೇತ್ರವನ್ನು ಪ್ರಕಾಶಿಸುತ್ತಾನೆ. ॥ ೩೩॥

**ಕ್ಷೇತ್ರಕ್ಷೇತ್ರಜ್ಞಯೋರೇವಮಂತರಂ ಜ್ಞಾನಚಕ್ಷುಷಾ ।**
**ಭೂತಪ್ರಕೃತಿಮೋಕ್ಷಂ ಚ ಯೇ ವಿದುರ್ಯಾಂತಿ ತೇ ಪರಮ್**

ಈ ಪ್ರಕಾರವಾಗಿ ಕ್ಷೇತ್ರ ಮತ್ತು ಕ್ಷೇತ್ರಜ್ಞರ ಭೇದವನ್ನು ಹಾಗೂ ಕಾರ್ಯಸಹಿತ ಪ್ರಕೃತಿಯಿಂದ ಮುಕ್ತರಾಗುವುದನ್ನು ಯಾವ ಪುರುಷರು ಜ್ಞಾನನೇತ್ರಗಳಿಂದ ತತ್ತ್ವಶಃ ತಿಳಿಯುತ್ತಾರೋ ಆ ಮಹಾತ್ಮರು ಪರಬ್ರಹ್ಮ ಪರಮಾತ್ಮನನ್ನು ಪಡೆಯುತ್ತಾರೆ.

*ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ ಕ್ಷೇತ್ರ ಕ್ಷೇತ್ರಜ್ಞ ವಿಭಾಗಯೋಗೋ ನಾಮ ತ್ರಯೋದಶೋಽಧ್ಯಾಯಃ ॥ ೧೩॥*



## ॥ ಅಥ ಚತುರ್ದಶೋಽಧ್ಯಾಯಃ ॥

## ಗುಣತ್ರಯವಿಭಾಗಯೋಗವು

### ಶ್ರೀಭಗವಾನುವಾಚ

**ಪರಂ ಭೂಯಃ ಪ್ರವಕ್ಷ್ಯಾಮಿ ಜ್ಞಾನಾನಾಂ ಜ್ಞಾನಮುತ್ತಮಮ್।**
**ಯಜ್ಜ್ಞಾತ್ವಾ ಮುನಯಃ ಸರ್ವೇ ಪರಾಂ ಸಿದ್ಧಿಮಿತೋ ಗತಾಃ ॥**

ಶ್ರೀಭಗವಂತನು ಹೇಳಿದನು – ಯಾವುದನ್ನು ತಿಳಿದುಕೊಂಡು ಎಲ್ಲ ಮುನಿಜನರು ಜಗತ್ತಿನಿಂದ ಮುಕ್ತರಾಗಿ ಪರಮ ಸಿದ್ಧಿಯನ್ನು ಪಡೆದಿದ್ದಾರೋ ಅಂತಹ ಜ್ಞಾನಗಳಲ್ಲಿ ಅತ್ಯುತ್ತಮವಾದ, ಆ ಪರಮ ಜ್ಞಾನವನ್ನು ನಾನು ಪುನಃ ನಿನಗೆ ಹೇಳುವೆನು. ॥ ೧॥

**ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ ।**
**ಸರ್ಗೇಽಪಿ ನೋಪಜಾಯಂತೇ ಪ್ರಲಯೇ ನ ವ್ಯಥಂತಿ ಚ ॥**

ಈ ಜ್ಞಾನವನ್ನಾಶ್ರಯಿಸಿ ಅರ್ಥಾತ್ ಧಾರಣೆಮಾಡಿ ನನ್ನ ಸ್ವರೂಪವನ್ನು ಪ್ರಾಪ್ತಿಮಾಡಿಕೊಂಡ ಪುರುಷರು ಸೃಷ್ಟಿಯ ಆದಿಯಲ್ಲಿ ಪುನಃ ಹುಟ್ಟುವುದಿಲ್ಲ ಮತ್ತು ಪ್ರಳಯಕಾಲದಲ್ಲಿಯೂ ಸಹ ದುಃಖಿತರಾಗುವುದಿಲ್ಲ. ॥ ೨॥

**ಮಮ ಯೋನಿರ್ಮಹದ್ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಮ್।**
**ಸಂಭವಃ ಸರ್ವಭೂತಾನಾಂ ತತೋ ಭವತಿ ಭಾರತ ॥ ೩॥**

ಹೇ ಅರ್ಜುನಾ! ನನ್ನ ಮಹತ್ ಬ್ರಹ್ಮರೂಪೀ ಮೂಲಪ್ರಕೃತಿಯು ಸಮಸ್ತ ಪ್ರಾಣಿಗಳ ಯೋನಿಯಾಗಿದೆ

ಅರ್ಥಾತ್ ಗರ್ಭಾಧಾನದ ಸ್ಥಾನವಾಗಿದೆ ಮತ್ತು ನಾನು ಆ ಯೋನಿಯಲ್ಲಿ ಚೇತನ-ಸಮುದಾಯರೂಪೀ ಗರ್ಭವನ್ನು ಸ್ಥಾಪಿಸುತ್ತೇನೆ. ಆ ಜಡ ಚೇತನದ ಸಂಯೋಗದಿಂದ ಎಲ್ಲ ಪ್ರಾಣಿಗಳ ಉತ್ಪತ್ತಿಯಾಗುತ್ತದೆ. ॥ ೩॥

**ಸರ್ವಯೋನಿಷು ಕೌಂತೇಯ ಮೂರ್ತಯಃ ಸಂಭವಂತಿ ಯಾಃ।**
**ತಾಸಾಂ ಬ್ರಹ್ಮ ಮಹದ್ಯೋನಿರಹಂ ಬೀಜಪ್ರದಃ ಪಿತಾ ॥**

ಹೇ ಅರ್ಜುನಾ! ನಾನಾ ಪ್ರಕಾರದ ಎಲ್ಲಾ ಯೋನಿಗಳಲ್ಲಿ ಎಷ್ಟು ಮೂರ್ತಿಗಳು ಅರ್ಥಾತ್ ಶರೀರಧಾರಿ ಪ್ರಾಣಿಗಳು ಹುಟ್ಟುತ್ತವೆಯೋ, ಪ್ರಕೃತಿಯಾದರೋ ಅವೆಲ್ಲದರ ಗರ್ಭಧಾರಣೆಮಾಡುವ ತಾಯಿಯಾಗಿದ್ದಾಳೆ ಮತ್ತು ನಾನು ಬೀಜವನ್ನು ಸ್ಥಾಪಿಸುವ ತಂದೆಯಾಗಿದ್ದೇನೆ. ॥ ೪॥

**ಸತ್ತ್ವಂ ರಜಸ್ತಮ ಇತಿ ಗುಣಾಃ ಪ್ರಕೃತಿಸಂಭವಾಃ ।**
**ನಿಬಧ್ನಂತಿ ಮಹಾಬಾಹೋ ದೇಹೇ ದೇಹಿನಮವ್ಯಯಮ್ ॥**

ಹೇ ಅರ್ಜುನಾ! ಸತ್ವಗುಣ, ರಜೋಗುಣ ಮತ್ತು ತಮೋಗುಣಗಳೆಂಬ ಈ ಮೂರೂ ಗುಣಗಳು ಪ್ರಕೃತಿಯಿಂದ ಉತ್ಪನ್ನವಾಗಿ ಅವಿನಾಶಿಯಾದ ಜೀವಾತ್ಮನನ್ನು ದೇಹದಲ್ಲಿ ಬಂಧಿಸುತ್ತವೆ. ॥ ೫॥

**ತತ್ರ ಸತ್ತ್ವಂ ನಿರ್ಮಲತ್ವಾತ್ಪ್ರಕಾಶಕಮನಾಮಯಮ್ ।**
**ಸುಖಸಂಗೇನ ಬಧ್ನಾತಿ ಜ್ಞಾನಸಂಗೇನ ಚಾನಘ ॥ ೬॥**

ಹೇ ಪಾಪರಹಿತನೇ! - ಆ ಮೂರೂ ಗುಣಗಳ
ಸತ್ತ್ವಗುಣವಾದರೋ ನಿರ್ಮಲವಾದ ಕಾರಣ ಪ್ರಕ
ಗೊಳಿಸುವಂತಹುದು ಮತ್ತು ವಿಕಾರರಹಿತವಾಗಿದೆ. ಅ
ಅದು ಸುಖದ ಸಂಬಂಧದಿಂದ ಮತ್ತು ಜ್ಞಾನದ ಸಂಬ
ದಿಂದ ಅರ್ಥಾತ್ ಅದರ ಅಭಿಮಾನದಿಂದ ಬಂಧಿಸುತ್ತ

**ರಜೋ ರಾಗಾತ್ಮಕಂ ವಿದ್ಧಿ ತೃಷ್ಣಾಸಂಗಸಮುದ್ಭವಮ್।**
**ತನ್ನಿಬಧ್ನಾತಿ ಕೌಂತೇಯ ಕರ್ಮಸಂಗೇನ ದೇಹಿನಮ್ ॥**

ಹೇ ಅರ್ಜುನಾ! ರಾಗರೂಪೀ ರಜೋಗುಣವು ಕಾಮ
ಮತ್ತು ಆಸಕ್ತಿಯಿಂದ ಉತ್ಪನ್ನವಾದುದೆಂದು ತಿಳಿ. ಅದು
ಜೀವಾತ್ಮನನ್ನು ಕರ್ಮಗಳ ಮತ್ತು ಅವುಗಳ ಫ
ಸಂಬಂಧದಿಂದ ಬಂಧಿಸುತ್ತದೆ. ॥ ೭॥

**ತಮಸ್ತ್ವಜ್ಞಾನಜಂ ವಿದ್ಧಿ ಮೋಹನಂ ಸರ್ವದೇಹಿನಾಮ್।**
**ಪ್ರಮಾದಾಲಸ್ಯನಿದ್ರಾಭಿಸ್ತನ್ನಿಬಧ್ನಾತಿ ಭಾರತ ॥**

ಹೇ ಅರ್ಜುನಾ! ಎಲ್ಲ ದೇಹಾಭಿಮಾನಿಗಳ
ಮೋಹಗೊಳಿಸುವ ತಮೋಗುಣವಾದರೋ ಅಜ್ಞಾನ ದಿ
ಉತ್ಪನ್ನವಾದುದೆಂದು ತಿಳಿ. ಅದು ಈ ಜೀವಾತ್ಮನನ್ನು ಪ್ರಮಾ
ಆಲಸ್ಯ ಮತ್ತು ನಿದ್ರೆಯ ಮೂಲಕ ಬಂಧಿಸುತ್ತದೆ. ॥

**ಸತ್ತ್ವಂ ಸುಖೇ ಸಂಜಯತಿ ರಜಃ ಕರ್ಮಣಿ ಭಾರತ।**
**ಜ್ಞಾನಮಾವೃತ್ಯ ತು ತಮಃ ಪ್ರಮಾದೇ ಸಂಜಯತ್ಯುತ ॥**

ಹೇ ಅರ್ಜುನಾ! ಸತ್ತ್ವಗುಣವು ಸುಖದಲ್ಲಿ ತೊಡಗಿಸುತ್ತದೆ ಮತ್ತು ರಜೋಗುಣವು ಕರ್ಮದಲ್ಲಿ ಹಾಗೂ ತಮೋಗುಣವಾದರೋ ಜ್ಞಾನವನ್ನು ಮುಚ್ಚಿಹಾಕಿ ಪ್ರಮಾದದಲ್ಲಿಯೂ ತೊಡಗಿಸುತ್ತದೆ. ॥ ೯ ॥

**ರಜಸ್ತಮಶ್ಚಾಭಿಭೂಯ ಸತ್ತ್ವಂ ಭವತಿ ಭಾರತ ।**
**ರಜಃ ಸತ್ತ್ವಂ ತಮಶ್ಚೈವ ತಮಃ ಸತ್ತ್ವಂ ರಜಸ್ತಥಾ ॥ ೧೦॥**

ಹೇ ಅರ್ಜುನಾ! ರಜೋಗುಣ ಮತ್ತು ತಮೋಗುಣಗಳನ್ನು ಅದುಮಿಕೊಂಡು ಸತ್ತ್ವಗುಣವು ವೃದ್ಧಿಸುತ್ತದೆ, ಸತ್ತ್ವಗುಣ ಮತ್ತು ತಮೋಗುಣಗಳನ್ನು ಅದುಮಿಕೊಂಡು ರಜೋಗುಣವು ವೃದ್ಧಿಸುತ್ತದೆ, ಅಂತೆಯೇ ಸತ್ತ್ವಗುಣ ಮತ್ತು ರಜೋಗುಣಗಳನ್ನು ಅದುಮಿಕೊಂಡು ತಮೋಗುಣವು ವೃದ್ಧಿಸುತ್ತದೆ. ॥ ೧೦॥

**ಸರ್ವದ್ವಾರೇಷು ದೇಹೇಽಸ್ಮಿನ್ಪ್ರಕಾಶ ಉಪಜಾಯತೇ ।**
**ಜ್ಞಾನಂ ಯದಾ ತದಾ ವಿದ್ಯಾದ್ವಿವೃದ್ಧಂ ಸತ್ತ್ವಮಿತ್ಯುತ ॥ ೧೧॥**

ಯಾವಾಗ ಈ ದೇಹದಲ್ಲಿ ಹಾಗೂ ಅಂತಃಕರಣ ಮತ್ತು ಇಂದ್ರಿಯಗಳಲ್ಲಿ ಚೈತನ್ಯವು ಮತ್ತು ವಿವೇಕಶಕ್ತಿಯು ಉಂಟಾಗುತ್ತದೋ ಆಗ ಸತ್ತ್ವಗುಣವೇ ವೃದ್ಧಿಸಿದೆಯೆಂದು ತಿಳಿಯಬೇಕು. ॥ ೧೧॥

**ಲೋಭಃ ಪ್ರವೃತ್ತಿರಾರಂಭಃ ಕರ್ಮಣಾಮಶಮಃ ಸ್ಪೃಹಾ ।**
**ರಜಸ್ಯೇತಾನಿ ಜಾಯಂತೇ ವಿವೃದ್ಧೇ ಭರತರ್ಷಭ ॥ ೧೨॥**

ಹೇ ಅರ್ಜುನಾ! ರಜೋಗುಣವು ಹೆಚ್ಚಿದಾಗ ಲೋಭ, ಪ್ರವೃತ್ತಿ, ಸ್ವಾರ್ಥಬುದ್ಧಿಯ ಮೂಲಕ ಸಕಾಮ ಭಾವದಿಂದ ಕರ್ಮಗಳನ್ನು ಮಾಡುವುದು, ಅಶಾಂತಿ ಮತ್ತು ವಿಷಯ ಭೋಗಗಳ ಲಾಲಸೆ - ಇವೆಲ್ಲವೂ ಉಂಟಾಗುತ್ತವೆ. ॥ ೧೨॥

**ಅಪ್ರಕಾಶೋಽಪ್ರವೃತ್ತಿಶ್ಚ ಪ್ರಮಾದೋ ಮೋಹ ಏವ ಚ ।**
**ತಮಸ್ಯೇತಾನಿ ಜಾಯಂತೇ ವಿವೃದ್ಧೇ ಕುರುನಂದನ ॥ ೧೩॥**

ಹೇ ಅರ್ಜುನಾ! ತಮೋಗುಣವು ಹೆಚ್ಚಿದಾಗ ಅಂತಃಕರಣ ಮತ್ತು ಇಂದ್ರಿಯಗಳಲ್ಲಿ ಅಂಧಕಾರ, ಅಂದರೆ ಚೈತನ್ಯ ಶಕ್ತಿಯ ಅಭಾವ, ಕರ್ತವ್ಯ-ಕರ್ಮಗಳಲ್ಲಿ ಅಪ್ರವೃತ್ತಿ ಮತ್ತು ಪ್ರಮಾದ ಅರ್ಥಾತ್ ವ್ಯರ್ಥ ಚೇಷ್ಟೆಗಳು ಹಾಗೂ ನಿದ್ರೆಯೇ ಮೊದಲಾದ ಅಂತಃಕರಣದ ಮೋಹಿನೀವೃತ್ತಿಗಳು - ಇವೆಲ್ಲವೂ ಉಂಟಾಗುತ್ತವೆ. ॥ ೧೩॥

**ಯದಾ ಸತ್ತ್ವೇ ಪ್ರವೃದ್ಧೇ ತು ಪ್ರಲಯಂ ಯಾತಿ ದೇಹಭೃತ್ ।**
**ತದೋತ್ತಮವಿದಾಂ ಲೋಕಾನಮಲಾನ್ಪ್ರತಿಪದ್ಯತೇ ॥ ೧೪॥**

ಯಾವಾಗ ಈ ಮನುಷ್ಯನು ಸತ್ವಗುಣದ ವೃದ್ಧಿಯಲ್ಲಿ ಮೃತ್ಯುವನ್ನು ಪಡೆಯುತ್ತಾನೋ ಆಗಲಾದರೋ ಉತ್ತಮ ಕರ್ಮಮಾಡುವವರ ನಿರ್ಮಲವಾದ, ದಿವ್ಯವಾದ, ಸ್ವರ್ಗಾದಿ ಲೋಕಗಳನ್ನು ಪಡೆಯುತ್ತಾನೆ. ॥ ೧೪॥

**ರಜಸಿ ಪ್ರಲಯಂ ಗತ್ವಾ ಕರ್ಮಸಂಗಿಷು ಜಾಯತೇ ।**
**ತಥಾ ಪ್ರಲೀನಸ್ತಮಸಿ ಮೂಢಯೋನಿಷು ಜಾಯತೇ ॥ ೧೫॥**

ರಜೋಗುಣವು ವೃದ್ಧಿಯಾದಾಗ ಮೃತ್ಯುವನ್ನು ಪಡೆದುಕೊಂಡು ಕರ್ಮಗಳಲ್ಲಿ ಆಸಕ್ತಿಯುಳ್ಳ ಮನುಷ್ಯರಲ್ಲಿ ಜನಿಸುತ್ತಾನೆ; ಹಾಗೂ ತಮೋಗುಣವು ಹೆಚ್ಚಾದಾಗ ಸತ್ತ ಮನುಷ್ಯನು ಕೀಟ, ಪಶು ಮೊದಲಾದ ಮೂಢಯೋನಿಗಳಲ್ಲಿ ಹುಟ್ಟುತ್ತಾನೆ. ॥ ೧೫॥

**ಕರ್ಮಣಃ ಸುಕೃತಸ್ಯಾಹುಃ ಸಾತ್ತ್ವಿಕಂ ನಿರ್ಮಲಂ ಫಲಮ್ ।**
**ರಜಸಸ್ತು ಫಲಂ ದುಃಖಮಜ್ಞಾನಂ ತಮಸಃ ಫಲಮ್ ॥ ೧೬॥**

ಶ್ರೇಷ್ಠವಾದ ಕರ್ಮದ ಫಲವು ಸಾತ್ತ್ವಿಕ ಅರ್ಥಾತ್ ಸುಖ, ಜ್ಞಾನ ಮತ್ತು ವೈರಾಗ್ಯವೇ ಮುಂತಾದ ನಿರ್ಮಲವಾದುದೆಂದೂ, ಆದರೆ ರಾಜಸ ಕರ್ಮದ ಫಲವು ದುಃಖವೆಂದೂ, ಹಾಗೆಯೇ ತಾಮಸ ಕರ್ಮಗಳ ಫಲವು ಅಜ್ಞಾನವೆಂದೂ ಹೇಳುತ್ತಾರೆ. ॥ ೧೬॥

**ಸತ್ತ್ವಾತ್ಸಂಜಾಯತೇ ಜ್ಞಾನಂ ರಜಸೋ ಲೋಭ ಏವ ಚ ।**
**ಪ್ರಮಾದಮೋಹೌ ತಮಸೋ ಭವತೋಽಜ್ಞಾನಮೇವ ಚ ॥**

ಸತ್ತ್ವಗುಣದಿಂದ ಜ್ಞಾನವು ಉಂಟಾಗುತ್ತದೆ ಮತ್ತು ರಜೋಗುಣದಿಂದ ನಿಸ್ಸಂದೇಹವಾಗಿ ಲೋಭವು; ಹಾಗೂ ತಮೋಗುಣದಿಂದ ಪ್ರಮಾದ, ಮೋಹಗಳು ಮತ್ತು ಅಜ್ಞಾನವೂ ಕೂಡ ಉಂಟಾಗುತ್ತವೆ. ॥ ೧೭॥

**ಊರ್ಧ್ವಂ ಗಚ್ಛಂತಿ ಸತ್ತ್ವಸ್ಥಾ ಮಧ್ಯೇ ತಿಷ್ಠಂತಿ ರಾಜಸಾಃ**
**ಜಘನ್ಯಗುಣವೃತ್ತಿಸ್ಥಾ ಅಧೋ ಗಚ್ಛಂತಿ ತಾಮಸಾಃ ॥ ೧೮॥**

ಸತ್ವಗುಣದಲ್ಲಿ ಸ್ಥಿತರಾದ ಪುರುಷರು ಸ್ವರ್ಗಾದಿ ಉಚ್ಚಲೋಕಗಳಿಗೆ ಹೋಗುತ್ತಾರೆ; ರಜೋಗುಣದಲ್ಲಿ ನೆಲೆಸಿರುವ ರಾಜಸ ಪುರುಷರು ಮಧ್ಯದಲ್ಲಿ ಅರ್ಥಾತ ಮನುಷ್ಯಲೋಕದಲ್ಲಿಯೇ ಇರುತ್ತಾರೆ ಮತ್ತು ತಮೋಗುಣದ ಕಾರ್ಯರೂಪೀ ನಿದ್ರೆ, ಪ್ರಮಾದ ಮತ್ತು ಆಲಸ್ಯಾದಿಗಳಲ್ಲಿ ನೆಲೆನಿಂತ ತಾಮಸ ಪುರುಷರು ಅಧೋಗತಿಗೆ ಅರ್ಥಾತ್ ಕೀಟ, ಪಶು ಮೊದಲಾದ ನೀಚಯೋನಿಗಳನ್ನು ಹಾಗೂ ನರಕಗಳನ್ನು ಪಡೆಯುತ್ತಾರೆ. ॥ ೧೮॥

**ನಾನ್ಯಂ ಗುಣೇಭ್ಯಃ ಕರ್ತಾರಂ ಯದಾ ದ್ರಷ್ಟಾನುಪಶ್ಯತಿ।**
**ಗುಣೇಭ್ಯಶ್ಚ ಪರಂ ವೇತ್ತಿ ಮದ್ಭಾವಂ ಸೋಽಧಿಗಚ್ಛತಿ ॥ ೧೯॥**

ಯಾವ ಸಮಯದಲ್ಲಿ ದ್ರಷ್ಟಾ ಅರ್ಥಾತ್ ಸಮಷ್ಟಿ ಚೇತನದಲ್ಲಿ ಏಕೀಭಾವದಿಂದ ಸ್ಥಿತನಾದ ಸಾಕ್ಷಿಪುರುಷನು ಮೂರೂ ಗುಣಗಳನ್ನಲ್ಲದೆ ಬೇರೆ ಯಾರನ್ನೂ ಕರ್ತನೆಂದು ನೋಡುವುದಿಲ್ಲವೋ ಮತ್ತು ಮೂರೂ ಗುಣಗಳಿಗಿಂತ ಅತ್ಯಂತ ಶ್ರೇಷ್ಠನಾದ ಸಚ್ಚಿದಾನಂದಘನಸ್ವರೂಪೀ ಪರಮಾತ್ಮನಾದ ನನ್ನನ್ನು ತತ್ತ್ವದಿಂದ ತಿಳಿಯುತ್ತಾನೋ ಆ ಸಮಯವೇ, ಅವನಿಗೆ ನನ್ನ ಸ್ವರೂಪದ ಪ್ರಾಪ್ತಿಯಾಗುತ್ತದೆ. ॥ ೧೯॥

**ಗುಣಾನೇತಾನತೀತ್ಯ ತ್ರೀನ್‌ದೇಹೀ ದೇಹಸಮುದ್ಭವಾನ್ ।**
**ಜನ್ಮಮೃತ್ಯುಜರಾದುಃಖೈರ್ವಿಮುಕ್ತೋಽಮೃತಮಶ್ನುತೇ ॥ ೨೦॥**

ಈ ಪುರುಷನು ಶರೀರದ ಉತ್ಪತ್ತಿಗೆ ಕಾರಣರೂಪವಾದ ಈ ಮೂರೂ ಗುಣಗಳನ್ನು ದಾಟಿಕೊಂಡು ಜನ್ಮ, ಮೃತ್ಯು, ವೃದ್ಧಾವಸ್ಥೆ ಮತ್ತು ಎಲ್ಲ ಪ್ರಕಾರದ ದುಃಖಗಳಿಂದ ಮುಕ್ತನಾಗಿ ಪರಮಾನಂದವನ್ನು ಪಡೆಯುತ್ತಾನೆ. ॥ ೨೦॥

ಅರ್ಜುನ ಉವಾಚ

**ಕೈರ್ಲಿಂಗೈಸ್ತ್ರೀನ್ ಗುಣಾನೇತಾನತೀತೋ ಭವತಿ ಪ್ರಭೋ ।**
**ಕಿಮಾಚಾರಃ ಕಥಂ ಚೈತಾಂಸ್ತ್ರೀನ್ ಗುಣಾನತಿವರ್ತತೇ ॥ ೨೧॥**

ಅರ್ಜುನನು ಹೇಳಿದನು – ಈ ಮೂರೂ ಗುಣಗಳಿಂದ ಅತೀತನಾದ ಪುರುಷನು ಯಾವ ಯಾವ ಲಕ್ಷಣಗಳಿಂದ ಯುಕ್ತನಾಗಿರುತ್ತಾನೆ ಮತ್ತು ಯಾವ ಪ್ರಕಾರದ ಆಚರಣೆಯುಳ್ಳವನಾಗುತ್ತಾನೆ; ಹಾಗೂ ಹೇ ಪ್ರಭುವೇ! ಮನುಷ್ಯನು ಯಾವ ಉಪಾಯದಿಂದ ಈ ಮೂರೂ ಗುಣಗಳನ್ನು ದಾಟಿಹೋಗುತ್ತಾನೆ. ॥ ೨೧॥

ಶ್ರೀಭಗವಾನುವಾಚ

**ಪ್ರಕಾಶಂ ಚ ಪ್ರವೃತ್ತಿಂ ಚ ಮೋಹಮೇವ ಚ ಪಾಂಡವ ।**
**ನ ದ್ವೇಷ್ಟಿ ಸಂಪ್ರವೃತ್ತಾನಿ ನ ನಿವೃತ್ತಾನಿ ಕಾಂಕ್ಷತಿ ॥ ೨೨॥**

ಶ್ರೀಭಗವಂತನು ಹೇಳಿದನು – ಹೇ ಅರ್ಜುನಾ! ಯಾವ ಪುರುಷನು ಸತ್ತ್ವಗುಣದ ಕಾರ್ಯರೂಪೀ ಪ್ರಕಾಶವನ್ನು

ಮತ್ತು ರಜೋಗುಣದ ಕಾರ್ಯರೂಪೀ ಪ್ರವೃತ್ತಿಯನ್ನು ಹಾಗೂ ತಮೋಗುಣದ ಕಾರ್ಯರೂಪೀ ಮೋಹವನ್ನು ಯಾವುದೇ ಆಗಿರಲಿ ಅದರಲ್ಲಿ ಪ್ರವೃತ್ತನಾದ ಮೇಲೆ ಅವುಗಳನ್ನು ದ್ವೇಷಿಸುವುದಿಲ್ಲ ಮತ್ತು ನಿವೃತ್ತನಾದ ಮೇಲೆ ಅವುಗಳನ್ನು ಬಯಸುವುದಿಲ್ಲ. ॥ ೨೨॥

**ಉದಾಸೀನವದಾಸೀನೋ ಗುಣೈರ್ಯೋ ನ ವಿಚಾಲ್ಯತೇ।**
**ಗುಣಾ ವರ್ತಂತ ಇತ್ಯೇವ ಯೋಽವತಿಷ್ಠತಿ ನೇಂಗತೇ ॥ ೨೩॥**

ಹಾಗೂ ಯಾರು ಸಾಕ್ಷಿಯಂತೆ ಸ್ಥಿತನಾಗಿದ್ದುಕೊಂಡು ಗುಣಗಳ ಮೂಲಕ ವಿಚಲಿತಗೊಳಿಸಲಾಗುವುದಿಲ್ಲವೋ ಮತ್ತು ಗುಣಗಳೇ ಗುಣಗಳಲ್ಲಿ ವರ್ತಿಸುತ್ತವೆಯೆಂದು ತಿಳಿಯುತ್ತ ಯಾರು ಸಚ್ಚಿದಾನಂದಘನ ಪರಮಾತ್ಮನಲ್ಲಿ ಏಕೀಭಾವದಿಂದ ಸ್ಥಿತನಾಗಿದ್ದಾನೋ ಮತ್ತು ಆ ಸ್ಥಿತಿಯಿಂದ ಯಾವಾಗಲೂ ವಿಚಲಿತನಾಗುವುದಿಲ್ಲವೋ - ॥ ೨೩॥

**ಸಮದುಃಖಸುಖಃ ಸ್ವಸ್ಥಃ ಸಮಲೋಷ್ಟಾಶ್ಮ ಕಾಂಚನಃ।**
**ತುಲ್ಯಪ್ರಿಯಾಪ್ರಿಯೋ ಧೀರಸ್ತುಲ್ಯನಿಂದಾತ್ಮಸಂಸ್ತುತಿಃ ॥ ೨೪॥**

ಯಾರು ನಿರಂತರ ಆತ್ಮಭಾವದಲ್ಲಿ ಸ್ಥಿತನಾಗಿದ್ದಾನೋ ಸುಖ-ದುಃಖಗಳನ್ನು ಸಮಾನವೆಂದು ತಿಳಿಯುತ್ತಾನೋ, ಮಣ್ಣು, ಕಲ್ಲು ಮತ್ತು ಚಿನ್ನಗಳಲ್ಲಿ ಸಮಾನವಾದ ಭಾವವುಳ್ಳವನಾಗಿದ್ದಾನೋ, ಜ್ಞಾನಿಯಾಗಿದ್ದಾನೋ ಪ್ರಿಯ ಮತ್ತು

ಅಪ್ರಿಯರನ್ನು ಒಂದೇ ಎಂದು ತಿಳಿಯುತ್ತಾನೋ ಮತ್ತು ನಿಂದಾಸ್ತುತಿಯಲ್ಲಿ ಕೂಡ ಸಮಭಾವವುಳ್ಳವ ನಾಗಿದ್ದಾನೋ—

**ಮಾನಾಪಮಾನಯೋಸ್ತುಲ್ಯಸ್ತುಲ್ಯೋ ಮಿತ್ರಾರಿಪಕ್ಷಯೋಃ ।**
**ಸರ್ವಾರಂಭಪರಿತ್ಯಾಗೀ ಗುಣಾತೀತಃ ಸ ಉಚ್ಯತೇ ॥ ೨೫॥**

ಯಾರು ಮಾನ ಮತ್ತು ಅಪಮಾನಗಳಲ್ಲಿ ಸಮನಾಗಿ ದ್ದಾನೋ, ಮಿತ್ರ ಮತ್ತು ವೈರಿಯ ಪಕ್ಷದಲ್ಲಿ ಸಹ ಸಮನಾಗಿ ದ್ದಾನೋ ಮತ್ತು ಸಂಪೂರ್ಣವಾದ ಕರ್ಮಗಳಲ್ಲಿ ಕರ್ತೃತ್ವದ ಅಭಿಮಾನ ರಹಿತನಾಗಿದ್ದಾನೋ - ಆ ಪುರುಷನು ಗುಣಾತೀತ ನೆಂದು ಹೇಳಲ್ಪಡುತ್ತಾನೆ. ॥ ೨೫॥

**ಮಾಂ ಚ ಯೋಽವ್ಯಭಿಚಾರೇಣ ಭಕ್ತಿಯೋಗೇನ ಸೇವತೇ ।**
**ಸ ಗುಣಾನ್ಸಮತೀತ್ಯೈತಾನ್ಬ್ರಹ್ಮಭೂಯಾಯ ಕಲ್ಪತೇ ॥ ೨೬॥**

ಯಾವ ಪುರುಷನು ಅವ್ಯಭಿಚಾರೀ ಭಕ್ತಿಯೋಗದ ಮೂಲಕ ನನ್ನನ್ನು ನಿರಂತರ ಭಜಿಸುತ್ತಾನೋ ಅವನು ಕೂಡ ಈ ಮೂರೂ ಗುಣಗಳನ್ನು ಚೆನ್ನಾಗಿ ದಾಟಿಕೊಂಡು ಸಚ್ಚಿದಾನಂದಘನ ಬ್ರಹ್ಮವನ್ನು ಪಡೆಯಲು ಯೋಗ್ಯನಾಗುತ್ತಾನೆ.

**ಬ್ರಹ್ಮಣೋ ಹಿ ಪ್ರತಿಷ್ಠಾಹಮಮೃತಸ್ಯಾವ್ಯಯಸ್ಯ ಚ ।**
**ಶಾಶ್ವತಸ್ಯ ಚ ಧರ್ಮಸ್ಯ ಸುಖಸ್ಯೈಕಾಂತಿಕಸ್ಯ ಚ ॥ ೨೭॥**

ಏಕೆಂದರೆ ಆ ಅವಿನಾಶಿಯಾದ ಪರಬ್ರಹ್ಮನ ಮತ್ತು ಅಮೃತದ ಹಾಗೂ ನಿತ್ಯವಾದ ಧರ್ಮದ ಮತ್ತು ಅಖಂಡ ಏಕರಸ ಆನಂದದ ಆಶ್ರಯವು ನಾನೇ ಆಗಿದ್ದೇನೆ. ॥ ೨೭॥

*ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ ಗುಣತ್ರಯ ವಿಭಾಗಯೋಗೋನಾಮ ಚತುರ್ದಶೋಽಧ್ಯಾಯಃ ॥ ೧೪॥*

❀ ❀ ❀ ❀ ❀

## ॥ ಅಥ ಪಂಚದಶೋಽಧ್ಯಾಯಃ ॥

## ಪುರುಷೋತ್ತಮಯೋಗಃ ॥

*ಶ್ರೀಭಗವಾನುವಾಚ*

**ಊರ್ಧ್ವಮೂಲಮಧಃಶಾಖಮಶ್ವತ್ಥಂ ಪ್ರಾಹುರವ್ಯಯಮ್ ।**
**ಛಂದಾಂಸಿ ಯಸ್ಯ ಪರ್ಣಾನಿ ಯಸ್ತಂ ವೇದ ಸ ವೇದವಿತ್ ॥**

ಶ್ರೀಭಗವಂತನು ಹೇಳಿದನು – ಆದಿಪುರುಷ ಪರಮೇಶ್ವರನು ಯಾವುದರ ಬೇರು ಆಗಿದ್ದಾನೋ, ಬ್ರಹ್ಮದೇವರು ಯಾವುದರ ಮುಖ್ಯಕಾಂಡವಾಗಿದ್ದಾರೋ ಆ ಜಗದ್ರೂಪೀ ಅಶ್ವತ್ಥವೃಕ್ಷವನ್ನು ಅವಿನಾಶೀ ಎಂದು ಹೇಳುತ್ತಾರೆ; ಹಾಗೂ ವೇದಗಳು ಯಾವುದರ ಎಲೆಗಳೆಂದು ಹೇಳಲ್ಪಟ್ಟಿವೆಯೋ - ಆ ಜಗದ್ರೂಪೀ ಅಶ್ವತ್ಥ ವೃಕ್ಷವನ್ನು ಯಾರು ತತ್ತ್ವದಿಂದ ತಿಳಿಯುತ್ತಾನೋ ಅವನು ವೇದಗಳ ತಾತ್ಪರ್ಯವನ್ನು ತಿಳಿದವನಾಗಿದ್ದಾನೆ. ॥ ೧॥

**ಅಧಶ್ಚೋರ್ಧ್ವಂ ಪ್ರಸೃತಾಸ್ತಸ್ಯ ಶಾಖಾ**
**ಗುಣಪ್ರವೃದ್ಧಾ ವಿಷಯಪ್ರವಾಲಾಃ ।**
**ಅಧಶ್ಚ ಮೂಲಾನ್ಯನುಸಂತತಾನಿ**
**ಕರ್ಮಾನುಬಂಧೀನಿ ಮನುಷ್ಯಲೋಕೇ ॥ ೨॥**

ಆ ಜಗತ್ತೆಂಬ ಅಶ್ವತ್ಥ ವೃಕ್ಷದ ಮೂರು ಗುಣರೂಪೀ ನೀರಿನಿಂದ ಬೆಳೆದಿರುವ ವಿಷಯ ಭೋಗರೂಪೀ ಚಿಗುರುಗಳುಳ್ಳ ದೇವ, ಮನುಷ್ಯ ಮತ್ತು ತಿರ್ಯಕ್ ಮೊದಲಾದ ಯೋನಿರೂಪವಾದ ಕೊಂಬೆಗಳು ಕೆಳಗೆ ಮತ್ತು ಮೇಲೆ - ಎಲ್ಲೆಲ್ಲಿಯೂ ಹರಡಿಕೊಂಡಿವೆ ಹಾಗೂ ಮನುಷ್ಯ ಜನ್ಮದಲ್ಲಿ ಕರ್ಮಗಳಿಗನುಸಾರವಾಗಿ ಬಂಧಿಸುವಂತಹ ಅಹಂತೆ, ಮಮತೆ ಮತ್ತು ವಾಸನಾರೂಪೀ ಬಿಳಲುಗಳೂ ಕೂಡ ಕೆಳಗೆ ಮತ್ತು ಮೇಲೆ ಎಲ್ಲ ಲೋಕಗಳಲ್ಲಿ ಹರಡಿಕೊಳ್ಳುತ್ತವೆ. ॥ ೨॥

**ನ ರೂಪಮಸ್ಯೇಹ ತಥೋಪಲಭ್ಯತೇ**
**ನಾಂತೋ ನ ಚಾದಿರ್ನ ಚ ಸಂಪ್ರತಿಷ್ಠಾ ।**
**ಅಶ್ವತ್ಥಮೇನಂ ಸುವಿರೂಢಮೂಲ-**
**ಮಸಂಗಶಸ್ತ್ರೇಣ ದೃಢೇನ ಛಿತ್ತ್ವಾ ॥ ೩॥**

ಈ ಜಗದ್ರೂಪೀ ವೃಕ್ಷದ ಸ್ವರೂಪವು ಹೇಗೆ ಹೇಳಿದೆಯೋ ಹಾಗೆ ಇಲ್ಲಿ ವಿಚಾರಕಾಲದಲ್ಲಿ ಕಂಡುಬರುವುದಿಲ್ಲ. ಏಕೆಂದರೆ, ಇದರ ಆದಿಯಾಗಲೀ, ಅಂತ್ಯವಾಗಲೀ ಸಿಗುವುದಿಲ್ಲ. ಹಾಗೆಯೇ ಒಳ್ಳೆಯ ಪ್ರಕಾರದಿಂದ ಇದರ

ಸ್ಥಿತಿಯೂ ಇಲ್ಲ. ಅದಕ್ಕಾಗಿ ಅಹಂತೆ, ಮಮತೆ ಮತ್ತು ವಾಸನಾರೂಪವಾದ ಅತಿ ದೃಢಮೂಲಗಳುಳ್ಳ ಜಗತ್ ರೂಪೀ ಅಶ್ವತ್ಥವೃಕ್ಷವನ್ನು ದೃಢವಾದ ವೈರಾಗ್ಯರೂಪೀ ಶಸ್ತ್ರದ ಮೂಲಕ ಕತ್ತರಿಸಿ ಹಾಕಿ – ॥ ೩॥

ತತಃ ಪದಂ ತತ್ಪರಿಮಾರ್ಗಿತವ್ಯಂ
ಯಸ್ಮಿನ್ಗತಾ ನ ನಿವರ್ತಂತಿ ಭೂಯಃ ।
ತಮೇವ ಚಾದ್ಯಂ ಪುರುಷಂ ಪ್ರಪದ್ಯೇ
ಯತಃ ಪ್ರವೃತ್ತಿಃ ಪ್ರಸೃತಾ ಪುರಾಣೀ ॥ ೪॥

ಅದರ ನಂತರ ಯಾವುದರಲ್ಲಿ ಹೋಗಿರುವಂತಹ ಪುರುಷನು ಮತ್ತೆ ಜಗತ್ತಿನಲ್ಲಿ ಮರಳಿ ಬರುವುದಿಲ್ಲವೋ ಆ ಪರಮಪದರೂಪೀ ಪರಮೇಶ್ವರನನ್ನು ಚೆನ್ನಾಗಿ ಅರಸಬೇಕು. ಮತ್ತು ಯಾವ ಪರಮೇಶ್ವರನಿಂದ ಪುರಾತನವಾದ ಜಗದ್ರೂಪೀ ವೃಕ್ಷದ ಪರಂಪರೆಯು ವಿಸ್ತಾರವನ್ನು ಪಡೆದಿದೆಯೋ ಅದೇ, ಆದಿಪುರುಷ ನಾರಾಯಣನಿಗೆ ನಾನು ಶರಣಾಗಿದ್ದೇನೆ - ಈ ಪ್ರಕಾರವಾಗಿ ದೃಢನಿಶ್ಚಯಮಾಡಿ ಕೊಂಡು ಆ ಪರಮೇಶ್ವರನ ಮನನ ಮತ್ತು ನಿದಿಧ್ಯಾಸನಮಾಡಬೇಕು. ॥ ೪॥

ನಿರ್ಮಾನಮೋಹಾ ಜಿತಸಂಗದೋಷಾ
ಅಧ್ಯಾತ್ಮನಿತ್ಯಾ ವಿನಿವೃತ್ತಕಾಮಾಃ ।
ದ್ವಂದ್ವೈರ್ವಿಮುಕ್ತಾಃ ಸುಖದುಃಖಸಂಜ್ಞೈ-
ರ್ಗಚ್ಛಂತ್ಯಮೂಢಾಃ ಪದಮವ್ಯಯಂ ತತ್ ॥ ೫॥

ಯಾರ ಮಾನ - ದೊಡ್ಡಸ್ತಿಕೆ ಮತ್ತು ಮೋಹ ನಾಶವಾಗಿ ಹೋಗಿದೆಯೋ, ಯಾರು ಆಸಕ್ತಿರೂಪವಾದ ದೋಷವನ್ನು ಜಯಿಸಿಕೊಂಡಿದ್ದಾನೋ, ಯಾರಿಗೆ ಪರಮಾತ್ಮನ ಸ್ವರೂಪದಲ್ಲಿ ನಿತ್ಯಸ್ಥಿತಿಯಿದೆಯೋ ಮತ್ತು ಯಾರ ಕಾಮನೆಗಳು ಪೂರ್ಣರೂಪದಿಂದ ನಾಶವಾಗಿ ಹೋಗಿವೆಯೋ ಅಂತಹ, ಸುಖದುಃಖಗಳೆಂಬ ದ್ವಂದ್ವಗಳಿಂದ ವಿಮುಕ್ತರಾದ ಜ್ಞಾನೀಜನರು ಅವಿನಾಶಿಯಾದ ಆ ಪರಮಪದವನ್ನು ಪಡೆಯುತ್ತಾರೆ. ॥ ೫॥

**ನ ತದ್ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾವಕಃ ।**
**ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ ॥ ೬॥**

ಆ ಸ್ವಯಂಪ್ರಕಾಶ ಪರಮಪದವನ್ನು ಸೂರ್ಯನಾಗಲೀ, ಚಂದ್ರನಾಗಲೀ ಅಥವಾ ಅಗ್ನಿಯೂ ಕೂಡ ಪ್ರಕಾಶಿಸಲಾರರು ಯಾವ ಪರಮಪದವನ್ನು ಪಡೆದ ಮನುಷ್ಯನು ಹಿಂದಿರುಗಿ ಮರಳಿ ಬರುವುದಿಲ್ಲವೋ – ಅದೇ ನನ್ನ ಪರಮಧಾಮವಾಗಿದೆ. ॥ ೬॥

**ಮಮೈವಾಂಶೋ ಜೀವಲೋಕೇ ಜೀವಭೂತಃ ಸನಾತನಃ ।**
**ಮನಃಷಷ್ಠಾನೀಂದ್ರಿಯಾಣಿ ಪ್ರಕೃತಿಸ್ಥಾನಿ ಕರ್ಷತಿ ॥ ೭॥**

ಈ ದೇಹದಲ್ಲಿ ಇರುವ ಸನಾತನವಾದ ಜೀವಾತ್ಮನು ನನ್ನದೇ ಆದ ಅಂಶವಾಗಿದ್ದಾನೆ ಮತ್ತು ಅವನೇ ಈ ಪ್ರಕೃತಿಯಲ್ಲಿ ಸ್ಥಿತನಾಗಿದ್ದು ಮನಸ್ಸು ಮತ್ತು ಐದೂ ಇಂದ್ರಿಯಗಳನ್ನು ಆಕರ್ಷಿಸುತ್ತಾನೆ. ॥ ೭॥

**ಶರೀರಂ ಯದವಾಪ್ನೋತಿ ಯಚ್ಚಾಪ್ಯುತ್ಕ್ರಾಮತೀಶ್ವರಃ ।**
**ಗೃಹೀತ್ವೈತಾನಿ ಸಂಯಾತಿ ವಾಯುರ್ಗಂಧಾನಿವಾಶಯಾತ್ ॥**

ವಾಯುವು ಗಂಧದ ಸ್ಥಾನದಿಂದ ಹೇಗೆ ಗಂಧವನ್ನು ಗ್ರಹಣಮಾಡಿ ತೆಗೆದುಕೊಂಡು ಹೋಗುತ್ತಾನೆಯೋ ಹಾಗೆಯೇ, ದೇಹಾದಿಗಳ ಸ್ವಾಮಿಯಾದ ಜೀವಾತ್ಮನೂ ಕೂಡ ಯಾವ ಶರೀರವನ್ನು ತ್ಯಾಗಮಾಡುತ್ತಾನೋ ಅದರಿಂದ ಈ ಮನಸಹಿತವಾದ ಇಂದ್ರಿಯಗಳನ್ನು ಗ್ರಹಣಮಾಡಿ ಕೊಂಡು ಯಾವ ಶರೀರವನ್ನು ಪಡೆಯುತ್ತಾನೆಯೋ ಅದರಲ್ಲಿ ಪ್ರವೇಶಿಸುತ್ತಾನೆ. ॥ ೮॥

**ಶ್ರೋತ್ರಂ ಚಕ್ಷುಃ ಸ್ಪರ್ಶನಂ ಚ ರಸನಂ ಘ್ರಾಣಮೇವ ಚ ।**
**ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ ॥ ೯॥**

ಈ ಜೀವಾತ್ಮನು ಕಿವಿ, ಕಣ್ಣು ಚರ್ಮ, ನಾಲಿಗೆ, ಮೂಗು ಮತ್ತು ಮನಸ್ಸನ್ನು ಆಶ್ರಯಿಸಿಕೊಂಡು ಅರ್ಥಾತ್ ಇವುಗಳೆಲ್ಲದರ ಆಸರೆಯಿಂದಲೇ ವಿಷಯಗಳನ್ನು ಅನುಭವಿಸುತ್ತಾನೆ. ॥ ೯॥

**ಉತ್ಕ್ರಾಮಂತಂ ಸ್ಥಿತಂ ವಾಪಿ ಭುಂಜಾನಂ ವಾ ಗುಣಾನ್ವಿತಮ್**
**ವಿಮೂಢಾ ನಾನುಪಶ್ಯಂತಿ ಪಶ್ಯಂತಿ ಜ್ಞಾನಚಕ್ಷುಷಃ ॥ ೧೦॥**

ಶರೀರವನ್ನು ಬಿಟ್ಟು ಹೋಗುವವನನ್ನು ಅಥವಾ ಶರೀರದಲ್ಲಿ ಸ್ಥಿತನಾಗಿರುವವನನ್ನು ಅಥವಾ ವಿಷಯಗಳನ್ನು ಭೋಗಿಸುವವನನ್ನು - ಈ ಪ್ರಕಾರವಾಗಿ ಮೂರೂ

ಗುಣಗಳಿಂದ ಕೂಡಿದವನನ್ನು ಸಹ ಅಜ್ಞಾನಿಗಳು ಆದರ ಯಥಾರ್ಥ ಸ್ವರೂಪವನ್ನು ತಿಳಿಯಲಾರರು. ಕೇವಲ ಜ್ಞಾನರೂಪೀ ನೇತ್ರಗಳುಳ್ಳ ವಿವೇಕಶೀಲರಾದ ಜ್ಞಾನಿಗಳೇ ತತ್ತ್ವದಿಂದ ತಿಳಿಯುತ್ತಾರೆ. ॥ ೧೦॥

**ಯತಂತೋ ಯೋಗಿನಶ್ಚೈನಂ ಪಶ್ಯಂತ್ಯಾತ್ಮನ್ಯವಸ್ಥಿತಮ್ ।**
**ಯತಂತೋಽಪ್ಯಕೃತಾತ್ಮಾನೋ ನೈನಂ ಪಶ್ಯಂತ್ಯಚೇತಸಃ ॥**

ಪ್ರಯತ್ನಶೀಲರಾದಯೋಗೀ ಜನರೇ ತಮ್ಮ ಹೃದಯದಲ್ಲಿ ಸ್ಥಿತನಾಗಿರುವ ಈ ಆತ್ಮನನ್ನು ತತ್ತ್ವದಿಂದ ಬಲ್ಲರು; ಆದರೆ ಯಾರು ತಮ್ಮ ಅಂತಃಕರಣವನ್ನು ಶುದ್ಧಿಮಾಡಿಕೊಂಡಿಲ್ಲವೋ ಅಂತಹ ಅಜ್ಞಾನೀ ಜನರಾದರೋ, ಯತ್ನ ಮಾಡುತ್ತಿದ್ದರೂ ಸಹ ಈ ಆತ್ಮನನ್ನು ತಿಳಿಯುವುದಿಲ್ಲ. ॥ ೧೧॥

**ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಮ್ ।**
**ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್ ॥**

ಸೂರ್ಯನಲ್ಲಿ ಸ್ಥಿತವಾದ ಯಾವ ತೇಜಸ್ಸು ಸಂಪೂರ್ಣ ಜಗತ್ತನ್ನು ಪ್ರಕಾಶಗೊಳಿಸುತ್ತದೆಯೋ, ಯಾವ ತೇಜವು ಚಂದ್ರನಲ್ಲಿದೆಯೋ ಮತ್ತು ಯಾವ ತೇಜವು ಅಗ್ನಿಯಲ್ಲಿದೆಯೋ ಅದನ್ನು ನೀನು ನನ್ನದೇ ತೇಜಸ್ಸೆಂದು ತಿಳಿ. ॥ ೧೨॥

**ಗಾಮಾವಿಶ್ಯ ಚ ಭೂತಾನಿ ಧಾರಯಾಮ್ಯಹಮೋಜಸಾ ।**
**ಪುಷ್ಣಾಮಿ ಚೌಷಧೀಃ ಸರ್ವಾಃ ಸೋಮೋ ಭೂತ್ವಾ ರಸಾತ್ಮಕಃ**

ಮತ್ತು ನಾನೇ ಪೃಥ್ವಿಯಲ್ಲಿ ಪ್ರವೇಶ ಮಾಡಿ ನನ್ನ ಶಕ್ತಿಯಿ
ಎಲ್ಲ ಪ್ರಾಣಿಗಳನ್ನು ಧರಿಸುತ್ತೇನೆ ಮತ್ತು ರಸ ಸ್ವರೂ
ಅರ್ಥಾತ್ ಅಮೃತಮಯ ಚಂದ್ರನಾಗಿ ಸಂಪೂರ್ಣ ವನ
ಗಳನ್ನು ಪುಷ್ಟಿಗೊಳಿಸುತ್ತೇನೆ. ॥ ೧೩॥

**ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತ।**
**ಪ್ರಾಣಾಪಾನಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಮ್।**

ನಾನೇ ಎಲ್ಲ ಪ್ರಾಣಿಗಳ ಶರೀರದಲ್ಲಿ ಸ್ಥಿತನಾಗಿ, ಪಾ
ಮತ್ತು ಅಪಾನಗಳಿಂದ ಕೂಡಿದ ವೈಶ್ವಾನರ ಅಗ್ನಿರೂಪಿಯ
ನಾಲ್ಕು ಪ್ರಕಾರವಾದ ಅನ್ನವನ್ನು ಜೀರ್ಣವಾಗಿಸುತ್ತೇನೆ.

**ಸರ್ವಸ್ಯ ಚಾಹಂ ಹೃದಿ ಸಂನಿವಿಷ್ಟೋ**
**ಮತ್ತಃ ಸ್ಮೃತಿರ್ಜ್ಞಾನಮಪೋಹನಂ ಚ ।**
**ವೇದೈಶ್ಚ ಸರ್ವೈರಹಮೇವ ವೇದ್ಯೋ**
**ವೇದಾಂತಕೃದ್ವೇದವಿದೇವ ಚಾಹಮ್ ॥ ೧೫॥**

ನಾನೇ ಎಲ್ಲ ಪ್ರಾಣಿಗಳ ಹೃದಯದಲ್ಲಿ ಅಂತರ್ಯಾ
ರೂಪದಿಂದ ಸ್ಥಿತನಾಗಿದ್ದೇನೆ; ನನ್ನಿಂದಲೇ ಸ್ಮೃತಿ, ಜ
ಉಂಟಾಗುತ್ತದೆ ಹಾಗೂ ಸಂಶಯಾದಿ ದೋಷಗಳ ನಿವಾ
ಯಾಗುತ್ತದೆ ಮತ್ತು ಎಲ್ಲ ವೇದಗಳ ಮೂಲಕ ನಾ
ತಿಳಿಯಲು ಯೋಗ್ಯನಾಗಿದ್ದೇನೆ ಹಾಗೂ ವೇದಾಂತದ ಕ
ಮತ್ತು ವೇದಗಳನ್ನು ಬಲ್ಲವನೂ ಸಹ ನಾನೇ ಆಗಿದ್ದೇನೆ

**ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ ।**
**ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ॥ ೧೬॥**

ಈ ಜಗತ್ತಿನಲ್ಲಿ ನಾಶವಾಗುವ ಹಾಗೂ ನಾಶವಾಗದೇ ಇರುವ - ಎರಡು ಪ್ರಕಾರದ ಪುರುಷರಿದ್ದಾರೆ. ಇವರಲ್ಲಿ ಸಂಪೂರ್ಣ ಭೂತಪ್ರಾಣಿಗಳ ಶರೀರವಾದರೋ ನಾಶವಾಗುವಂತಹುದು ಮತ್ತು ಜೀವಾತ್ಮನು ಅವಿನಾಶಿಯೆಂದು ಹೇಳಲಾಗುತ್ತದೆ. ॥ ೧೬॥

**ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।**
**ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ॥**

ಇವರಿಬ್ಬರಿಗಿಂತ ಉತ್ತಮ ಪುರುಷನಾದರೋ ಬೇರೆಯೇ ಆಗಿದ್ದಾನೆ. ಯಾರು ಮೂರೂ ಲೋಕಗಳಲ್ಲಿ ಪ್ರವೇಶಮಾಡಿ ಎಲ್ಲರ ಧಾರಣೆ, ಪೋಷಣೆ ಮಾಡುತ್ತಾನೆಯೋ ಅವನನ್ನು ಅವಿನಾಶಿ, ಪರಮೇಶ್ವರ ಮತ್ತು ಪರಮಾತ್ಮ ಈ ಪ್ರಕಾರವಾಗಿ ಹೇಳಲಾಗಿದೆ. ॥ ೧೭॥

**ಯಸ್ಮಾತ್ ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ ।**
**ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥**

ಏಕೆಂದರೆ ನಾನು ನಾಶವಾಗುವ ಜಡವರ್ಗ-ಕ್ಷೇತ್ರಕ್ಕಿಂತಲಾದರೋ ಸರ್ವಥಾ ಅತೀತನಾಗಿದ್ದೇನೆ ಮತ್ತು ಅವಿನಾಶಿಯಾದ ಜೀವಾತ್ಮನಿಗಿಂತಲೂ ಕೂಡ ಉತ್ತಮನಾಗಿದ್ದೇನೆ.

ಆದ್ದರಿಂದ ಲೋಕದಲ್ಲಿ ಮತ್ತು ವೇದದಲ್ಲಿ
ಪುರುಷೋತ್ತಮನೆಂಬ ಹೆಸರಿನಿಂದ ಪ್ರಸಿದ್ಧನಾಗಿದ್ದೇನೆ

**ಯೋ ಮಾಮೇವಮಸಮ್ಮೂಢೋ ಜಾನಾತಿ ಪುರುಷೋತ್ತಮ**
**ಸ ಸರ್ವವಿದ್ಭಜತಿ ಮಾಂ ಸರ್ವಭಾವೇನ ಭಾರತ ॥**

ಹೇ ಅರ್ಜುನಾ ! ಯಾವ ಜ್ಞಾನಿಪುರುಷನು ನನ್ನ
ಪ್ರಕಾರವಾಗಿ ತತ್ತ್ವದಿಂದ ಪುರುಷೋತ್ತಮನೆಂದು ತಿ
ತ್ತಾನೋ ಆ ಸರ್ವಜ್ಞನಾದ ಪುರುಷನು ಎಲ್ಲ ಪ್ರಕಾರ
ನಿರಂತರವಾಗಿ ವಾಸುದೇವ ಪರಮೇಶ್ವರನಾದ ನ
ಭಜಿಸುತ್ತಾನೆ ॥ ೧೯॥

**ಇತಿ ಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಯಾನಘ**
**ಏತದ್‌ಬುದ್ಧ್ವಾ ಬುದ್ಧಿಮಾನ್‌ಸ್ಯಾತ್ಕೃತಕೃತ್ಯಶ್ಚ ಭಾರತ ॥**

ಹೇ ನಿಷ್ಪಾಪನಾದ ಅರ್ಜುನಾ! ಈ ಪ್ರಕಾರವಾ
ಅತಿರಹಸ್ಯಯುಕ್ತವಾದ, ಗೋಪ್ಯವಾದ ಶಾಸ್ತ್ರವು ನನ್ನ ಮ
ಹೇಳಲಾಯಿತು. ಇದನ್ನು ತತ್ತ್ವತಃ ತಿಳಿದು ಮನು
ಜ್ಞಾನಿಯೂ ಮತ್ತು ಕೃತಾರ್ಥನೂ ಆಗಿಬಿಡುತ್ತಾನೆ. ॥

*ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ*
*ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ*
*ಪುರುಷೋತ್ತಮಯೋಗೋ ನಾಮ ಪಂಚದಶೋಽಧ್ಯಾಯಃ॥*

❀ ❀ ❀ ❀ ❀

## ॥ ಅಥ ಷೋಡಶೋಽಧ್ಯಾಯಃ ॥

## ದೈವಾಸುರಸಂಪದ್ವಿಭಾಗಯೋಗವು

ಶ್ರೀಭಗವಾನುವಾಚ

**ಅಭಯಂ ಸತ್ತ್ವಸಂಶುದ್ಧಿರ್ಜ್ಞಾನಯೋಗವ್ಯವಸ್ಥಿತಿಃ ।**
**ದಾನಂ ದಮಶ್ಚ ಯಜ್ಞಶ್ಚ ಸ್ವಾಧ್ಯಾಯಸ್ತಪ ಆರ್ಜವಮ್ ॥**

ಶ್ರೀಭಗವಂತನು ಹೇಳಿದನು– ಭಯದ ಸರ್ವಥಾ ಅಭಾವ, ಅಂತಃಕರಣದ ಪೂರ್ಣನಿರ್ಮಲತೆ, ತತ್ತ್ವಜ್ಞಾನಕ್ಕಾಗಿ ಧ್ಯಾನ ಯೋಗದಲ್ಲಿ ನಿರಂತರ ದೃಢವಾದ ಸ್ಥಿತಿ ಮತ್ತು ಸಾತ್ತ್ವಿಕದಾನ, ಇಂದ್ರಿಯಗಳ ದಮನ, ಭಗವಂತನ, ದೇವತೆಗಳ ಮತ್ತು ಗುರುಜನರ ಪೂಜೆ ಹಾಗೂ ಅಗ್ನಿಹೋತ್ರಾದಿ ಉತ್ತಮ ಕರ್ಮಗಳ ಆಚರಣೆ, ವೇದ-ಶಾಸ್ತ್ರಗಳ ಪಠನ-ಪಾಠನ, ಭಗವಂತನ ನಾಮ ಮತ್ತು ಗುಣಗಳ ಕೀರ್ತನೆ, ಸ್ವಧರ್ಮಪಾಲನೆಗಾಗಿ ಕಷ್ಟವನ್ನು ಸಹಿಸುವುದು ಮತ್ತು ಶರೀರ ಇಂದ್ರಿಯಗಳ ಸಹಿತವಾಗಿ ಅಂತಃಕರಣದ ಸರಳತೆ – ॥ ೧॥

**ಅಹಿಂಸಾ ಸತ್ಯಮಕ್ರೋಧಸ್ತ್ಯಾಗಃ ಶಾಂತಿರಪೈಶುನಮ್ ।**
**ದಯಾ ಭೂತೇಷ್ವಲೋಲುಪ್ತ್ವಂ ಮಾರ್ದವಂ ಹ್ರೀರಚಾಪಲಮ್**

ಮನಸ್ಸು, ಮಾತು ಮತ್ತು ಶರೀರದಿಂದ ಯಾರಿಗೂ ಯಾವ ಪ್ರಕಾರವಾಗಿಯೂ ಕಷ್ಟಕೊಡದಿರುವುದು, ಯಥಾರ್ಥ ಮತ್ತು ಪ್ರಿಯವಾಗಿ ಮಾತಾಡುವುದು, ತನಗೆ ಅಪಕಾರ

ಮಾಡಿದವರ ಮೇಲೆಯೂ ಕೋಪಿಸದಿರುವುದು, ಕರ್ಮಗಳಲ್ಲಿ ಕರ್ತೃತ್ವದ ಅಭಿಮಾನವನ್ನು ತ್ಯಜಿಸುವುದು, ಅಂತಃಕರಣದ ಉಪರತಿ ಅರ್ಥಾತ್ ಚಿತ್ತಚಾಂಚಲ್ಯದ ಅಭಾವ, ಯಾರನ್ನೂ ನಿಂದಿಸದಿರುವುದು, ಎಲ್ಲ ಪ್ರಾಣಿಗಳಲ್ಲಿ ಕಾರಣರಹಿತವಾದ ದಯೆ, ಇಂದ್ರಿಯಗಳು ವಿಷಯಗಳೊಡನೆ ಸಂಯೋಗವಾದಾಗಲೂ ಅದರಲ್ಲಿ ಆಸಕ್ತರಾಗದಿರುವಿಕೆ, ಕೋಮಲತೆ, ಲೋಕ ಮತ್ತು ಶಾಸ್ತ್ರಕ್ಕೆ ವಿರುದ್ಧವಾದ ಆಚರಣೆಯಲ್ಲಿ ಲಜ್ಜೆ ಮತ್ತು ವ್ಯರ್ಥವಾದ ಚೇಷ್ಟೆಯ ಅಭಾವ. – ॥ ೨॥

**ತೇಜಃ ಕ್ಷಮಾ ಧೃತಿಃ ಶೌಚಮದ್ರೋಹೋ ನಾತಿಮಾನಿತಾ ।**
**ಭವಂತಿ ಸಂಪದಂ ದೈವೀಮಭಿಜಾತಸ್ಯ ಭಾರತ ॥ ೩॥**

ತೇಜಸ್ಸು, ಕ್ಷಮೆ, ಧೈರ್ಯ, ಬಾಹ್ಯಶುದ್ಧಿ ಹಾಗೂ ಯಾರಲ್ಲಿಯೂ ಶತ್ರುಭಾವವಿಲ್ಲದಿರುವುದು ಮತ್ತು ತನ್ನಲ್ಲಿ ಪೂಜ್ಯತೆಯ ಅಭಿಮಾನದ ಅಭಾವವು – ಹೇ ಅರ್ಜುನಾ! ಇವೆಲ್ಲಾ ದೈವೀ ಸಂಪತ್ತನ್ನು ಪಡೆದು ಜನಿಸಿರುವ ಪುರುಷರ ಲಕ್ಷಣಗಳಾಗಿವೆ. ॥ ೩॥

**ದಂಭೋ ದರ್ಪೋಽಭಿಮಾನಶ್ಚ ಕ್ರೋಧಃ ಪಾರುಷ್ಯಮೇವ ಚ**
**ಅಜ್ಞಾನಂ ಚಾಭಿಜಾತಸ್ಯ ಪಾರ್ಥ ಸಂಪದಮಾಸುರೀಮ್ ॥ ೪॥**

ಹೇ ಅರ್ಜುನಾ! ದಂಭ, ಅಹಂಕಾರ, ಅಭಿಮಾನ, ಕ್ರೋಧ, ಕಠೋರತೆ ಮತ್ತು ಅಜ್ಞಾನ ಇವೆಲ್ಲಾ ಆಸುರೀ ಸಂಪತ್ತನ್ನು ಪಡೆದು ಹುಟ್ಟಿರುವ ಪುರುಷರ ಲಕ್ಷಣಗಳಾಗಿವೆ.

ಮತ್ತು ಆಂತರಿಕ ಶುದ್ಧಿಯಾಗಲೀ, ಶ್ರೇಷ್ಠವಾದ ಆ
ಯಾಗಲೀ ಮತ್ತು ಸತ್ಯಭಾಷಣವಾಗಲೀ ಇರುವುದಿಲ್ಲ

**ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರ**
**ಅಪರಸ್ಪರಸಂಭೂತಂ ಕಿಮನ್ಯತ್ಕಾಮಹೈತುಕಮ್**

ಆ ಆಸುರೀ ಪ್ರಕೃತಿಯುಳ್ಳ ಮನುಷ್ಯರು - ಈ
ಆಶ್ರಯರಹಿತವಾದುದು, ಸರ್ವಥಾ ಅಸತ್ಯ
ದೇವರಿಲ್ಲದೇ ತನ್ನಿಂದ ತಾನೇ ಕೇವಲ ಸ್ತ್ರೀ-ಪು
ಸಂಯೋಗದಿಂದ ಸೃಷ್ಟಿಯಾಗಿದೆ. ಆದುದರಿಂದ ಕಾ
ಇದರ ಕಾರಣವಾಗಿದೆ. ಇದಲ್ಲದೆ ಬೇರೇನಿದೆ?
ಹೇಳುತ್ತಾರೆ. ॥ ೮॥

**ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋಽಲ್ಪಬುದ್ಧ**
**ಪ್ರಭವಂತ್ಯುಗ್ರಕರ್ಮಾಣಃ ಕ್ಷಯಾಯ ಜಗತೋಽಹಿ**

ಈ ಮಿಥ್ಯಾಜ್ಞಾನವನ್ನವಲಂಬಿಸಿ ಯಾರ ಸ್ವಭ
ನಷ್ಟವಾಗಿ ಹೋಗಿದೆಯೋ ಹಾಗೂ ಯಾರ ಬು
ಮಂದವಾಗಿದೆಯೋ ಅವರು ಎಲ್ಲರಿಗೂ ಅಪಕಾರಮ
ಕ್ರೂರಕರ್ಮಿಗಳಾದ ಮನುಷ್ಯರು; ಕೇವಲ ಜಗತ್ತಿನ ನಾಶಕ್ಕಾ
ಸಮರ್ಥರಾಗುತ್ತಾರೆ. ॥ ೯॥

**ಕಾಮಮಾಶ್ರಿತ್ಯ ದುಷ್ಪೂರಂ ದಂಭಮಾನಮದಾನ್ವಿ**
**ಮೋಹಾದ್ಗೃಹೀತ್ವಾಸದ್ಗ್ರಾಹಾನ್ಪ್ರವರ್ತಂತೇಽಶುಚಿವ್ರ**

ದಂಭ, ಮಾನ ಮತ್ತು ಮದದಿಂದ ಕೂಡಿದವರಾದ ಮನುಷ್ಯರು ಯಾವ ಪ್ರಕಾರದಿಂದಲೂ ಪೂರ್ಣವಾಗದ ಕಾಮನೆಗಳ ಆಶ್ರಯಪಡೆದು, ಅಜ್ಞಾನದಿಂದ ಮಿಥ್ಯಾ ಸಿದ್ಧಾಂತಗಳನ್ನು ಗ್ರಹಿಸಿಕೊಂಡು ಮತ್ತು ಭ್ರಷ್ಟ ಆಚರಣೆಯನ್ನು ತಮ್ಮದಾಗಿಸಿಕೊಂಡು ಜಗತ್ತಿನಲ್ಲಿ ವ್ಯವಹರಿಸುತ್ತಾರೆ. ॥ ೧೦॥

**ಚಿಂತಾಮಪರಿಮೇಯಾಂ ಚ ಪ್ರಲಯಾಂತಾಮುಪಾಶ್ರಿತಾಃ।**
**ಕಾಮೋಪಭೋಗಪರಮಾ ಏತಾವದಿತಿ ನಿಶ್ಚಿತಾಃ ॥ ೧೧॥**

ಹಾಗೂ ಅವರು ಮರಣಪರ್ಯಂತವಾಗಿ ಇರುವ ಅಸಂಖ್ಯಾತ ಚಿಂತೆಗಳ ಆಶ್ರಯ ಪಡೆದವರು, ವಿಷಯ ಭೋಗಗಳನ್ನು ಭೋಗಿಸುವುದರಲ್ಲಿ ತತ್ಪರರಾದವರು ಮತ್ತು 'ಇಷ್ಟೇ ಸುಖ' ಎಂದು ಈ ಪ್ರಕಾರವಾಗಿ ತಿಳಿದವರಾಗಿರುತ್ತಾರೆ. ॥ ೧೧॥

**ಆಶಾಪಾಶಶತೈರ್ಬದ್ಧಾಃ ಕಾಮಕ್ರೋಧಪರಾಯಣಾಃ ।**
**ಈಹಂತೇ ಕಾಮಭೋಗಾರ್ಥಮನ್ಯಾಯೇನಾರ್ಥಸಂಚಯಾನ್**

ನೂರಾರು ಆಸೆಗಳ ಪಾಶಗಳಿಂದ ಬಂಧಿತರಾದ ಆ ಪುರುಷರು ಕಾಮಕ್ರೋಧಗಳ ಪರಾಯಣರಾಗಿ, ವಿಷಯ ಭೋಗಗಳಿಗಾಗಿ, ಅನ್ಯಾಯಪೂರ್ವಕವಾಗಿ ಧನವೇ ಮುಂತಾದ ಪದಾರ್ಥಗಳನ್ನು ಸಂಗ್ರಹಿಸುವ ಪ್ರಯತ್ನವನ್ನು ಮಾಡುತ್ತಿರುತ್ತಾರೆ. ॥ ೧೨॥

**ಇದಮದ್ಯ ಮಯಾ ಲಬ್ಧಮಿಮಂ ಪ್ರಾಪ್ಸ್ಯೇ ಮನೋರಥಮ್।**
**ಇದಮಸ್ತೀದಮಪಿ ಮೇ ಭವಿಷ್ಯತಿ ಪುನರ್ಧನಮ್ ॥**

ನಾನು ಈ ದಿನ ಇದನ್ನು ಪ್ರಾಪ್ತಿ ಮಾಡಿಕೊಂಡಿದ್ದೇನೆ ಮತ್ತು ಈಗ ಈ ಮನೋರಥವನ್ನು ಪಡೆಯುವೆನು. ನನ್ನ ಬಳಿ ಇಷ್ಟು ಧನವಿದೆ ಮತ್ತು ಇನ್ನೂ ಕೂಡ ಧನಸಂಗ್ರಹ ವಾಗುವುದೆಂದು ಅವರು ಯೋಚಿಸುತ್ತಾರೆ. ॥ ೧೩॥

**ಅಸೌ ಮಯಾ ಹತಃ ಶತ್ರುರ್ಹನಿಷ್ಯೇ ಚಾಪರಾನಪಿ।**
**ಈಶ್ವರೋಽಹಮಹಂ ಭೋಗೀ ಸಿದ್ಧೋಽಹಂ ಬಲವಾನ್ಸುಖೀ**

ಆ ಶತ್ರುವು ನನ್ನಿಂದ ಕೊಲ್ಲಲ್ಪಟ್ಟನು ಮತ್ತು ಇತರ ಶತ್ರುಗಳನ್ನು ಕೂಡ ನಾನು ಕೊಂದುಹಾಕುವೆನು. ನಾನು ಈಶ್ವರನಾಗಿದ್ದೇನೆ, ಐಶ್ವರ್ಯವನ್ನು ಭೋಗಿಸುವವನಾಗಿದ್ದೇನೆ. ನಾನು ಎಲ್ಲ ಸಿದ್ಧಿಗಳಿಂದ ಕೂಡಿದವನಾಗಿದ್ದೇನೆ ಮತ್ತು ಬಲಶಾಲಿಯೂ ಹಾಗೂ ಸುಖಿಯೂ ಆಗಿದ್ದೇನೆ. ॥ ೧೪॥

**ಆಢ್ಯೋಽಭಿಜನವಾನಸ್ಮಿ ಕೋಽನ್ಯೋಽಸ್ತಿ ಸದೃಶೋ ಮಯಾ।**
**ಯಕ್ಷ್ಯೇ ದಾಸ್ಯಾಮಿ ಮೋದಿಷ್ಯ ಇತ್ಯಜ್ಞಾನವಿಮೋಹಿತಾಃ ॥**
**ಅನೇಕಚಿತ್ತವಿಭ್ರಾಂತಾ ಮೋಹಜಾಲಸಮಾವೃತಾಃ ।**
**ಪ್ರಸಕ್ತಾಃ ಕಾಮಭೋಗೇಷು ಪತಂತಿ ನರಕೇಽಶುಚೌ ॥**

ನಾನು ದೊಡ್ಡ ಶ್ರೀಮಂತ, ದೊಡ್ಡ ಕುಟುಂಬವುಳ್ಳ ವನಾಗಿದ್ದೇನೆ, ನನ್ನ ಸಮಾನವಾಗಿ ಬೇರೆಯವರು ಯಾರಿದ್ದಾರೆ? ನಾನು ಯಜ್ಞವನ್ನು ಮಾಡುವೆನು; ದಾನವನ್ನು ಕೊಡುವೆನು ಮತ್ತು ಆಮೋದ-ಪ್ರಮೋದ ಮಾಡುವೆನು. - ಈ ಪ್ರಕಾರ ವಾಗಿ ಅಜ್ಞಾನದಿಂದ ಮೋಹಿತರಾಗಿರುವ ಹಾಗೂ ಅನೇಕ

ಪ್ರಕಾರದಿಂದ ಭ್ರಮಿತ ಚಿತ್ತವುಳ್ಳವರು, ಮೋಹರೂಪೀ ಜಾಲದಲ್ಲಿ ಸಿಕ್ಕಿಹಾಕಿಕೊಂಡು ಮತ್ತು ವಿಷಯ ಭೋಗಗಳಲ್ಲಿ ಅತ್ಯಂತ ಆಸಕ್ತರಾದ ಅಸುರರು, ಮಹಾನ್ ಅಪವಿತ್ರ ನರಕದಲ್ಲಿ ಬೀಳುತ್ತಾರೆ. ॥ ೧೫ - ೧೬ ॥

**ಆತ್ಮಸಂಭಾವಿತಾಃ ಸ್ತಬ್ಧಾ ಧನಮಾನಮದಾನ್ವಿತಾಃ ।**
**ಯಜಂತೇ ನಾಮಯಜ್ಞೈಸ್ತೇ ದಂಭೇನಾವಿಧಿಪೂರ್ವಕಮ್ ॥**

ತಾವು - ತಮ್ಮನ್ನೇ ಶ್ರೇಷ್ಠರೆಂದು ತಿಳಿದ ಆ ಅಹಂಕಾರೀ ಪುರುಷರು ಧನ ಮತ್ತು ಮಾನದ ಮದದಿಂದ ಕೂಡಿದವರಾಗಿ ಕೇವಲ ಹೆಸರಿಗೆ ಮಾತ್ರ ಯಜ್ಞಗಳ ಮೂಲಕ ಪಾಖಂಡತೆಯಿಂದ ಶಾಸ್ತ್ರವಿಧಿರಹಿತವಾದ ಯಜ್ಞವನ್ನು ಮಾಡುತ್ತಾರೆ.

**ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಚ ಸಂಶ್ರಿತಾಃ।**
**ಮಾಮಾತ್ಮಪರದೇಹೇಷು ಪ್ರದ್ವಿಷಂತೋಽಭ್ಯಸೂಯಕಾಃ ॥**

ಅವರು ಅಹಂಕಾರ, ಬಲ, ದರ್ಪ, ಕಾಮನೆ ಮತ್ತು ಕ್ರೋಧವೇ ಮೊದಲಾದವುಗಳ ಪರಾಯಣರಾಗಿರುತ್ತಾರೆ. ಇಷ್ಟೇ ಅಲ್ಲ ಇನ್ನೂ ಅನಾಚಾರದಲ್ಲಿ ನಿರತರಾಗಿದ್ದು ಮತ್ತು ಇತರರನ್ನು ನಿಂದಿಸುತ್ತ ತಮ್ಮ ಮತ್ತು ಇತರರ ಶರೀರದಲ್ಲಿ ಸ್ಥಿತನಾಗಿರುವ ಅಂತರ್ಯಾಮಿಯಾಗಿರುವ ನನ್ನೊಡನೆ ದ್ವೇಷ ಮಾಡುತ್ತಾರೆ. ॥ ೧೮॥

**ತಾನಹಂ ದ್ವಿಷತಃ ಕ್ರೂರಾನ್ಸಂಸಾರೇಷು ನರಾಧಮಾನ್।**
**ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವ ಯೋನಿಷು ॥ ೧೯॥**

ಆ ದ್ವೇಷಮಾಡುವ ಪಾಪಾಚಾರಿಗಳೂ ಮತ್ತು ಕ್ರೂರ ಕರ್ಮಿಗಳೂ ಆದ ನರಾಧಮರನ್ನು ನಾನು ಪ್ರಪಂಚದಲ್ಲಿ ಪದೇ ಪದೇ ಆಸುರೀ ಯೋನಿಗಳಲ್ಲಿಯೇ ಹಾಕುತ್ತೇನೆ. ॥ ೧೯॥

**ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿ ಜನ್ಮನಿ ।**
**ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ ಗತಿಮ್**

ಹೇ ಅರ್ಜುನಾ! ಆ ಮೂಢರು ನನ್ನನ್ನು ಪಡೆಯದೆ ಜನ್ಮ-ಜನ್ಮಗಳಲ್ಲಿ ಆಸುರೀ ಯೋನಿಯನ್ನು ಪಡೆಯುತ್ತಾರೆ. ಅನಂತರ ಅದಕ್ಕಿಂತಲೂ ಕೂಡ ಅತಿ ನೀಚ ಗತಿಯನ್ನೇ ಪಡೆಯುತ್ತಾರೆ ಅಂದರೆ ಘೋರವಾದ ನರಕದಲ್ಲಿ ಬೀಳುತ್ತಾರೆ. ॥ ೨೦॥

**ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ ।**
**ಕಾಮಃ ಕ್ರೋಧಸ್ತಥಾ ಲೋಭಸ್ತಸ್ಮಾದೇತತ್ತ್ರಯಂ ತ್ಯಜೇತ್ ॥**

ಕಾಮ, ಕ್ರೋಧ ಹಾಗೂ ಲೋಭ ಇವು ಮೂರು ಪ್ರಕಾರವಾದ ನರಕದ ದ್ವಾರಗಳು. ಆತ್ಮನನ್ನು ನಾಶಮಾಡುವ ಅರ್ಥಾತ್ ಅವನನ್ನು ಅಧೋಗತಿಗೆ ಕೊಂಡೊಯ್ಯುವಂತಹುವುಗಳಾಗಿವೆ. ಆದುದರಿಂದ ಈ ಮೂರನ್ನೂ ತ್ಯಜಿಸಿಬಿಡಬೇಕು.

**ಏತೈರ್ವಿಮುಕ್ತಃ ಕೌಂತೇಯ ತಮೋದ್ವಾರೈಸ್ತ್ರಿಭಿರ್ನರಃ ।**
**ಆಚರತ್ಯಾತ್ಮನಃ ಶ್ರೇಯಸ್ತತೋ ಯಾತಿ ಪರಾಂ ಗತಿಮ್ ॥ ೨೨॥**

ಹೇ ಅರ್ಜುನಾ! ಈ ಮೂರೂ ನರಕದ ದ್ವಾರಗಳಿಂದ ಮುಕ್ತನಾದ ಪುರುಷನು ತನ್ನ ಶ್ರೇಯಸ್ಸಿಗಾಗಿ ಆಚರಣೆಯನ್ನು

ಮಾಡುತ್ತಾನೆ, ಆದರಿಂದ ಅವನು ಪರಮ ಗತಿಗೆ ಹೋಗುತ್ತಾನೆ ಅರ್ಥಾತ್ ನನ್ನನ್ನು ಪಡೆಯುತ್ತಾನೆ. ॥ ೨೨॥

**ಯಃ ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ।**
**ನ ಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂ ಗತಿಮ್**

ಯಾವ ಪುರುಷನು ಶಾಸ್ತ್ರವಿಧಿಯನ್ನು ತ್ಯಜಿಸಿ ತನ್ನ ಇಚ್ಛೆಯಿಂದ ಮನಬಂದಂತೆ ಆಚರಣೆ ಮಾಡುತ್ತಾನೋ ಅವನು ಸಿದ್ಧಿಯನ್ನು ಪಡೆಯುವುದಿಲ್ಲ, ಪರಮಗತಿಯನ್ನೂ ಪಡೆಯುವುದಿಲ್ಲ ಮತ್ತು ಸುಖವನ್ನೂ ಹೊಂದುವುದಿಲ್ಲ. ॥ ೨೩॥

**ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯವ್ಯವಸ್ಥಿತೌ ।**
**ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ ಕರ್ಮ ಕರ್ತುಮಿಹಾರ್ಹಸಿ ॥ ೨೪॥**

ಆದ್ದರಿಂದ ನಿನಗಾಗಿ ಈ ಕರ್ತವ್ಯ ಮತ್ತು ಅಕರ್ತವ್ಯದ ವ್ಯವಸ್ಥೆಯಲ್ಲಿ ಶಾಸ್ತ್ರವೇ ಪ್ರಮಾಣವಾಗಿದೆ ಎಂದು ತಿಳಿದುಕೊಂಡು ನೀನು ಶಾಸ್ತ್ರವಿಧಿಯಿಂದ ನಿಯತ ಕರ್ಮವನ್ನೇ ಮಾಡಲು ಯೋಗ್ಯನಾಗಿರುವೆ. ॥ ೨೪॥

*ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು*
*ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ*
*ದೈವಾಸುರಸಂಪದ್ವಿಭಾಗಯೋಗೋ ನಾಮ*
*ಷೋಡಶೋಽಧ್ಯಾಯಃ ॥ ೧೬॥*



## ॥ ಅಥ ಸಪ್ತದಶೋಽಧ್ಯಾಯಃ ॥

## ಶ್ರದ್ಧಾತ್ರಯವಿಭಾಗಯೋಗವು

*ಅರ್ಜುನ ಉವಾಚ*

**ಯೇ ಶಾಸ್ತ್ರವಿಧಿಮುತ್ಸೃಜ್ಯ ಯಜಂತೇ ಶ್ರದ್ಧಯಾನ್ವಿತಾಃ ।**
**ತೇಷಾಂ ನಿಷ್ಠಾ ತು ಕಾ ಕೃಷ್ಣ ಸತ್ತ್ವಮಾಹೋ ರಜಸ್ತಮಃ ॥ ೧॥**

ಅರ್ಜುನನು ಹೇಳಿದನು – ಹೇ ಶ್ರೀಕೃಷ್ಣ! ಯಾವ ಮನುಷ್ಯರು ಶಾಸ್ತ್ರವಿಧಿಯನ್ನು ತ್ಯಾಗಮಾಡಿ ಶ್ರದ್ಧೆಯಿಂದ ಯುಕ್ತರಾಗಿ ದೇವತೆಗಳ ಪೂಜೆಯನ್ನು ಮಾಡುತ್ತಾರೆಯೋ ಅವರುಗಳ ಸ್ಥಿತಿಯು ಎಂತಹುದು? ಸಾತ್ತ್ವಿಕವೋ, ರಾಜಸವೋ ಅಥವಾ ತಾಮಸವೋ? ॥ ೧॥

*ಶ್ರೀಭಗವಾನುವಾಚ*

**ತ್ರಿವಿಧಾ ಭವತಿ ಶ್ರದ್ಧಾ ದೇಹಿನಾಂ ಸಾ ಸ್ವಭಾವಜಾ ।**
**ಸಾತ್ತ್ವಿಕೀ ರಾಜಸೀ ಚೈವ ತಾಮಸೀ ಚೇತಿ ತಾಂ ಶೃಣು ॥ ೨॥**

ಶ್ರೀಭಗವಂತನು ಹೇಳಿದನು – ಮನುಷ್ಯರ ಶಾಸ್ತ್ರೀಯ ಸಂಸ್ಕಾರಗಳಿಂದ ರಹಿತವಾದ ಕೇವಲ ಸ್ವಭಾವದಿಂದ ಉತ್ಪನ್ನವಾದ ಆ ಶ್ರದ್ಧೆಯು ಸಾತ್ತ್ವಿಕ, ರಾಜಸ ಹಾಗೂ ತಾಮಸ ಹೀಗೆ ಮೂರು ಪ್ರಕಾರದ್ದಾಗಿಯೇ ಇರುತ್ತದೆ. ಅದನ್ನು ನೀನು ನನ್ನಿಂದ ಕೇಳು. ॥ ೨॥

**ಸತ್ತ್ವಾನುರೂಪಾ ಸರ್ವಸ್ಯ ಶ್ರದ್ಧಾ ಭವತಿ ಭಾರತ ।**
**ಶ್ರದ್ಧಾಮಯೋಽಯಂ ಪುರುಷೋ ಯೋ ಯಚ್ಛ್ರದ್ಧಃ ಸ ಏವ ಸಃ**

ಹೇ ಅರ್ಜುನಾ! ಎಲ್ಲಾ ಮನುಷ್ಯರ ಶ್ರದ್ಧೆಯು ಅವರವರ ಅಂತಃಕರಣಕ್ಕೆ ಅನುರೂಪವಾಗಿ ಇರುತ್ತದೆ. ಈ ಪುರುಷನು ಶ್ರದ್ಧಾಮಯನಾಗಿದ್ದಾನೆ. ಆದ್ದರಿಂದ ಯಾವ ಪುರುಷನು ಎಂತಹ ಶ್ರದ್ಧೆಯುಳ್ಳವನೋ ಅವನು ಕೂಡ ಅದೇ ಸ್ವಭಾವದವನಾಗಿದ್ದಾನೆ. ॥ ३॥

**ಯಜಂತೇ ಸಾತ್ತ್ವಿಕಾ ದೇವಾನ್‌ಯಕ್ಷರಕ್ಷಾಂಸಿ ರಾಜಸಾಃ ।**
**ಪ್ರೇತಾನ್ಭೂತಗಣಾಂಶ್ಚಾನ್ಯೇ ಯಜಂತೇ ತಾಮಸಾ ಜನಾಃ ॥ ४॥**

ಸಾತ್ತ್ವಿಕ ಪುರುಷರು ದೇವತೆಗಳನ್ನು ಪೂಜಿಸುತ್ತಾರೆ, ರಾಜಸ ಪುರುಷರು ಯಕ್ಷ ಮತ್ತು ರಾಕ್ಷಸರನ್ನು ಹಾಗೂ ಬೇರೆ ತಾಮಸ ಮನುಷ್ಯರು ಪ್ರೇತ ಮತ್ತು ಭೂತಗಣಗಳನ್ನು ಪೂಜಿಸುತ್ತಾರೆ. ॥ ४॥

**ಅಶಾಸ್ತ್ರವಿಹಿತಂ ಘೋರಂ ತಪ್ಯಂತೇ ಯೇ ತಪೋ ಜನಾಃ।**
**ದಂಭಾಹಂಕಾರಸಂಯುಕ್ತಾಃ ಕಾಮರಾಗಬಲಾನ್ವಿತಾಃ ॥ ५॥**

ಯಾವ ಮನುಷ್ಯರು ಶಾಸ್ತ್ರವಿಧಿಯಿಂದ ರಹಿತವಾಗಿ ಕೇವಲ ಮನಃಕಲ್ಪಿತವಾದ ಘೋರ ತಪಸ್ಸನ್ನು ಆಚರಿಸುತ್ತಾರೋ ಹಾಗೂ ದಂಭ ಮತ್ತು ಅಹಂಕಾರದಿಂದ ಕೂಡಿದವರಾಗಿ, ಕಾಮನೆ– ಆಸಕ್ತಿ ಮತ್ತು ಬಲದ ಅಭಿಮಾನದಿಂದಲೂ ಕೂಡಿದವರಾಗಿದ್ದಾರೆ. – ॥ ५॥

**ಕರ್ಶಯಂತಃ ಶರೀರಸ್ಥಂ ಭೂತಗ್ರಾಮಮಚೇ**
**ಮಾಂ ಚೈವಾಂತಃಶರೀರಸ್ಥಂ ತಾನ್ವಿದ್ಧ್ಯಾಸುರನಿಶ್ಚಯ**

ಹಾಗೂ ಯಾರು ಶರೀರ ರೂಪದಿಂದ ಸ್ಥಿತವಾದ ಸಮುದಾಯವನ್ನು ಮತ್ತು ಅಂತಃಕರಣದಲ್ಲಿ ಸ್ಥಿತ ಪರ ನಾದ ನನ್ನನ್ನು ಕೂಡ ಕೃಶಗೊಳಿಸುವವರಾಗಿದ್ದಾರೋ ಆ ಅ ಗಳನ್ನು ನೀನು ಆಸುರೀ ಸ್ವಭಾವದವರೆಂದು ತಿಳಿ. ॥

**ಆಹಾರಸ್ತ್ವಪಿ ಸರ್ವಸ್ಯ ತ್ರಿವಿಧೋ ಭವತಿ ಪ್ರಿ**
**ಯಜ್ಞಸ್ತಪಸ್ತಥಾ ದಾನಂ ತೇಷಾಂ ಭೇದಮಿಮಂ ಶೃಣು ।**

ಭೋಜನವೂ ಕೂಡ ಎಲ್ಲರಿಗೂ ತಮ್ಮ ತಮ್ಮ ಪ್ರ ಅನುಗುಣವಾಗಿ ಮೂರು ಪ್ರಕಾರವಾಗಿ ಪ್ರಿಯವಾಗಿ ಮತ್ತು ಹಾಗೆಯೇ ಯಜ್ಞ, ತಪಸ್ಸು ಮತ್ತು ದಾನವೂ ಮೂರು-ಮೂರು ಪ್ರಕಾರದಿಂದಿರುತ್ತವೆ. ಅವುಗಳ ಬೇರೆ-ಬೇರೆಯಾದ ಭೇದವನ್ನು ನೀನು ನನ್ನಿಂದ ಕೇಳು. ।

**ಆಯುಃಸತ್ತ್ವಬಲಾರೋಗ್ಯಸುಖಪ್ರೀತಿವಿವರ್ಧನಾಃ**
**ರಸ್ಯಾಃ ಸ್ನಿಗ್ಧಾಃ ಸ್ಥಿರಾ ಹೃದ್ಯಾ ಆಹಾರಾಃ ಸಾತ್ತ್ವಿಕಪ್ರಿಯಾಃ ।**

ಆಯುಸ್ಸು, ಬುದ್ಧಿ, ಬಲ, ಆರೋಗ್ಯ, ಸುಖ ಪ್ರೀತಿಯನ್ನು ಹೆಚ್ಚಿಸುವ, ರಸಯುಕ್ತ, ಸ್ನೇಹಯುಕ್ತ ಸ್ಥಿರವಾಗಿರುವ ಹಾಗೂ ಸ್ವಭಾವದಿಂದಲೇ ಮ ಪ್ರಿಯವಾದಂತಹ ಆಹಾರ ಅರ್ಥಾತ್ ಭೋಜನ ಮಾ ಪದಾರ್ಥಗಳು, ಸಾತ್ತ್ವಿಕ ಪುರುಷನಿಗೆ ಪ್ರಿಯವಾಗಿರು

**ಕಟ್ವಮ್ಲಲವಣಾತ್ಯುಷ್ಣತೀಕ್ಷ್ಣರೂಕ್ಷವಿದಾಹಿನಃ ।**
**ಆಹಾರಾ ರಾಜಸಸ್ಯೇಷ್ಟಾ ದುಃಖಶೋಕಾಮಯಪ್ರದಾಃ ॥**

ಕಹಿಯಾದ, ಹುಳಿಯಾದ, ಹೆಚ್ಚು ಉಪ್ಪಿನಿಂದ ಕೂಡಿದ, ಹೆಚ್ಚು ಬಿಸಿ ಮತ್ತು ಖಾರವಾದ, ಹುರಿದಿರುವ, ಉರಿಯನ್ನುಂಟು ಮಾಡುವ ಮತ್ತು ದುಃಖ, ಚಿಂತೆ ಹಾಗೂ ರೋಗಗಳನ್ನುಂಟು ಮಾಡುವ ಆಹಾರ ಅರ್ಥಾತ್ ಭೋಜನ ಪದಾರ್ಥಗಳು ರಾಜಸ ಪುರುಷನಿಗೆ ಪ್ರಿಯವಾಗಿರುತ್ತವೆ. ॥ ೯॥

**ಯಾತಯಾಮಂ ಗತರಸಂ ಪೂತಿ ಪರ್ಯುಷಿತಂ ಚ ಯತ್ ।**
**ಉಚ್ಛಿಷ್ಟಮಪಿ ಚಾಮೇಧ್ಯಂ ಭೋಜನಂ ತಾಮಸಪ್ರಿಯಮ್ ॥**

ಯಾವ ಭೋಜನವು ಅರ್ಧ ಬೆಂದಿದೆಯೋ, ರಸರಹಿತವಾಗಿದೆಯೋ, ದುರ್ಗಂಧಯುಕ್ತವಾದುದೋ, ಹಳಸಿದೆಯೋ, ಎಂಜಲಾಗಿದೆಯೋ ಹಾಗೂ ಅಪವಿತ್ರವೂ ಕೂಡ ಆಗಿದೆಯೋ ಆ ಭೋಜನವು ತಾಮಸ ಪುರುಷನಿಗೆ ಪ್ರಿಯವಾಗಿರುತ್ತದೆ.

**ಅಫಲಾಕಾಂಕ್ಷಿಭಿರ್ಯಜ್ಞೋ ವಿಧಿದೃಷ್ಟೋ ಯ ಇಜ್ಯತೇ।**
**ಯಷ್ಟವ್ಯಮೇವೇತಿ ಮನಃ ಸಮಾಧಾಯ ಸ ಸಾತ್ತ್ವಿಕಃ ॥ ೧೧॥**

ಶಾಸ್ತ್ರವಿಧಿಯಿಂದ ನಿಯತವಾದ ಯಾವ ಯಜ್ಞವು ಮಾಡಲೇಬೇಕಾದ ಕರ್ತವ್ಯವಾಗಿದೆ – ಈ ಪ್ರಕಾರವಾಗಿ ಮನಸ್ಸಿನಲ್ಲಿ ನಿಶ್ಚಯಮಾಡಿಕೊಂಡು ಫಲವನ್ನು ಬಯಸದ ಪುರುಷರ ಮೂಲಕ ಮಾಡಲ್ಪಡುತ್ತದೋ ಅದು ಸಾತ್ತ್ವಿಕವಾಗಿದೆ. ॥ ೧೧॥

**ಅಭಿಸಂಧಾಯ ತು ಫಲಂ ದಂಭಾರ್ಥಮಪಿ ಚೈವ ಯ**
**ಇಜ್ಯತೇ ಭರತಶ್ರೇಷ್ಠ ತಂ ಯಜ್ಞಂ ವಿದ್ಧಿ ರಾಜಸಮ್ ॥**

ಆದರೆ ಹೇ ಅರ್ಜುನಾ! ಕೇವಲ ದಂಭಾ ಗಾಗಿಯೇ ಅಥವಾ ಫಲವನ್ನು ಕೂಡ ದೃಷ್ಟಿಯಲ್ಲಿಟ್ಟುಕೊ ಯಾವ ಯಜ್ಞವು ಮಾಡಲಾಗುತ್ತದೆಯೋ ಆ ಯಜ್ಞ ನೀನು ರಾಜಸವೆಂದು ತಿಳಿ. ॥ ೧೨॥

**ವಿಧಿಹೀನಮಸೃಷ್ಟಾನ್ನಂ ಮಂತ್ರಹೀನಮದಕ್ಷಿಣಮ**
**ಶ್ರದ್ಧಾವಿರಹಿತಂ ಯಜ್ಞಂ ತಾಮಸಂ ಪರಿಚಕ್ಷತೇ ॥**

ಶಾಸ್ತ್ರವಿಧಿಯಿಲ್ಲದೆ, ಅನ್ನದಾನರಹಿತವಾದ, ಮಂತ್ರಗ ದಕ್ಷಿಣೆಯಿಲ್ಲದ ಮತ್ತು ಶ್ರದ್ಧೆಯಿಲ್ಲದೆ ಮಾಡಲ್ಪಡುವ ವನ್ನು ತಾಮಸ ಯಜ್ಞವೆಂದು ಹೇಳುತ್ತಾರೆ. ॥ ೧೩॥

**ದೇವದ್ವಿಜಗುರುಪ್ರಾಜ್ಞಪೂಜನಂ ಶೌಚಮಾರ್ಜವ**
**ಬ್ರಹ್ಮಚರ್ಯಮಹಿಂಸಾ ಚ ಶಾರೀರಂ ತಪ ಉಚ್ಯ**

ದೇವತೆಗಳ, ಬ್ರಾಹ್ಮಣರ, ಗುರುಗಳ ಮತ್ತು ಜ್ಞಾನಿ ಪೂಜೆ, ಪವಿತ್ರತೆ, ಸರಳತೆ, ಬ್ರಹ್ಮಚರ್ಯ ಮತ್ತು ಅಹಿ ಇವು ಶರೀರ ಸಂಬಂಧವಾದ ತಪಸ್ಸು ಎಂದು ಹೇಳಲಾಗ

**ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ**
**ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಯತೇ ॥**

ಯಾವುದು ಉದ್ವೇಗಗೊಳಿಸುವುದಿಲ್ಲವೋ, ವಾಗಿಯೂ, ಹಿತಕರವಾಗಿಯೂ ಮತ್ತು ಯಥಾರ್ಥ

ಭಾಷಣವಾಗಿದೆಯೋ ಹಾಗೂ ಯಾವುದು ವೇದಶಾಸ್ತ್ರಗಳ ಪಠಣದ, ಹಾಗೂ ಪರಮೇಶ್ವರನ ನಾಮ-ಜಪದ ಅಭ್ಯಾಸ ವಿದೆಯೋ ಅದನ್ನೇ ವಾಣೀ ಸಂಬಂಧವಾದ ತಪಸ್ಸೆಂದು ಹೇಳಲಾಗುತ್ತದೆ. ॥ ೧೫॥

**ಮನಃಪ್ರಸಾದಃ ಸೌಮ್ಯತ್ವಂ ಮೌನಮಾತ್ಮವಿನಿಗ್ರಹಃ ।**
**ಭಾವಸಂಶುದ್ಧಿರಿತ್ಯೇತತ್ತಪೋ ಮಾನಸಮುಚ್ಯತೇ ॥ ೧೬॥**

ಮನಸ್ಸಿನ ಪ್ರಸನ್ನತೆ, ಶಾಂತ ಭಾವ, ಭಗವಂತನ ಚಿಂತನೆ ಮಾಡುವ ಸ್ವಭಾವ, ಮನದ ನಿಗ್ರಹ ಮತ್ತು ಅಂತಃಕರಣದ ಭಾವಗಳ ಪವಿತ್ರತೆ - ಈ ಪ್ರಕಾರ ಇದು ಮನಸ್ಸಿಗೆ ಸಂಬಂಧ ಪಟ್ಟ ತಪವೆಂದು ಹೇಳಲಾಗುತ್ತದೆ. ॥ ೧೬॥

**ಶ್ರದ್ಧಯಾ ಪರಯಾ ತಪ್ತಂ ತಪಸ್ತತ್ತ್ರಿವಿಧಂ ನರೈಃ ।**
**ಅಫಲಾಕಾಂಕ್ಷಿಭಿರ್ಯುಕ್ತೈಃ ಸಾತ್ತ್ವಿಕಂ ಪರಿಚಕ್ಷತೇ ॥ ೧೭॥**

ಫಲವನ್ನು ಇಚ್ಛಿಸದಿರುವ ಯೋಗೀ ಪುರುಷರ ಮೂಲಕ, ಪರಮ ಶ್ರದ್ಧೆಯಿಂದ ಮಾಡಲ್ಪಟ್ಟ ಈ ಹಿಂದೆ ಹೇಳಿದ ಮೂರೂ ಪ್ರಕಾರದ (ಕಾಯಿಕ, ವಾಚಿಕ, ಮಾನಸಿಕ) ತಪವನ್ನು ಸಾತ್ತ್ವಿಕವೆಂದು ಹೇಳುತ್ತಾರೆ. ॥ ೧೭॥

**ಸತ್ಕಾರಮಾನಪೂಜಾರ್ಥಂ ತಪೋ ದಂಭೇನ ಚೈವ ಯತ್**
**ಕ್ರಿಯತೇ ತದಿಹ ಪ್ರೋಕ್ತಂ ರಾಜಸಂ ಚಲಮಧ್ರುವಮ್ ॥ ೧೮॥**

ಯಾವ ತಪವು ಸತ್ಕಾರ, ಮಾನ ಮತ್ತು ಪೂಜೆಗೋಸ್ಕರ ಹಾಗೂ ಬೇರೆ ಯಾವುದಾದರೂ ಸ್ವಾರ್ಥಕ್ಕಾಗಿ, ಸ್ವಭಾವ

ದಿಂದಾಗಿ ಅಥವಾ ದಂಭದಿಂದ ಮಾಡಲಾಗುತ್ತದೆಯೋ ಆ
ಅನಿಶ್ಚಿತ ಹಾಗೂ ಕ್ಷಣಿಕವಾದ ಫಲವುಳ್ಳ ತಪವನ್ನು ಇಲ್ಲಿ
ರಾಜಸವೆಂದು ಹೇಳಲಾಗಿದೆ. ॥ ೧೮॥

**ಮೂಢಗ್ರಾಹೇಣಾತ್ಮನೋ ಯತ್ಪೀಡಯಾ ಕ್ರಿಯತೇ ತಪಃ ।**
**ಪರಸ್ಯೋತ್ಸಾದನಾರ್ಥಂ ವಾ ತತ್ತಾಮಸಮುದಾಹೃತಮ್ ॥**

ಯಾವ ತಪವು ಮೂಢತೆಯಿಂದೊಡಗೂಡ ಹಠದಿಂದ, ಮನಸ್ಸು, ವಾಣಿ ಮತ್ತು ಶರೀರದ ಪೀಡೆಯ ಸಹಿತವಾಗಿ ಅಥವಾ ಬೇರೊಬ್ಬರಿಗೆ ಅನಿಷ್ಟ ಮಾಡುವುದಕ್ಕೆ ಮಾಡಲಾಗುತ್ತದೆಯೋ ಆ ತಪವು ತಾಮಸವೆಂದು ಹೇಳಲಾಗಿದೆ. ॥ ೧೯॥

**ದಾತವ್ಯಮಿತಿ ಯದ್ದಾನಂ ದೀಯತೇಽನುಪಕಾರಿಣೇ**
**ದೇಶೇ ಕಾಲೇ ಚ ಪಾತ್ರೇ ಚ ತದ್ದಾನಂ ಸಾತ್ತ್ವಿಕಂ ಸ್ಮೃತಮ್**

ದಾನಕೊಡುವುದೇ ತನ್ನ ಕರ್ತವ್ಯವಾಗಿದೆ ಎಂದು ತಿಳಿದುಕೊಂಡು ಯಾವ ದಾನವು ದೇಶ, ಕಾಲ ಮತ್ತು ಪಾತ್ರನ ಪ್ರಾಪ್ತವಾದಾಗ ಪ್ರತ್ಯುಪಕಾರವನ್ನು ಬಯಸದೆ ನಿಷ್ಕಾಮ ಭಾವದಿಂದ ಕೊಡಲಾಗುವುದೋ ಆ ದಾನವನ್ನು ಸಾತ್ತ್ವಿ ವೆಂದು ಹೇಳಲಾಗಿದೆ. ॥ ೨೦॥

**ಯತ್ತು ಪ್ರತ್ಯುಪಕಾರಾರ್ಥಂ ಫಲಮುದ್ದಿಶ್ಯ ವಾ ಪುನ**
**ದೀಯತೇ ಚ ಪರಿಕ್ಲಿಷ್ಟಂ ತದ್ದಾನಂ ರಾಜಸಂ ಸ್ಮೃತಮ್ ॥ ೨೧**

ಆದರೆ ಯಾವ ದಾನವು ಕ್ಲೇಶಪೂರ್ವಕವಾಗಿ ಹಾಗೂ ಪ್ರತ್ಯುಪಕಾರದ ಪ್ರಯೋಜನದಿಂದ ಅಥವಾ ಫಲವನ್ನು ದೃಷ್ಟಿಯಲ್ಲಿಟ್ಟುಕೊಂಡು ಕೊಡಲಾಗುತ್ತದೆಯೋ, ಆ ದಾನವು ರಾಜಸವೆಂದು ಹೇಳಲಾಗಿದೆ. ॥ ೨೧॥

**ಅದೇಶಕಾಲೇ ಯದ್ದಾನಮಪಾತ್ರೇಭ್ಯಶ್ಚ ದೀಯತೇ ।**
**ಅಸತ್ಕೃತಮವಜ್ಞಾತಂ ತತ್ತಾಮಸಮುದಾಹೃತಮ್ ॥ ೨೨॥**

ಯಾವ ದಾನವು ಸತ್ಕಾರವಿಲ್ಲದೆ ಅಥವಾ ತಿರಸ್ಕಾರ ಪೂರ್ವಕವಾಗಿ, ಅಯೋಗ್ಯ ದೇಶ-ಕಾಲದಲ್ಲಿ ಮತ್ತು ಕುಪಾತ್ರನಿಗೆ ಕೊಡಲಾಗುತ್ತದೆಯೋ ಆ ದಾನವು ತಾಮಸವೆಂದು ಹೇಳಲಾಗಿದೆ. ॥ ೨೨॥

**ಓಂ ತತ್ಸದಿತಿ ನಿರ್ದೇಶೋ ಬ್ರಹ್ಮಣಸ್ತ್ರಿವಿಧಃ ಸ್ಮೃತಃ ।**
**ಬ್ರಾಹ್ಮಣಾಸ್ತೇನ ವೇದಾಶ್ಚ ಯಜ್ಞಾಶ್ಚ ವಿಹಿತಾಃ ಪುರಾ**

ಓಂ, ತತ್, ಸತ್ - ಹೀಗೆ ಈ ಮೂರು ಪ್ರಕಾರದ ಹೆಸರುಗಳು ಓರ್ವ ಸಚ್ಚಿದಾನಂದಘನಬ್ರಹ್ಮನದ್ದೇ ಆಗಿವೆ. ಅವನಿಂದಲೇ ಸೃಷ್ಟಿಯ ಆದಿಕಾಲದಲ್ಲಿ ಬ್ರಾಹ್ಮಣರು, ವೇದಗಳು ಹಾಗೂ ಯಜ್ಞಾದಿಗಳು ರಚಿಸಲ್ಪಟ್ಟವು. ॥ ೨೩॥

**ತಸ್ಮಾದೋಮಿತ್ಯುದಾಹೃತ್ಯ ಯಜ್ಞದಾನತಪಃಕ್ರಿಯಾಃ ।**
**ಪ್ರವರ್ತಂತೇ ವಿಧಾನೋಕ್ತಾಃ ಸತತಂ ಬ್ರಹ್ಮವಾದಿನಾಮ್ ॥**

ಆದ್ದರಿಂದ ವೇದಮಂತ್ರಗಳನ್ನು ಉಚ್ಚರಿಸುವ ಶ್ರೇಷ್ಠ ಪುರುಷರ ಶಾಸ್ತ್ರವಿಧಿಯಿಂದ ನಿಯತವಾದ ಯಜ್ಞ ದಾನ ಮತ್ತು ತಪೋರೂಪವಾದ ಕ್ರಿಯೆಗಳು, ಸದಾ ಓಂ - ಎಂಬ ಈ ಪರಮಾತ್ಮನ ಹೆಸರನ್ನು ಉಚ್ಚಾರಣೆ ಮಾಡಿಯೇ ಆರಂಭ ವಾಗುತ್ತವೆ. ॥ ೨೪॥

**ತದಿತ್ಯನಭಿಸಂಧಾಯ ಫಲಂ ಯಜ್ಞತಪಃಕ್ರಿಯಾಃ ।**
**ದಾನಕ್ರಿಯಾಶ್ಚ ವಿವಿಧಾಃ ಕ್ರಿಯಂತೇ ಮೋಕ್ಷಕಾಂಕ್ಷಿಭಿಃ ॥ ೨೫॥**

ತತ್ ಅರ್ಥಾತ್ 'ತತ್' ಎಂಬ ಹೆಸರಿನಿಂದ ಹೇಳಲಾಗುವ ಪರಮಾತ್ಮನದ್ದೇ ಇದೆಲ್ಲವೂ ಆಗಿದೆ - ಎಂಬ ಈ ಭಾವದಿಂದ ಫಲವನ್ನು ಬಯಸದ ನಾನಾಪ್ರಕಾರದ ಯಜ್ಞ ತಪೋರೂಪೀ ಕ್ರಿಯೆಗಳು ಹಾಗೂ ದಾನರೂಪೀ ಕ್ರಿಯೆಗಳು ಶ್ರೇಯಸ್ಸಿನ ಇಚ್ಛೆಯುಳ್ಳ ಪುರುಷರ ಮೂಲಕ ಮಾಡಲ್ಪಡುತ್ತವೆ. ॥ ೨೫॥

**ಸದ್ಭಾವೇ ಸಾಧುಭಾವೇ ಚ ಸದಿತ್ಯೇತತ್ಪ್ರಯುಜ್ಯತೇ ।**
**ಪ್ರಶಸ್ತೇ ಕರ್ಮಣಿ ತಥಾ ಸಚ್ಛಬ್ದಃ ಪಾರ್ಥ ಯುಜ್ಯತೇ ॥ ೨೬॥**

'ಸತ್' ಎಂಬುದು ಪರಮಾತ್ಮನ ಹೆಸರು ಸತ್ಯಭಾವದಲ್ಲಿ ಮತ್ತು ಶ್ರೇಷ್ಠಭಾವದಲ್ಲಿ ಪ್ರಯೋಗಿಸಲ್ಪಡುತ್ತದೆ ಹಾಗೂ ಹೇ ಪಾರ್ಥನೇ! ಉತ್ತಮವಾದ ಕರ್ಮದಲ್ಲಿಯೂ ಸಹ 'ಸತ್' ಶಬ್ದದ ಪ್ರಯೋಗ ಮಾಡಲಾಗುತ್ತದೆ. ॥ ೨೬॥

**ಯಜ್ಞೇ ತಪಸಿ ದಾನೇ ಚ ಸ್ಥಿತಿಃ ಸದಿತಿ ಚೋಚ್ಯತೇ।**
**ಕರ್ಮ ಚೈವ ತದರ್ಥೀಯಂ ಸದಿತ್ಯೇವಾಭಿಧೀಯತೇ ॥ ೨೭॥**

ಹಾಗೂ ಯಜ್ಞ, ತಪಸ್ಸು ಮತ್ತು ದಾನದಲ್ಲಿ ಯಾವ ಸ್ಥಿತಿಯಿದೆಯೋ ಅದನ್ನು ಕೂಡ 'ಸತ್' ಎಂದು ಹೇಳಲಾಗುತ್ತದೆ ಮತ್ತು ಆ ಪರಮಾತ್ಮನಿಗಾಗಿ ಮಾಡಲಾದ ಕರ್ಮವು ನಿಶ್ಚಯಪೂರ್ವಕವಾಗಿ 'ಸತ್' ಎಂದು ಹೇಳಲಾಗುತ್ತದೆ.

**ಅಶ್ರದ್ಧಯಾ ಹುತಂ ದತ್ತಂ ತಪಸ್ತಪ್ತಂ ಕೃತಂ ಚ ಯತ್ ।**
**ಅಸದಿತ್ಯುಚ್ಯತೇ ಪಾರ್ಥ ನ ಚ ತತ್ಪ್ರೇತ್ಯ ನೋ ಇಹ ॥ ೨೮॥**

ಹೇ ಅರ್ಜುನಾ! ಶ್ರದ್ಧೆಯಿಲ್ಲದೆ ಮಾಡಲಾದ ಹವನವು, ಕೊಡಲಾದ ದಾನ ಹಾಗೂ ತಪಿಸಿದ ತಪವು ಮತ್ತು ಯಾವುದಾದರೂ ಮಾಡಲ್ಪಟ್ಟ ಶುಭಕರ್ಮಗಳಿವೆಯೋ ಆ ಸಮಸ್ತವು 'ಅಸತ್ತು' ಎಂದು ಹೇಳಲಾಗುತ್ತದೆ. ಆದ್ದರಿಂದ ಅದು ಈ ಲೋಕದಲ್ಲಾಗಲೀ, ಸತ್ತನಂತರವೇ ಆಗಲಿ ಲಾಭದಾಯಕವಲ್ಲ. ॥ ೨೮॥

*ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ಶ್ರದ್ಧಾತ್ರಯವಿಭಾಗ ಯೋಗೋ ನಾಮ ಸಪ್ತದಶೋऽಧ್ಯಾಯಃ ॥ ೧೭॥*



## ॥ ಅಥ ಅಷ್ಟಾದಶೋಽಧ್ಯಾಯಃ॥
## ಮೋಕ್ಷಸಂನ್ಯಾಸಯೋಗವು

### ಅರ್ಜುನ ಉವಾಚ

**ಸಂನ್ಯಾಸಸ್ಯ ಮಹಾಬಾಹೋ ತತ್ತ್ವಮಿಚ್ಛಾಮಿ ವೇದಿತುಮ್ ।**
**ತ್ಯಾಗಸ್ಯ ಚ ಹೃಷೀಕೇಶ ಪೃಥಕ್ಕೇಶಿನಿಷೂದನ ॥ ೧॥**

ಅರ್ಜುನನು ಹೇಳಿದನು – ಹೇ ಮಹಾಬಾಹುವೇ! ಹೇ ಅಂತರ್ಯಾಮಿಯೇ! ಹೇ ವಾಸುದೇವನೇ! ನಾನು ಸಂನ್ಯಾಸ ಮತ್ತು ತ್ಯಾಗದ ತತ್ತ್ವವನ್ನು ಬೇರೆ-ಬೇರೆಯಾಗಿ ತಿಳಿಯಲು ಬಯಸುತ್ತೇನೆ. ॥ ೧॥

### ಶ್ರೀಭಗವಾನುವಾಚ

**ಕಾಮ್ಯಾನಾಂ ಕರ್ಮಣಾಂ ನ್ಯಾಸಂ ಸಂನ್ಯಾಸಂ ಕವಯೋ ವಿದುಃ।**
**ಸರ್ವಕರ್ಮಫಲತ್ಯಾಗಂ ಪ್ರಾಹುಸ್ತ್ಯಾಗಂ ವಿಚಕ್ಷಣಾಃ ॥ ೨॥**

ಶ್ರೀಭಗವಂತನು ಹೇಳಿದನು – ಎಷ್ಟೋ ಪಂಡಿತಜನರು ಕಾಮ್ಯಕರ್ಮಗಳ ತ್ಯಾಗವನ್ನು ಸಂನ್ಯಾಸವೆಂದು ತಿಳಿಯುತ್ತಾರೆ ಹಾಗೂ ಇತರ ವಿಚಾರಶೀಲರಾದ ಪುರುಷರು ಎಲ್ಲಾ ಕರ್ಮಗಳ ಫಲತ್ಯಾಗವನ್ನು ತ್ಯಾಗವೆಂದು ಹೇಳುತ್ತಾರೆ. ॥ ೨॥

**ತ್ಯಾಜ್ಯಂ ದೋಷವದಿತ್ಯೇಕೇ ಕರ್ಮ ಪ್ರಾಹುರ್ಮನೀಷಿಣಃ ।**
**ಯಜ್ಞದಾನತಪಃಕರ್ಮ ನ ತ್ಯಾಜ್ಯಮಿತಿ ಚಾಪರೇ ॥ ೩॥**

ಕೆಲ ವಿದ್ವಾಂಸರು – ಎಲ್ಲಾ ಕರ್ಮಗಳು ದೋಷ ಯುಕ್ತವಾಗಿವೆ ಆದ್ದರಿಂದ ತ್ಯಜಿಸಲು ಯೋಗ್ಯವಾಗಿವೆ ಎಂದು ಹೇಳುತ್ತಾರೆ, ಮತ್ತು ಇತರ ವಿದ್ವಾಂಸರು - ಯಜ್ಞ, ದಾನ ಮತ್ತು ತಪರೂಪವಾದ ಕರ್ಮಗಳು ತ್ಯಜಿಸಲು ಯೋಗ್ಯ ವಾಗಿಲ್ಲ ಎಂದು ಹೇಳುತ್ತಾರೆ. ॥ ೩॥

**ನಿಶ್ಚಯಂ ಶೃಣು ಮೇ ತತ್ರ ತ್ಯಾಗೇ ಭರತಸತ್ತಮ ।**
**ತ್ಯಾಗೋ ಹಿ ಪುರುಷವ್ಯಾಘ್ರ ತ್ರಿವಿಧಃ ಸಂಪ್ರಕೀರ್ತಿತಃ ॥ ೪॥**

ಹೇ ಪುರುಷಶ್ರೇಷ್ಠನಾದ ಅರ್ಜುನಾ! ಸಂನ್ಯಾಸ ಮತ್ತು ತ್ಯಾಗ - ಈ ಎರಡರಲ್ಲಿ ಮೊದಲು ತ್ಯಾಗದ ವಿಷಯದಲ್ಲಿ ನೀನು ನನ್ನ ನಿಶ್ಚಯವನ್ನು ಕೇಳು; ಏಕೆಂದರೆ ತ್ಯಾಗವು ಸಾತ್ತ್ವಿಕ, ರಾಜಸ ಮತ್ತು ತಾಮಸ ಎಂಬ ಭೇದದಿಂದ ಮೂರು ಪ್ರಕಾರದ್ದೆಂದು ಹೇಳಲಾಗಿದೆ. ॥ ೪॥

**ಯಜ್ಞದಾನತಪಃಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್ ।**
**ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಮ್ ॥ ೫॥**

ಯಜ್ಞ, ದಾನ ಮತ್ತು ತಪರೂಪವಾದ ಕರ್ಮ ತ್ಯಜಿಸಲು ಯೋಗ್ಯವಾದುದಲ್ಲ. ಅಲ್ಲದೆ ಅದಾದರೋ ಅವಶ್ಯವಾದ ಕರ್ತವ್ಯವಾಗಿದೆ; ಏಕೆಂದರೆ ಯಜ್ಞ, ದಾನ, ಮತ್ತು ತಪ - ಈ ಮೂರೂ ಕರ್ಮಗಳೇ ಬುದ್ಧಿವಂತರಾದ ಪುರುಷರನ್ನು ಪವಿತ್ರಗೊಳಿಸುವುದಾಗಿವೆ. ॥ ೫॥

ಗಳನ್ನು ತ್ಯಾಗಮಾಡಿದ್ದೇ ಆದರೆ, ಅವನು ಇಂತಹ
ಸವಾದ ತ್ಯಾಗವನ್ನುಮಾಡಿ, ತ್ಯಾಗದ ಫಲವನ್ನು ಯಾವ
ರದಿಂದಲೂ ಪಡೆಯುವುದಿಲ್ಲ. ॥ ೮॥

ರ್ಯಮಿತ್ಯೇವ ಯತ್ಕರ್ಮ ನಿಯತಂ ಕ್ರಿಯತೇಽರ್ಜುನ ।
ಂ ತ್ಯಕ್ತ್ವಾ ಫಲಂ ಚೈವ ಸ ತ್ಯಾಗಃ ಸಾತ್ತ್ವಿಕೋ ಮತಃ ॥ ೯॥

ಹೇ ಅರ್ಜುನನೇ! ಯಾವ ಶಾಸ್ತ್ರವಿಹಿತವಾದ ಕರ್ಮವು
ದಲೇಬೇಕು ಎಂಬ ಕರ್ತವ್ಯ ಭಾವದಿಂದ ಆಸಕ್ತಿ ಮತ್ತು
ವನ್ನು ತ್ಯಾಗಗೈದು ಮಾಡಲಾಗುತ್ತದೆಯೋ - ಅದೇ ಸಾತ್ವಿಕ
ವೆಂದು ತಿಳಿಯಲಾಗಿದೆ. ॥ ೯॥

ದ್ವೇಷ್ಟ್ಯಕುಶಲಂ ಕರ್ಮ ಕುಶಲೇ ನಾನುಷಜ್ಜತೇ ।
ಗೀ ಸತ್ತ್ವಸಮಾವಿಷ್ಟೋ ಮೇಧಾವೀ ಛಿನ್ನಸಂಶಯಃ ॥ ೧೦॥

ಯಾವ ಮನುಷ್ಯನು ಅಕುಶಲ ಕರ್ಮವನ್ನು ದ್ವೇಷಿಸು
ವುದಿಲ್ಲ ಮತ್ತು ಕುಶಲ ಕರ್ಮದಲ್ಲಿ ಆಸಕ್ತನಾಗುವು
ದಿಲ್ಲವೋ - ಅಂತಹ ಶುದ್ಧವಾದ ಸತ್ತ್ವಗುಣದಿಂದ ಯುಕ್ತನಾದ
ರುಷನು, ಸಂಶಯರಹಿತ, ಬುದ್ಧಿವಂತ ಮತ್ತು ನಿಜವಾದ
ಗಿಯು ಆಗಿದ್ದಾನೆ. ॥ ೧೦॥

ಹಿ ದೇಹಭೃತಾ ಶಕ್ಯಂ ತ್ಯಕ್ತುಂ ಕರ್ಮಾಣ್ಯಶೇಷತಃ ।
ಸ್ತು ಕರ್ಮಫಲತ್ಯಾಗೀ ಸ ತ್ಯಾಗೀತ್ಯಭಿಧೀಯತೇ ॥

ಏಕೆಂದರೆ ಶರೀರಧಾರಿಯಾದ ಯಾವುದೇ ಮನುಷ್ಯನ
ಂದ ಸಂಪೂರ್ಣವಾಗಿ ಕರ್ಮಗಳೆಲ್ಲಾ ತ್ಯಾಗಮಾಡಲಡು

ವುದು ಸಾಧ್ಯವಾಗುವುದಿಲ್ಲ, ಆದಕಾರಣ ಯಾರು ಕರ್ಮಫಲ ತ್ಯಾಗಿಯಾಗಿದ್ದಾನೋ ಅವನೇ ತ್ಯಾಗೀಯಾಗಿದ್ದಾನೆ ಎಂದು ಹೇಳಲಾಗುತ್ತದೆ. ॥ ೧೧॥

**ಅನಿಷ್ಟಮಿಷ್ಟಂ ಮಿಶ್ರಂ ಚ ತ್ರಿವಿಧಂ ಕರ್ಮಣಃ ಫಲಮ್ ।**
**ಭವತ್ಯತ್ಯಾಗಿನಾಂ ಪ್ರೇತ್ಯ ನ ತು ಸಂನ್ಯಾಸಿನಾಂ ಕ್ವಚಿತ್ ॥ ೧೨॥**

ಕರ್ಮಫಲವನ್ನು ತ್ಯಾಗಮಾಡದಿರುವ ಮನುಷ್ಯರ ಕರ್ಮಗಳಾದರೋ ಒಳ್ಳೆಯ, ಕೆಟ್ಟ ಮತ್ತು ಮಿಶ್ರವಾದ ಹೀಗೆ ಮೂರೂ ವಿಧವಾದ ಫಲಗಳು ಮರಣಾನಂತರ ಅವಶ್ಯವಾಗಿ ಉಂಟಾಗುತ್ತವೆ. ಆದರೆ, ಕರ್ಮಫಲವನ್ನು ತ್ಯಾಗಮಾಡಿಬಿಡುವ ಮನುಷ್ಯರ ಕರ್ಮಗಳ ಫಲವು ಯಾವ ಕಾಲದಲ್ಲಿಯೂ ಉಂಟಾಗುವುದಿಲ್ಲ. ॥ ೧೨॥

**ಪಂಚೈತಾನಿ ಮಹಾಬಾಹೋ ಕಾರಣಾನಿ ನಿಬೋಧ ಮೇ ।**
**ಸಾಂಖ್ಯೇ ಕೃತಾಂತೇ ಪ್ರೋಕ್ತಾನಿ ಸಿದ್ಧಯೇ ಸರ್ವಕರ್ಮಣಾಮ್**

ಹೇ ಮಹಾಬಾಹುವೇ! ಸಂಪೂರ್ಣ ಕರ್ಮಗಳ ಸಿದ್ಧಿಗೆ ಈ ಐದು ಕಾರಣಗಳು ಕರ್ಮಗಳನ್ನು ಅಂತ್ಯಗೊಳಿಸುವುದಕ್ಕಾಗಿ ಉಪಾಯವನ್ನು ತಿಳಿಸುವ ಸಾಂಖ್ಯಶಾಸ್ತ್ರದಲ್ಲಿ ಹೇಳಲ್ಪಟ್ಟಿದೆ; ಅವುಗಳನ್ನು ನೀನು ನನ್ನಿಂದ ಚೆನ್ನಾಗಿ ತಿಳಿದುಕೋ. ॥ ೧೩॥

**ಅಧಿಷ್ಠಾನಂ ತಥಾ ಕರ್ತಾ ಕರಣಂ ಚ ಪೃಥಗ್ವಿಧಮ್ ।**
**ವಿವಿಧಾಶ್ಚ ಪೃಥಕ್ಚೇಷ್ಟಾ ದೈವಂ ಚೈವಾತ್ರ ಪಂಚಮಮ್ ॥ ೧೪॥**

ಈ ವಿಷಯದಲ್ಲಿ ಅರ್ಥಾತ್ ಕರ್ಮಗಳ ಸಿದ್ಧಿಯಲ್ಲಿ ಅಧಿಷ್ಠಾನ ಮತ್ತು ಕರ್ತೃವು, ಭಿನ್ನ ಭಿನ ಪ್ರಕಾರದ ಕರಣಗಳು ಹಾಗೂ ನಾನಾ ಪ್ರಕಾರದ, ಬೇರೆ ಬೇರೆಯಾದ ಕ್ರಿಯೆಗಳು ಮತ್ತು ಹಾಗೆಯೇ ಐದನೆಯ ಕಾರಣವು ದೈವವಾಗಿದೆ. ॥ ೧೪॥

**ಶರೀರವಾಙ್ಮನೋಭಿರ್ಯತ್ಕರ್ಮ ಪ್ರಾರಭತೇ ನರಃ ।**
**ನ್ಯಾಯ್ಯಂ ವಾ ವಿಪರೀತಂ ವಾ ಪಂಚೈತೇ ತಸ್ಯ ಹೇತವಃ**

ಮನುಷ್ಯನು ಮನಸ್ಸು, ವಾಣಿ ಮತ್ತು ಶರೀರದಿಂದ ಶಾಸ್ತ್ರಾನುಕೂಲವಾಗಲೀ ಅಥವಾ ವಿಪರೀತವಾಗಲೀ, ಯಾವುದೇ ಕರ್ಮವನ್ನು ಮಾಡುತ್ತಾನೋ ಅದಕ್ಕೆ ಈ ಐದೂ ಕಾರಣಗಳಾಗಿವೆ. ॥ ೧೫॥

**ತತ್ರೈವಂ ಸತಿ ಕರ್ತಾರಮಾತ್ಮಾನಂ ಕೇವಲಂ ತು ಯಃ।**
**ಪಶ್ಯತ್ಯಕೃತಬುದ್ಧಿತ್ವಾನ್ನ ಸ ಪಶ್ಯತಿ ದುರ್ಮತಿಃ ॥ ೧೬॥**

ಆದರೆ, ಹೀಗಿದ್ದರೂ ಸಹ ಯಾವ ಮನುಷ್ಯನು ಅಶುದ್ಧಬುದ್ಧಿಯವನಾದ ಕಾರಣ ಆ ವಿಷಯದಲ್ಲಿ ಎಂದರೆ ಕರ್ಮಗಳಾಗುವುದರಲ್ಲಿ ನಿರ್ವಿಕಾರ ಶುದ್ಧ ಸ್ವರೂಪೀ ಆತ್ಮನನ್ನು ಕರ್ತಾನೆಂದು ತಿಳಿಯುತ್ತಾನೋ ಆ ಮಲಿನ ಬುದ್ಧಿಯವನಾದ ಅಜ್ಞಾನಿಯು ಯಥಾರ್ಥವನ್ನು ಅರಿಯುವುದಿಲ್ಲ. ॥ ೧೬॥

**ಯಸ್ಯ ನಾಹಂಕೃತೋ ಭಾವೋ ಬುದ್ಧಿರ್ಯಸ್ಯ ನ ಲಿಪ್ಯತೇ ।**
**ಹತ್ವಾಪಿ ಸ ಇಮಾಂಲ್ಲೋಕಾನ್ನ ಹಂತಿ ನ ನಿಬಧ್ಯತೇ ॥ ೧೭॥**

ಯಾವ ಪುರುಷನ ಅಂತಃಕರಣದಲ್ಲಿ 'ನಾನು ಕರ್ತಾ ಆಗಿದ್ದೇನೆ' ಎನ್ನುವ ಭಾವ ಇರುವುದಿಲ್ಲವೋ, ಹಾಗೂ ಯಾರ ಬುದ್ಧಿಯು ಸಾಂಸಾರಿಕ ಪದಾರ್ಥಗಳಲ್ಲಿ ಮತ್ತು ಕರ್ಮಗಳಲ್ಲಿ ಅಂಟಿಕೊಳ್ಳುವುದಿಲ್ಲವೋ ಆ ಪುರುಷರು ಈ ಎಲ್ಲ ಜನರನ್ನು ಕೊಂದರೂ ಸಹ, ವಾಸ್ತವವಾಗಿ ಕೊಲ್ಲುವುದೂ ಇಲ್ಲ ಮತ್ತು ಪಾಪದಿಂದ ಬಂಧಿತನಾಗುವುದೂ ಇಲ್ಲ. ॥ ೧೭॥

**ಜ್ಞಾನಂ ಜ್ಞೇಯಂ ಪರಿಜ್ಞಾತಾ ತ್ರಿವಿಧಾ ಕರ್ಮಚೋದನಾ ।**
**ಕರಣಂ ಕರ್ಮ ಕರ್ತೇತಿ ತ್ರಿವಿಧಃ ಕರ್ಮಸಂಗ್ರಹಃ**

ಜ್ಞಾತಾ, ಜ್ಞಾನ ಮತ್ತು ಜ್ಞೇಯ ಇವು ಮೂರು ಪ್ರಕಾರದ ಕರ್ಮಪ್ರೇರಣೆಯಾಗಿದೆ ಮತ್ತು ಕರ್ತಾ, ಕರಣ ಹಾಗೂ ಕ್ರಿಯೆ ಇವು ಮೂರು ಪ್ರಕಾರದ ಕರ್ಮಸಂಗ್ರಹವಾಗಿದೆ. ॥ ೧೮॥

**ಜ್ಞಾನಂ ಕರ್ಮ ಚ ಕರ್ತಾ ಚ ತ್ರಿಧೈವ ಗುಣಭೇದತಃ ।**
**ಪ್ರೋಚ್ಯತೇ ಗುಣಸಂಖ್ಯಾನೇ ಯಥಾವಚ್ಛೃಣು ತಾನ್ಯಪಿ ॥**

ಗುಣಗಳ ಸಂಖ್ಯೆಯನ್ನು ತಿಳಿಸುವಂತಹ ಶಾಸ್ತ್ರದಲ್ಲಿ, ಜ್ಞಾನ, ಕರ್ಮ ಮತ್ತು ಕರ್ತಾ ಗುಣಗಳ ಭೇದದಿಂದ ಮೂರು ಮೂರು ಪ್ರಕಾರದಿಂದಲೇ ಹೇಳಲ್ಪಟ್ಟಿವೆ, ಅದನ್ನೂ ಸಹ ನೀನೂ ನನ್ನಿಂದ ಚೆನ್ನಾಗಿ ಕೇಳು. ॥ ೧೯॥

**ಸರ್ವಭೂತೇಷು ಯೇನೈಕಂ ಭಾವಮವ್ಯಯಮೀಕ್ಷತೇ ।**
**ಅವಿಭಕ್ತಂ ವಿಭಕ್ತೇಷು ತಜ್ಜ್ಞಾನಂ ವಿದ್ಧಿ ಸಾತ್ತ್ವಿಕಮ್ ॥ ೨೦॥**

ಯಾವ ಜ್ಞಾನದಿಂದ ಮನುಷ್ಯನು ಬೇರೆ-ಬೇರೆಯಾಗಿ ಎಲ್ಲಾ ಪ್ರಾಣಿಗಳಲ್ಲಿ ಒಂದೇ ಅವಿನಾಶಿಯಾದ ಪರಮಾತ್ಮ ಭಾವವನ್ನು ವಿಭಾಗರಹಿತವಾಗಿ ಸಮಭಾವದಿಂದ ಸ್ಥಿತನಾಗಿರುವಂತೆ ನೋಡುತ್ತಾನೋ ಆ ಜ್ಞಾನವನ್ನು ನೀನು ಸಾತ್ವಿಕವೆಂದು ತಿಳಿ. ॥ ೨೦॥

**ಪೃಥಕ್ತ್ವೇನ ತು ಯಜ್ಜ್ಞಾನಂ ನಾನಾಭಾವಾನ್ಪೃಥಗ್ವಿಧಾನ್ ।**
**ವೇತ್ತಿ ಸರ್ವೇಷು ಭೂತೇಷು ತಜ್ಜ್ಞಾನಂ ವಿದ್ಧಿ ರಾಜಸಮ್ ॥**

ಆದರೆ ಯಾವ ಜ್ಞಾನ ಅರ್ಥಾತ್ ಯಾವ ಜ್ಞಾನದ ಮೂಲಕ ಮನುಷ್ಯನು ಸಂಪೂರ್ಣ ಭೂತಗಳಲ್ಲಿ ಭಿನ್ನ-ಭಿನ್ನ ಪ್ರಕಾರದ, ನಾನಾ ಭಾವಗಳನ್ನು ಬೇರೆ ಬೇರೆಯಾಗಿ ತಿಳಿಯುತ್ತಾನೋ ಆ ಜ್ಞಾನವನ್ನು ನೀನು ರಾಜಸವೆಂದು ತಿಳಿದುಕೋ.

**ಯತ್ತು ಕೃತ್ಸ್ನವದೇಕಸ್ಮಿನ್ಕಾರ್ಯೇ ಸಕ್ತಮಹೈತುಕಮ್ ।**
**ಅತತ್ತ್ವಾರ್ಥವದಲ್ಪಂ ಚ ತತ್ತಾಮಸಮುದಾಹೃತಮ್ ॥ ೨೨॥**

ಆದರೆ ಯಾವ ಜ್ಞಾನವು ಒಂದು ಕಾರ್ಯರೂಪವಾದ ಶರೀರದಲ್ಲಿಯೇ ಸಂಪೂರ್ಣದಂತೆ ಆಸಕ್ತವಾಗಿದೆಯೋ ಹಾಗೂ ಯುಕ್ತಿಯಿಲ್ಲದ, ತಾತ್ತ್ವಿಕ ಅರ್ಥರಹಿತ ಮತ್ತು ತುಚ್ಛವಾಗಿದೆಯೋ - ಅದನ್ನು ತಾಮಸವೆಂದು ಹೇಳಲಾಗಿದೆ. ॥ ೨೨॥

**ನಿಯತಂ ಸಂಗರಹಿತಮರಾಗದ್ವೇಷತಃ ಕೃತಮ್ ।**
**ಅಫಲಪ್ರೇಪ್ಸುನಾ ಕರ್ಮ ಯತ್ತತ್ಸಾತ್ತ್ವಿಕಮುಚ್ಯತೇ ॥ ೨೩॥**

ಯಾವ ಕರ್ಮವು ಶಾಸ್ತ್ರವಿಧಿಯಿಂದ ನಿಯಮಿಸಲ್ಪಟ್ಟಿದೆಯೋ, ಮತ್ತು ಕರ್ತೃತ್ವದ ಅಭಿಮಾನದಿಂದ ರಹಿತವಾಗಿದೆಯೋ ಹಾಗೂ ಫಲವನ್ನು ಬಯಸದೆ ಇರುವ ಪುರುಷನ ಮೂಲಕ ರಾಗ-ದ್ವೇಷ-ರಹಿತವಾಗಿ ಮಾಡಲಾಗಿದೆಯೋ ಅದು ಸಾತ್ತ್ವಿಕವೆಂದು ಹೇಳಲಾಗುತ್ತದೆ. ॥ ೨೩॥

**ಯತ್ತು ಕಾಮೇಪ್ಸುನಾ ಕರ್ಮ ಸಾಹಂಕಾರೇಣ ವಾ ಪುನಃ।**
**ಕ್ರಿಯತೇ ಬಹುಲಾಯಾಸಂ ತದ್ರಾಜಸಮುದಾಹೃತಮ್ ॥ ೨೪॥**

ಆದರೆ ಯಾವ ಕರ್ಮವು ಬಹಳ ಪರಿಶ್ರಮದಿಂದ ಕೂಡಿರುತ್ತದೆಯೋ ಹಾಗೂ ಭೋಗಗಳನ್ನು ಬಯಸುವ ಪುರುಷನ ಮೂಲಕ ಅಥವಾ ಅಹಂಕಾರದಿಂದ ಕೂಡಿದ ಪುರುಷನ ಮೂಲಕ ಮಾಡಲಾಗುತ್ತದೆಯೋ ಆ ಕರ್ಮವು ರಾಜಸವೆಂದು ಹೇಳಲಾಗಿದೆ. ॥ ೨೪॥

**ಅನುಬಂಧಂ ಕ್ಷಯಂ ಹಿಂಸಾಮನವೇಕ್ಷ್ಯ ಚ ಪೌರುಷಮ್ ।**
**ಮೋಹಾದಾರಭ್ಯತೇ ಕರ್ಮ ಯತ್ತತ್ತಾಮಸಮುಚ್ಯತೇ ॥ ೨೫॥**

ಯಾವ ಕರ್ಮವು ಪರಿಣಾಮ, ಹಾನಿ, ಹಿಂಸೆ ಮತ್ತು ಸಾಮರ್ಥ್ಯ ಮೊದಲಾದವುಗಳ ವಿಚಾರಮಾಡದೆ ಕೇವಲ ಅಜ್ಞಾನದಿಂದ ಆರಂಭಿಸಲ್ಪಡುತ್ತದೆಯೋ ಅದನ್ನು ತಾಮಸವೆಂದು ಹೇಳಲಾಗುತ್ತದೆ. ॥ ೨೫॥

**ಮುಕ್ತಸಂಗೋಽನಹಂವಾದೀ ಧೃತ್ಯುತ್ಸಾಹಸಮನ್ವಿತಃ ।**
**ಸಿದ್ಧ್ಯಸಿದ್ಧ್ಯೋರ್ನಿರ್ವಿಕಾರಃ ಕರ್ತಾ ಸಾತ್ತ್ವಿಕ ಉಚ್ಯತೇ**

ಯಾವ ಕರ್ತನು ಸಂಗರಹಿತನಾಗಿ, ಅಹಂಕಾರದಿಂದ ಕೂಡಿದ ವಚನವನ್ನು ಆಡದೆ, ಧೈರ್ಯ ಮತ್ತು ಉತ್ಸಾಹದಿಂದ ಕೂಡಿ ಹಾಗೂ ಕಾರ್ಯವು ಸಿದ್ಧವಾಗುವುದು ಮತ್ತು ಆಗದಿರುವುದರಲ್ಲಿ ಹರ್ಷ-ಶೋಕಾದಿ ವಿಕಾರಗಳಿಂದ ರಹಿತನಾಗಿದ್ದಾನೋ ಅವನು ಸಾತ್ತ್ವಿಕನೆಂದು ಹೇಳಲ್ಪಡುತ್ತಾನೆ.

**ರಾಗೀ ಕರ್ಮಫಲಪ್ರೇಪ್ಸುರ್ಲುಬ್ಧೋ ಹಿಂಸಾತ್ಮಕೋಽಶುಚಿಃ ।**
**ಹರ್ಷಶೋಕಾನ್ವಿತಃ ಕರ್ತಾ ರಾಜಸಃ ಪರಿಕೀರ್ತಿತಃ ॥ ೨೭॥**

ಯಾವ ಕರ್ತೃವು ಆಸಕ್ತಿಯಿಂದ ಕೂಡಿದವನಾಗಿ, ಕರ್ಮಗಳ ಫಲವನ್ನು ಬಯಸುವವನೂ ಮತ್ತು ಲೋಭಿಯಾಗಿದ್ದಾನೋ ಹಾಗೂ ಇತರರಿಗೆ ಕಷ್ಟಕೊಡುವ ಸ್ವಭಾವವುಳ್ಳವನಾಗಿ, ಅಶುದ್ಧಾಚಾರಿಯೂ ಮತ್ತು ಹರ್ಷ-ಶೋಕಗಳಿಂದ ಲಿಪ್ತನಾಗಿದ್ದಾನೋ ಅವನು ರಾಜಸನೆಂದು ಹೇಳಲಾಗಿದೆ.

**ಅಯುಕ್ತಃ ಪ್ರಾಕೃತಃ ಸ್ತಬ್ಧಃ ಶಠೋ ನೈಷ್ಕೃತಿಕೋಽಲಸಃ।**
**ವಿಷಾದೀ ದೀರ್ಘಸೂತ್ರೀ ಚ ಕರ್ತಾ ತಾಮಸ ಉಚ್ಯತೇ ॥**

ಯಾವ ಕರ್ತೃವು ಅಯುಕ್ತನೂ, ಶಿಕ್ಷಣರಹಿತನೂ, ಅಹಂಕಾರಿಯೂ, ಧೂರ್ತನೂ ಮತ್ತು ಇತರರ ಜೀವನವನ್ನು ನಾಶಗೊಳಿಸುವವನೂ ಹಾಗೂ ಶೋಕಿಸುವವನೂ, ಸೋಮಾರಿಯೂ ಮತ್ತು ದೀರ್ಘಸೂತ್ರಿಯೂ (ಕೆಲಸವನ್ನು ನಿಧಾನವಾಗಿ ಮಾಡುವವನು) ಆಗಿದ್ದಾನೋ ಅವನನ್ನು ತಾಮಸನೆಂದು ಹೇಳಲಾಗುತ್ತದೆ. ॥ ೨೮॥

**ಬುದ್ಧೇರ್ಭೇದಂ ಧೃತೇಶ್ಚೈವ ಗುಣತಸ್ತ್ರಿವಿಧಂ ಶೃಣು।**
**ಪ್ರೋಚ್ಯಮಾನಮಶೇಷೇಣ ಪೃಥಕ್ತ್ವೇನ ಧನಂಜಯ ॥ ೨೯॥**

ಹೇ ಧನಂಜಯನೇ! ಈಗ ನೀನು ಬುದ್ಧಿಯ ಮತ್ತು ಧೃತಿಯ ಮೂರು ಪ್ರಕಾರದ ಭೇದಗಳನ್ನು ಕೂಡ ಗುಣಗಳಿಗನುಸಾರವಾಗಿ ನನ್ನ ಮೂಲಕ ಸಂಪೂರ್ಣವಾಗಿ, ವಿಭಾಗ ಪೂರ್ವಕವಾಗಿ ಹೇಳಲ್ಪಡುವುದನ್ನು ಕೇಳು. ॥ ೨೯॥

**ಪ್ರವೃತ್ತಿಂ ಚ ನಿವೃತ್ತಿಂ ಚ ಕಾರ್ಯಾಕಾರ್ಯೇ ಭಯಾಭಯೇ ।**
**ಬಂಧಂ ಮೋಕ್ಷಂ ಚ ಯಾ ವೇತ್ತಿ ಬುದ್ಧಿಃ ಸಾ ಪಾರ್ಥ ಸಾತ್ತ್ವಿಕೀ**

ಹೇ ಪಾರ್ಥನೇ! ಯಾವ ಬುದ್ಧಿಯು ಪ್ರವೃತ್ತಿಮಾರ್ಗ ಮತ್ತು ನಿವೃತ್ತಿ ಮಾರ್ಗವನ್ನು, ಕರ್ತವ್ಯ ಮತ್ತು ಅಕರ್ತವ್ಯವನ್ನು, ಭಯ ಮತ್ತು ಅಭಯವನ್ನು ಹಾಗೂ ಬಂಧನವನ್ನು ಮತ್ತು ಮೋಕ್ಷವನ್ನು ಯಥಾರ್ಥವಾಗಿ ತಿಳಿಯುತ್ತದೆಯೋ ಆ ಬುದ್ಧಿಯು ಸಾತ್ತ್ವಿಕವಾಗಿದೆ. ॥ ೩೦॥

**ಯಯಾ ಧರ್ಮಮಧರ್ಮಂ ಚ ಕಾರ್ಯಂ ಚಾಕಾರ್ಯಮೇವ ಚ**
**ಅಯಥಾವತ್ಪ್ರಜಾನಾತಿ ಬುದ್ಧಿಃ ಸಾ ಪಾರ್ಥ ರಾಜಸೀ**

ಹೇ ಪಾರ್ಥನೇ! ಮನುಷ್ಯನು ಯಾವ ಬುದ್ಧಿಯ ಮೂಲಕ ಧರ್ಮವನ್ನೂ ಮತ್ತು ಅಧರ್ಮವನ್ನೂ ಹಾಗೂ ಕರ್ತವ್ಯ ಮತ್ತು ಅಕರ್ತವ್ಯವನ್ನು ಕೂಡ ಯಥಾರ್ಥವಾಗಿ ತಿಳಿಯುವುದಿಲ್ಲವೋ, ಆ ಬುದ್ಧಿಯು ರಾಜಸವಾಗಿದೆ. ॥ ೩೧॥

**ಅಧರ್ಮಂ ಧರ್ಮಮಿತಿ ಯಾ ಮನ್ಯತೇ ತಮಸಾವೃತಾ ।**
**ಸರ್ವಾರ್ಥಾನ್ವಿಪರೀತಾಂಶ್ಚ ಬುದ್ಧಿಃ ಸಾ ಪಾರ್ಥ ತಾಮಸೀ ॥**

ಹೇ ಅರ್ಜುನಾ! ತಮೋಗುಣದಿಂದ ಆವರಿಸಲ್ಪಟ್ಟ ಯಾವ ಬುದ್ಧಿಯು ಅಧರ್ಮವನ್ನು ಕೂಡ 'ಇದು ಧರ್ಮವಾಗಿದೆ' ಎಂದು ತಿಳಿಯುತ್ತದೆಯೋ, ಹಾಗೂ ಇದೇ ಪ್ರಕಾರ ಅನ್ಯ ಸಂಪೂರ್ಣ ಪದಾರ್ಥಗಳನ್ನು ಸಹ ವಿಪರೀತವಾಗಿ ತಿಳಿಯುತ್ತದೆಯೋ ಆ ಬುದ್ಧಿಯು ತಾಮಸೀಯಾಗಿದೆ. ॥ ೩೨॥

**ಧೃತ್ಯಾ ಯಯಾ ಧಾರಯತೇ ಮನಃಪ್ರಾಣೇಂದ್ರಿಯಕ್ರಿಯಾಃ।**
**ಯೋಗೇನಾವ್ಯಭಿಚಾರಿಣ್ಯಾ ಧೃತಿಃ ಸಾ ಪಾರ್ಥ ಸಾತ್ತ್ವಿಕೀ ॥ ೩೩॥**

ಹೇ ಪಾರ್ಥನೇ! ಯಾವ ಅವ್ಯಭಿಚಾರಿಣಿಯಾದ ಧಾರಣ ಶಕ್ತಿಯಿಂದ ಮನುಷ್ಯನು ಧ್ಯಾನಯೋಗದ ಮೂಲಕ ಮನಸ್ಸು, ಪ್ರಾಣ ಮತ್ತು ಇಂದ್ರಿಯಗಳ ಕ್ರಿಯೆಗಳನ್ನು ಧಾರಣೆ ಮಾಡುತ್ತಾನೆಯೋ ಆ ಧೃತಿಯು ಸಾತ್ತ್ವಿಕವಾಗಿದೆ. ॥ ೩೩॥

**ಯಯಾ ತು ಧರ್ಮಕಾಮಾರ್ಥಾನ್ಧೃತ್ಯಾ ಧಾರಯತೇಽರ್ಜುನ।**
**ಪ್ರಸಂಗೇನ ಫಲಾಕಾಂಕ್ಷೀ ಧೃತಿಃ ಸಾ ಪಾರ್ಥ ರಾಜಸೀ**

ಆದರೆ ಹೇ ಪೃಥಾಪುತ್ರ ಅರ್ಜುನಾ! ಫಲದ ಇಚ್ಛೆಯುಳ್ಳ ಮನುಷ್ಯನು ಯಾವ ಧಾರಣಶಕ್ತಿಯ ಮೂಲಕ ಅತ್ಯಂತ ಆಸಕ್ತಿಯಿಂದ ಧರ್ಮ, ಅರ್ಥ ಮತ್ತು ಕಾಮಗಳನ್ನು ಧಾರಣೆ ಮಾಡುತ್ತಾನೋ ಆ ಧಾರಣಶಕ್ತಿಯು ರಾಜಸಿಯಾಗಿದೆ. ॥ ೩೪॥

**ಯಯಾ ಸ್ವಪ್ನಂ ಭಯಂ ಶೋಕಂ ವಿಷಾದಂ ಮದಮೇವ ಚ ।**
**ನ ವಿಮುಂಚತಿ ದುರ್ಮೇಧಾ ಧೃತಿಃ ಸಾ ಪಾರ್ಥ ತಾಮಸೀ ॥**

ಹೇ ಪಾರ್ಥನೇ!, ದುಷ್ಟಬುದ್ಧಿಯುಳ್ಳ ಮನುಷ್ಯನು ಯಾವ ಧಾರಣಶಕ್ತಿಯ ಮೂಲಕ ನಿದ್ರೆ, ಭಯ, ಚಿಂತೆ ಮತ್ತು ದುಃಖವನ್ನೂ ಹಾಗೂ ಉನ್ಮತ್ತತೆಯನ್ನು ಕೂಡ ಬಿಡುವುದಿಲ್ಲವೋ ಅರ್ಥಾತ್ ಧಾರಣೆಮಾಡಿರುತ್ತಾನೆಯೋ ಆ ಧಾರಣಶಕ್ತಿಯು ತಾಮಸಿಯಾಗಿದೆ. ॥ ೩೫॥

**ಸುಖಂ ತ್ವಿದಾನೀಂ ತ್ರಿವಿಧಂ ಶೃಣು ಮೇ ಭರತರ್ಷಭ।**
**ಅಭ್ಯಾಸಾದ್ರಮತೇ ಯತ್ರ ದುಃಖಾಂತಂ ಚ ನಿಗಚ್ಛತಿ ॥ ೩೬॥**
**ಯತ್ತದಗ್ರೇ ವಿಷಮಿವ ಪರಿಣಾಮೇಽಮೃತೋಪಮಮ್।**
**ತತ್ಸುಖಂ ಸಾತ್ತ್ವಿಕಂ ಪ್ರೋಕ್ತಮಾತ್ಮಬುದ್ಧಿಪ್ರಸಾದಜಮ್ ॥ ೩೭॥**

ಹೇ ಭರತಶ್ರೇಷ್ಠನೇ! ಈಗ ಮೂರು ಪ್ರಕಾರದ ಸುಖವನ್ನು ಕೂಡ ನನ್ನಿಂದ ಕೇಳು. ಯಾವ ಸುಖದಲ್ಲಿ ಸಾಧಕನಾದ ಮನುಷ್ಯನು ಭಜನೆ, ಧ್ಯಾನ ಮತ್ತು ಸೇವೆ ಮೊದಲಾದ ಅಭ್ಯಾಸದಿಂದ ರಮಿಸುತ್ತಾನೋ, ಮತ್ತು ಯಾವುದರಿಂದ ದುಃಖದ ಅಂತ್ಯವನ್ನು ಪಡೆಯುತ್ತಾನೆಯೋ, ಯಾವ ಇಂತಹ ಸುಖವಿದೆಯೋ ಅದು ಆರಂಭಕಾಲದಲ್ಲಿ ವಿಷಕ್ಕೆ ಸಮಾನವಾಗಿ ತೋರಿದರೂ ಪರಿಣಾಮದಲ್ಲಿ ಅಮೃತಕ್ಕೆ ಸಮಾನವಾಗಿದೆ. ಆದ್ದರಿಂದ ಆ ಪರಮಾತ್ಮ ವಿಷಯಕವಾದ

ಬುದ್ಧಿಯ ಪ್ರಸಾದದಿಂದ ಉಂಟಾಗುವ ಸುಖವನ್ನು ಸಾತ್ವಿಕವೆಂದು ಹೇಳಲಾಗಿದೆ. ॥ ೩೬ - ೩೭॥

**ವಿಷಯೇಂದ್ರಿಯಸಂಯೋಗಾದ್ಯತ್ತದಗ್ರೇಽಮೃತೋಪಮಮ್ ।**
**ಪರಿಣಾಮೇ ವಿಷಮಿವ ತತ್ಸುಖಂ ರಾಜಸಂ ಸ್ಮೃತಮ್ ॥ ೩೮॥**

ಯಾವ ಸುಖವು ವಿಷಯ ಮತ್ತು ಇಂದ್ರಿಯಗಳ ಸಂಯೋಗದಿಂದ ಉಂಟಾಗುತ್ತದೆಯೋ ಅದು ಮೊದಲು ಭೋಗಕಾಲದಲ್ಲಿ ಅಮೃತಕ್ಕೆ ಸಮಾನವಾಗಿ ತೋರಿದರೂ ಸಹ ಪರಿಣಾಮದಲ್ಲಿ ವಿಷಕ್ಕೆ ಸಮಾನವಾಗಿದೆ; ಆದ್ದರಿಂದ ಆ ಸುಖವು ರಾಜಸವೆಂದು ಹೇಳಲ್ಪಟ್ಟಿದೆ. ॥ ೩೮॥

**ಯದಗ್ರೇ ಚಾನುಬಂಧೇ ಚ ಸುಖಂ ಮೋಹನಮಾತ್ಮನಃ।**
**ನಿದ್ರಾಲಸ್ಯಪ್ರಮಾದೋತ್ಥಂ ತತ್ತಾಮಸಮುದಾಹೃತಮ್ ॥ ೩೯॥**

ಯಾವ ಸುಖವು ಭೋಗಕಾಲದಲ್ಲಿ ಹಾಗೂ ಪರಿಣಾಮದಲ್ಲಿಯೂ ಕೂಡ ಆತ್ಮನನ್ನು ಮೋಹ ಗೊಳಿಸುತ್ತದೆಯೋ - ಆ ನಿದ್ರಾ, ಆಲಸ್ಯ ಮತ್ತು ಪ್ರಮಾದದಿಂದ ಉತ್ಪನ್ನವಾದ ಸುಖವನ್ನು ತಾಮಸವೆಂದು ಹೇಳಲಾಗಿದೆ. ॥ ೩೯॥

**ನ ತದಸ್ತಿ ಪೃಥಿವ್ಯಾಂ ವಾ ದಿವಿ ದೇವೇಷು ವಾ ಪುನಃ ।**
**ಸತ್ತ್ವಂ ಪ್ರಕೃತಿಜೈರ್ಮುಕ್ತಂ ಯದೇಭಿಃ ಸ್ಯಾತ್ತ್ರಿಭಿರ್ಗುಣೈಃ ॥ ೪೦॥**

ಪೃಥ್ವಿಯಲ್ಲಿ ಅಥವಾ ಆಕಾಶದಲ್ಲಿ ಅಥವಾ ದೇವತೆಗಳಲ್ಲಿ ಹಾಗೂ ಇವಲ್ಲದೆ ಮತ್ತೆಲ್ಲಿಯಾದರೂ ಯಾವ ಪ್ರಕೃತಿಯಿಂದ

ಉತ್ಪನ್ನವಾದ ಈ ಮೂರೂ ಗುಣಗಳಿಂದ ರಹಿತವಾಗಿರುವಂತಹ ಸತ್ತ್ವ ಇಲ್ಲವಾಗಿದೆ. ॥ ೪೦॥

**ಬ್ರಾಹ್ಮಣಕ್ಷತ್ರಿಯವಿಶಾಂ ಶೂದ್ರಾಣಾಂ ಚ ಪರಂತಪ ।**
**ಕರ್ಮಾಣಿ ಪ್ರವಿಭಕ್ತಾನಿ ಸ್ವಭಾವಪ್ರಭವೈರ್ಗುಣೈಃ ॥ ೪೧॥**

ಹೇ ಪರಂತಪನೇ! ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯರ ಹಾಗೂ ಶೂದ್ರರ ಕರ್ಮಗಳು ಸ್ವಭಾವದಿಂದ ಉತ್ಪನ್ನವಾದ ಗುಣಗಳ ಅನುಸಾರವಾಗಿ ವಿಭಾಗಿಸಲ್ಪಟ್ಟಿವೆ. ॥ ೪೧॥

**ಶಮೋ ದಮಸ್ತಪಃ ಶೌಚಂ ಕ್ಷಾಂತಿರಾರ್ಜವಮೇವ ಚ ।**
**ಜ್ಞಾನಂ ವಿಜ್ಞಾನಮಾಸ್ತಿಕ್ಯಂ ಬ್ರಹ್ಮಕರ್ಮ ಸ್ವಭಾವಜಮ್ ॥ ೪೨॥**

ಅಂತಃಕರಣವನ್ನು ನಿಗ್ರಹಿಸುವುದು; ಇಂದ್ರಿಯಗಳ ದಮನಮಾಡುವುದು; ಧರ್ಮಪಾಲನೆಗಾಗಿ ಕಷ್ಟವನ್ನು ಸಹಿಸುವುದು; ಹೊರಗೊಳಗಿಂದ ಶುದ್ಧನಾಗಿರುವುದು; ಬೇರೆಯವರ ಅಪರಾಧಗಳನ್ನು ಕ್ಷಮಿಸುವುದು; ಮನಸ್ಸು, ಇಂದ್ರಿಯಗಳು ಮತ್ತು ಶರೀರವನ್ನು ಸರಳವಾಗಿರಿಸುವುದು; ವೇದ, ಶಾಸ್ತ್ರ, ದೇವರು ಮತ್ತು ಪರಲೋಕಾದಿಗಳಲ್ಲಿ ಶ್ರದ್ಧೆಯಿಡುವುದು; ವೇದಶಾಸ್ತ್ರಗಳ ಅಧ್ಯಯನ ಮತ್ತು ಅಧ್ಯಾಪನಮಾಡುವುದು ಮತ್ತು ಪರಮಾತ್ಮತತ್ತ್ವದ ಅನುಭವ ಪಡೆಯುವುದು - ಇವೆಲ್ಲವೂ ಬ್ರಾಹ್ಮಣನ ಸ್ವಾಭಾವಿಕವಾದ ಕರ್ಮಗಳಾಗಿವೆ. ॥ ೪೨॥

**ಶೌರ್ಯಂ ತೇಜೋ ಧೃತಿರ್ದಾಕ್ಷ್ಯಂ ಯುದ್ಧೇ ಚಾಪ್ಯಪಲಾಯನಮ್**
**ದಾನಮೀಶ್ವರಭಾವಶ್ಚ ಕ್ಷಾತ್ರಂ ಕರ್ಮ ಸ್ವಭಾವಜಮ್ ॥**

ಶೌರ್ಯ, ವೀರತೆ, ತೇಜ, ಧೈರ್ಯ, ದಕ್ಷತೆ ಮತ್ತು ಯುದ್ಧದಲ್ಲಿ ಹೆಚ್ಚಿನ ಸಂಕಟ ಉಂಟಾದರೂ ಓಡಿಹೋಗದಿರುವುದು, ದಾನವನ್ನು ಕೊಡುವುದು ಮತ್ತು ಸ್ವಾಮಿಭಾವ ಹೀಗೆ ಇವೆಲ್ಲವೂ ಕ್ಷತ್ರಿಯನ ಸ್ವಾಭಾವಿಕವಾದ ಕರ್ಮಗಳಾಗಿವೆ.

**ಕೃಷಿಗೌರಕ್ಷ್ಯವಾಣಿಜ್ಯಂ ವೈಶ್ಯಕರ್ಮ ಸ್ವಭಾವಜಮ್।**
**ಪರಿಚರ್ಯಾತ್ಮಕಂ ಕರ್ಮ ಶೂದ್ರಸ್ಯಾಪಿ ಸ್ವಭಾವಜಮ್ ॥ ೪೪॥**

ಕೃಷಿ, ಗೋಪಾಲನೆ ಮತ್ತು ಕ್ರಯ-ವಿಕ್ರಯರೂಪವಾದ ಸತ್ಯವ್ಯವಹಾರ - ಇವು ವೈಶ್ಯರ ಸ್ವಾಭಾವಿಕ ಕರ್ಮಗಳಾಗಿವೆ. ಹಾಗೂ ಶೂದ್ರನಿಗೂ ಕೂಡ ಎಲ್ಲ ವರ್ಣಗಳ ಸೇವೆ ಮಾಡುವುದೇ ಸ್ವಾಭಾವಿಕ ಕರ್ಮವಾಗಿದೆ. ॥ ೪೪॥

**ಸ್ವೇ ಸ್ವೇ ಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇ ನರಃ।**
**ಸ್ವಕರ್ಮನಿರತಃ ಸಿದ್ಧಿಂ ಯಥಾ ವಿಂದತಿ ತಚ್ಛೃಣು ॥ ೪೫॥**

ತಮ್ಮ-ತಮ್ಮ ಸ್ವಾಭಾವಿಕವಾದ ಕರ್ಮಗಳಲ್ಲಿ ತತ್ಪರತೆಯಿಂದ ತೊಡಗಿರುವ ಮನುಷ್ಯನು ಭಗವತ್ಪ್ರಾಪ್ತಿರೂಪೀ ಪರಮ ಸಿದ್ಧಿಯನ್ನು ಪಡೆಯುತ್ತಾನೆ. ತನ್ನ ಸ್ವಾಭಾವಿಕ ಕರ್ಮದಲ್ಲಿ ತೊಡಗಿರುವ ಮನುಷ್ಯನು ಯಾವ ಪ್ರಕಾರದಿಂದ ಕರ್ಮಗೈದು ಪರಮಸಿದ್ಧಿಯನ್ನು ಪಡೆಯುತ್ತಾನೆ, ಆ ವಿಧಿಯನ್ನು ನೀನು ಕೇಳು. ॥ ೪೫॥

**ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಮ್ ।**
**ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ ॥ ೪೬॥**

ಯಾವ ಪರಮೇಶ್ವರನಿಂದ ಸಂಪೂರ್ಣ ಪ್ರಾಣಿಗಳ ಉತ್ಪತ್ತಿಯಾಗಿದೆಯೋ ಮತ್ತು ಯಾರಿಂದ ಈ ಸಮಸ್ತ ಜಗತ್ತು ವ್ಯಾಪ್ತವಾಗಿದೆಯೋ, ಆ ಪರಮೇಶ್ವರನನ್ನು ತನ್ನ ಸ್ವಾಭಾವಿಕ ಕರ್ಮಗಳ ಮೂಲಕ ಪೂಜಿಸಿ ಮನುಷ್ಯನು ಪರಮ ಸಿದ್ಧಿಯನ್ನು ಪಡೆಯುತ್ತಾನೆ. ॥ ೪೬॥

**ಶ್ರೇಯಾನ್ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್।**
**ಸ್ವಭಾವನಿಯತಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಮ್ ॥ ೪೭॥**

ಒಳ್ಳೆಯ ರೀತಿಯಲ್ಲಿ ಆಚರಿಸಲಾದ ಬೇರೆಯವರ ಧರ್ಮಕ್ಕಿಂತ ಗುಣರಹಿತವಾದರೂ ಕೂಡ ತನ್ನ ಧರ್ಮವು ಶ್ರೇಷ್ಠವಾಗಿದೆ. ಏಕೆಂದರೆ ಸ್ವಭಾವದಿಂದ ನಿಯಮಿಸಲ್ಪಟ್ಟಿರುವ, ಸ್ವಧರ್ಮರೂಪೀ ಕರ್ಮವನ್ನು ಮಾಡುತ್ತಾ ಇರುವ ಮನುಷ್ಯನು ಪಾಪವನ್ನು ಪಡೆಯುವುದಿಲ್ಲ. ॥ ೪೭॥

**ಸಹಜಂ ಕರ್ಮ ಕೌಂತೇಯ ಸದೋಷಮಪಿ ನ ತ್ಯಜೇತ್ ।**
**ಸರ್ವಾರಂಭಾ ಹಿ ದೋಷೇಣ ಧೂಮೇನಾಗ್ನಿರಿವಾವೃತಾಃ ॥**

ಆದ್ದರಿಂದ, ಹೇ ಕುಂತೀಪುತ್ರನೇ! ದೋಷಯುಕ್ತವಾದರೂ ಕೂಡ ಸಹಜವಾದ ಕರ್ಮವನ್ನು ತ್ಯಜಿಸಬಾರದು; ಏಕೆಂದರೆ ಅಗ್ನಿಯು ಹೊಗೆಯಿಂದ ಯುಕ್ತವಾಗಿರುವಂತೆ ಎಲ್ಲ ಕರ್ಮಗಳೂ ಒಂದಲ್ಲ ಒಂದು ದೋಷದಿಂದ ಕೂಡಿರುತ್ತವೆ.

**ಅಸಕ್ತಬುದ್ಧಿಃ ಸರ್ವತ್ರ ಜಿತಾತ್ಮಾ ವಿಗತಸ್ಪೃಹಃ ।**
**ನೈಷ್ಕರ್ಮ್ಯಸಿದ್ಧಿಂ ಪರಮಾಂ ಸಂನ್ಯಾಸೇನಾಧಿಗಚ್ಛತಿ ॥**

ಸರ್ವತ್ರ ಆಸಕ್ತಿರಹಿತವಾದ ಬುದ್ಧಿಯುಳ್ಳವನು, ಸ್ಪೃಹಾರಹಿತನೂ ಮತ್ತು ಗೆಲ್ಲಲ್ಪಟ್ಟ ಅಂತಃಕರಣವುಳ್ಳ ಪುರುಷನು ಸಾಂಖ್ಯಯೋಗದ ಮೂಲಕ ಆ ಪರಮ ನೈಷ್ಕರ್ಮ್ಯಸಿದ್ಧಿಯನ್ನು ಪಡೆಯುತ್ತಾನೆ. ॥ ೪೯ ॥

**ಸಿದ್ಧಿಂ ಪ್ರಾಪ್ತೋ ಯಥಾ ಬ್ರಹ್ಮ ತಥಾಪ್ನೋತಿ ನಿಬೋಧ ಮೇ।**
**ಸಮಾಸೇನೈವ ಕೌಂತೇಯ ನಿಷ್ಠಾ ಜ್ಞಾನಸ್ಯ ಯಾ ಪರಾ ॥ ೫೦॥**

ಯಾವ ಜ್ಞಾನಯೋಗದ ಶ್ರೇಷ್ಠ ನಿಷ್ಠೆಯಾಗಿದೆಯೋ ಆ ನೈಷ್ಕರ್ಮ್ಯಸಿದ್ಧಿಯನ್ನು ಯಾವ ಪ್ರಕಾರವಾಗಿ ಪಡೆದುಕೊಂಡ ಮನುಷ್ಯನು ಬ್ರಹ್ಮವನ್ನೂ ಪಡೆಯುತ್ತಾನೋ ಆ ಪ್ರಕಾರವನ್ನು ಹೇ ಕುಂತೀಪುತ್ರನೇ! ನೀನು ಸಂಕ್ಷೇಪವಾಗಿಯೇ ನನ್ನಿಂದ ತಿಳಿದುಕೊ. ॥ ೫೦॥

**ಬುದ್ಧ್ಯಾ ವಿಶುದ್ಧಯಾ ಯುಕ್ತೋ ಧೃತ್ಯಾತ್ಮಾನಂ ನಿಯಮ್ಯ ಚ ।**
**ಶಬ್ದಾದೀನ್ವಿಷಯಾಂಸ್ತ್ಯಕ್ತ್ವಾ ರಾಗದ್ವೇಷೌ ವ್ಯುದಸ್ಯ ಚ ॥ ೫೧॥**
**ವಿವಿಕ್ತಸೇವೀ ಲಘ್ವಾಶೀ ಯತವಾಕ್ಕಾಯಮಾನಸಃ ।**
**ಧ್ಯಾನಯೋಗಪರೋ ನಿತ್ಯಂ ವೈರಾಗ್ಯಂ ಸಮುಪಾಶ್ರಿತಃ ॥ ೫೨॥**
**ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಪರಿಗ್ರಹಮ್।**
**ವಿಮುಚ್ಯ ನಿರ್ಮಮಃ ಶಾಂತೋ ಬ್ರಹ್ಮಭೂಯಾಯ ಕಲ್ಪತೇ ॥**

ವಿಶುದ್ಧವಾದ ಬುದ್ಧಿಯಿಂದ ಕೂಡಿದವನಾಗಿ ಹಾಗೂ ಹಗುರವಾದ, ಸಾತ್ತ್ವಿಕ ಮತ್ತು ನಿಯಮಿತ ಭೋಜನವನ್ನು ಮಾಡುವವನೂ, ಶಬ್ದವೇ ಮೊದಲಾದ ವಿಷಯಗಳನ್ನು ತ್ಯಾಗಗೈದು ಏಕಾಂತ ಮತ್ತು ಶುದ್ಧವಾದ ದೇಶದಲ್ಲಿ ವಾಸ ಮಾಡುವವನೂ, ಸಾತ್ತ್ವಿಕ ಧಾರಣಶಕ್ತಿಯ ಮೂಲಕ ಅಂತಃಕರಣ ಮತ್ತು ಇಂದ್ರಿಯಗಳನ್ನು ಸಂಯಮದಲ್ಲಿರಿಸಿ ಕೊಂಡು, ಮನಸ್ಸು, ವಾಣಿ ಮತ್ತು ಶರೀರವನ್ನು ವಶದಲ್ಲಿರಿಸಿ ಕೊಳ್ಳುವವನೂ, ರಾಗ-ದ್ವೇಷಗಳನ್ನು ಸರ್ವಥಾ ನಾಶಗೊಳಿಸಿ, ಚೆನ್ನಾದ ದೃಢವಾದ ವೈರಾಗ್ಯವನ್ನು ಆಶ್ರಯಿಸುವವನೂ ಹಾಗೂ ಅಹಂಕಾರ, ಬಲ, ದರ್ಪ, ಕಾಮ, ಕ್ರೋಧ ಮತ್ತು ಪರಿಗ್ರಹವನ್ನು ತ್ಯಾಗಮಾಡಿ, ನಿರಂತರ ಧ್ಯಾನಯೋಗ ಪರಾಯಣ ನಾಗಿರುವ ಮಮತಾರಹಿತ ಶಾಂತಿಯುಕ್ತ ಪುರುಷನು, ಸಚ್ಚಿದಾನಂದಘನ ಬ್ರಹ್ಮನಲ್ಲಿ ಅಭಿನ್ನಭಾವದಿಂದ ಸ್ಥಿತನಾಗಿರಲು ಪಾತ್ರನಾಗುತ್ತಾನೆ. ॥ ೫೧-೫೨-೫೩॥

**ಬ್ರಹ್ಮಭೂತಃ ಪ್ರಸನ್ನಾತ್ಮಾ ನ ಶೋಚತಿ ನ ಕಾಂಕ್ಷತಿ।**
**ಸಮಃ ಸರ್ವೇಷು ಭೂತೇಷು ಮದ್ಭಕ್ತಿಂ ಲಭತೇ ಪರಾಮ್ ॥**

ಮತ್ತೆ ಆ ಸಚ್ಚಿದಾನಂದಘನ ಬ್ರಹ್ಮನಲ್ಲಿ ಸ್ಥಿತನಾದ, ಪ್ರಸನ್ನ ಮನಸ್ಸುಳ್ಳ ಯೋಗಿಯು ಯಾರಿಗಾಗಿಯೂ ಶೋಕಿಸುವುದಿಲ್ಲ ಮತ್ತು ಯಾವುದನ್ನೂ ಬಯಸುವುದಿಲ್ಲ. ಇಂತಹ, ಸಮಸ್ತ

ಪ್ರಾಣಿಗಳಲ್ಲಿ ಸಮಭಾವವುಳ್ಳ ಯೋಗಿಯು ನನ್ನ ಪರಾಭಕ್ತಿಯನ್ನು ಪಡೆಯುತ್ತಾನೆ. ॥ ೫೪॥

**ಭಕ್ತ್ಯಾ ಮಾಮಭಿಜಾನಾತಿ ಯಾವಾನ್ಯಶ್ಚಾಸ್ಮಿ ತತ್ತ್ವತಃ**
**ತತೋ ಮಾಂ ತತ್ತ್ವತೋ ಜ್ಞಾತ್ವಾ ವಿಶತೇ ತದನಂತರಮ್ ॥**

ಆ ಪರಾಭಕ್ತಿಯ ಮೂಲಕ ಅವನು ಪರಮಾತ್ಮನಾದ ನನ್ನನ್ನು ನಾನು ಯಾರಾಗಿದ್ದೇನೋ ಮತ್ತು ಯಾವ ಪ್ರಭಾವದಿಂದ ಯುಕ್ತನಾಗಿದ್ದೇನೋ, ಸರಿಯಾಗಿ ಹೇಗಿರುವೆನೋ ಹಾಗೆ ತತ್ತ್ವದಿಂದ ತಿಳಿಯುತ್ತಾನೆ; ಹಾಗೂ ಆ ಭಕ್ತಿಯಿಂದ ನನ್ನನ್ನು ತತ್ತ್ವದಿಂದ ತಿಳಿದುಕೊಂಡು ತತ್ಕಾಲದಲ್ಲಿಯೇ ನನ್ನಲ್ಲಿ ಪ್ರವೇಶ ಮಾಡಿಬಿಡುತ್ತಾನೆ. ॥ ೫೫॥

**ಸರ್ವಕರ್ಮಾಣ್ಯಪಿ ಸದಾ ಕುರ್ವಾಣೋ ಮದ್ವ್ಯಪಾಶ್ರಯಃ।**
**ಮತ್ಪ್ರಸಾದಾದವಾಪ್ನೋತಿ ಶಾಶ್ವತಂ ಪದಮವ್ಯಯಮ್ ॥**

ನನ್ನ ಪರಾಯಣನಾದ ಕರ್ಮಯೋಗಿಯು ಸಂಪೂರ್ಣ ಕರ್ಮಗಳನ್ನು ಯಾವಾಗಲೂ ಮಾಡುತ್ತಿದ್ದರೂ ಕೂಡ ನನ್ನ ಕೃಪೆಯಿಂದ ಸನಾತನ, ಅವಿನಾಶಿಯಾದ ಪರಮಪದವನ್ನು ಪಡೆಯುತ್ತಾನೆ. ॥ ೫೬॥

**ಚೇತಸಾ ಸರ್ವಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಃ।**
**ಬುದ್ಧಿಯೋಗಮುಪಾಶ್ರಿತ್ಯ ಮಚ್ಚಿತ್ತಃ ಸತತಂ ಭವ ॥ ೫೭॥**

ಎಲ್ಲ ಕರ್ಮಗಳನ್ನು ಮನಃಪೂರ್ವಕ ನನ್ನಲ್ಲಿ ಅರ್ಪಣೆ ಮಾಡಿ ಹಾಗೂ, ಸಮತ್ವಬುದ್ಧಿರೂಪವಾದ ಯೋಗವನ್ನು

ಅವಲಂಬಿಸಿಕೊಂಡು ನನ್ನ ಪರಾಯಣನಾಗಿ ಮತ್ತು ನಿರಂತರ ನನ್ನಲ್ಲಿ ಚಿತ್ತವುಳ್ಳವನಾಗು. ॥ ೫೭॥

**ಮಚ್ಚಿತ್ತಃ ಸರ್ವದುರ್ಗಾಣಿ ಮತ್ಪ್ರಸಾದಾತ್ತರಿಷ್ಯಸಿ ।**
**ಅಥ ಚೇತ್ತ್ವ ಮಹಂಕಾರಾನ್ನ ಶ್ರೋಷ್ಯಸಿ ವಿನಂಕ್ಷ್ಯಸಿ ॥ ೫೮॥**

ಮೇಲೆ ಹೇಳಿದ ಪ್ರಕಾರದಿಂದ ನನ್ನಲ್ಲಿ ಚಿತ್ತವನ್ನುಳ್ಳವನಾಗಿ ನೀನು ನನ್ನ ಕೃಪೆಯಿಂದ ಸಮಸ್ತ ಸಂಕಟಗಳನ್ನು ಅನಾಯಾಸ ವಾಗಿಯೇ ದಾಟಿಬಿಡುವೆ ಮತ್ತು ಒಂದು ವೇಳೆ ಅಹಂಕಾರದ ಕಾರಣದಿಂದ ನನ್ನ ವಚನಗಳನ್ನು ಕೇಳದಿದ್ದರೆ ನಾಶವಾಗುವೆ ಅರ್ಥಾತ್ ಪರಮಾರ್ಥದಿಂದ ಭ್ರಷ್ಟನಾಗಿ ಹೋಗುವೆ.

**ಯದಹಂಕಾರಮಾಶ್ರಿತ್ಯ ನ ಯೋತ್ಸ್ಯ ಇತಿ ಮನ್ಯಸೇ।**
**ಮಿಥ್ಯೈಷ ವ್ಯವಸಾಯಸ್ತೇ ಪ್ರಕೃತಿಸ್ತ್ವಾಂ ನಿಯೋಕ್ಷ್ಯತಿ ॥ ೫೯॥**

ನೀನು ಯಾವ ಅಹಂಕಾರದ ಆಶ್ರಯ ಪಡೆದು 'ನಾನು ಯುದ್ಧ ಮಾಡುವುದಿಲ್ಲ' ಎಂಬುದಾಗಿ ನಿಶ್ಚಯ ಮಾಡಿರುವೆಯೋ, ನಿನ್ನ ಈ ನಿಶ್ಚಯವು ಮಿಥ್ಯೆಯಾಗಿದೆ; ಏಕೆಂದರೆ ನಿನ್ನ ಸ್ವಭಾವವು ನಿನ್ನನ್ನು ಬಲವಂತವಾಗಿ ಯುದ್ಧದಲ್ಲಿ ತೊಡಗಿಸುವುದು.

**ಸ್ವಭಾವಜೇನ ಕೌಂತೇಯ ನಿಬದ್ಧಃ ಸ್ವೇನ ಕರ್ಮಣಾ।**
**ಕರ್ತುಂ ನೇಚ್ಛಸಿ ಯನ್ಮೋಹಾತ್ಕರಿಷ್ಯಸ್ಯವಶೋಽಪಿ ತತ್ ॥**

ಹೇ ಕುಂತೀಪುತ್ರನೇ! ಯಾವ ಕರ್ಮವನ್ನು ನೀನು ಮೋಹದ ಕಾರಣದಿಂದಾಗಿ ಮಾಡಲು ಇಚ್ಛಿಸುವುದಿಲ್ಲವೋ

ಅದನ್ನು ಸಹ ನಿನ್ನ ಪೂರ್ವಕೃತ ಸ್ವಾಭಾವಿಕ ಕರ್ಮದಿಂದ ಬಂಧಿಸಲ್ಪಟ್ಟು, ಪರವಶನಾಗಿ ಮಾಡುವೆ. ॥ ೬೦॥

**ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ ।**
**ಭ್ರಾಮಯನ್ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ**

ಹೇ ಅರ್ಜುನಾ! ಶರೀರರೂಪೀ ಯಂತ್ರದಲ್ಲಿ ಆರೂಢನಾಗಿರುವ, ಸಂಪೂರ್ಣ ಪ್ರಾಣಿಗಳನ್ನು ಅಂತರ್ಯಾಮಿ ಪರಮೇಶ್ವರನು ತನ್ನ ಮಾಯೆಯಿಂದ ಅವರ ಕರ್ಮಗಳನು ಸಾರವಾಗಿ ಅಲೆಸುತ್ತ ಎಲ್ಲ ಪ್ರಾಣಿಗಳ ಹೃದಯದಲ್ಲಿ ಸ್ಥಿತನಾಗಿದ್ದಾನೆ. ॥ ೬೧॥

**ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ ।**
**ತತ್ಪ್ರಸಾದಾತ್ಪರಾಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಮ್ ॥**

ಹೇ ಅರ್ಜುನಾ! ನೀನು ಎಲ್ಲಾ ಪ್ರಕಾರದಿಂದಲೂ ಆ ಪರಮೇಶ್ವರನಲ್ಲಿಯೇ ಶರಣುಹೋಗು. ಆ ಪರಮಾತ್ಮನ ಕೃಪೆಯಿಂದಲೇ ನೀನು ಪರಮ ಶಾಂತಿಯನ್ನು ಹಾಗೂ ಸನಾತನವಾದ ಪರಮಧಾಮವನ್ನು ಪಡೆಯುವೆ. ॥ ೬೨॥

**ಇತಿ ತೇ ಜ್ಞಾನಮಾಖ್ಯಾತಂ ಗುಹ್ಯಾದ್ಗುಹ್ಯತರಂ ಮಯಾ।**
**ವಿಮೃಶ್ಯೈತದಶೇಷೇಣ ಯಥೇಚ್ಛಸಿ ತಥಾ ಕುರು ॥ ೬೩॥**

ಈ ಪ್ರಕಾರವಾಗಿ ಈ ಗೋಪನೀಯಕ್ಕಿಂತಲೂ ಅತಿ ಗೋಪನೀಯವಾದ ಜ್ಞಾನವನ್ನು ನಾನು ನಿನಗೆ ಹೇಳಿಬಿಟ್ಟೆನು.

ಈಗ ನೀನು ಈ ರಹಸ್ಯಯುಕ್ತವಾದ ಜ್ಞಾನವನ್ನು ಪೂರ್ಣವಾಗಿ ಚೆನ್ನಾಗಿ ವಿಚಾರಮಾಡಿ ಹೇಗೆ ಇಷ್ಟಪಡುವೆಯೋ ಹಾಗೆಯೇ ಮಾಡು. ॥ ೬೩॥

**ಸರ್ವಗುಹ್ಯತಮಂ ಭೂಯಃ ಶೃಣು ಮೇ ಪರಮಂ ವಚಃ ।**
**ಇಷ್ಟೋಽಸಿ ಮೇ ದೃಢಮಿತಿ ತತೋ ವಕ್ಷ್ಯಾಮಿ ತೇ ಹಿತಮ್**

ಸಂಪೂರ್ಣವಾದ ಗೋಪನೀಯಕ್ಕಿಂತ ಅತಿ ಗೋಪನೀಯವಾದ ನನ್ನ ಪರಮ ರಹಸ್ಯಯುಕ್ತವಾದ ವಚನವನ್ನು ನೀನು ಇನ್ನೊಮ್ಮೆ ಕೇಳು. ನೀನು ನನಗೆ ಅತಿಶಯವಾಗಿ ಪ್ರಿಯನಾಗಿರುವೆ, ಆದುದರಿಂದ ಈ ಪರಮ ಹಿತಕಾರಕವಾದ ವಚನವನ್ನು ನಾನು ನಿನಗೆ ಹೇಳುವೆನು. ॥ ೬೪॥

**ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು।**
**ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ ॥**

ಹೇ ಅರ್ಜುನಾ ! ನೀನು ನನ್ನಲ್ಲಿ ಮನಸ್ಸುಳ್ಳವನಾಗು, ನನ್ನ ಭಕ್ತನಾಗು, ನನ್ನನ್ನು ಪೂಜಿಸುವವನಾಗು ಮತ್ತು ನನಗೆ ಪ್ರಣಾಮ ಮಾಡು. ಹೀಗೆ ಮಾಡುವುದರಿಂದ ನೀನು ನನ್ನನ್ನೇ ಪಡೆಯುವೆ. ಇದನ್ನು ನಾನು ನಿನ್ನಲ್ಲಿ ಸತ್ಯವಾಗಿ ಪ್ರತಿಜ್ಞೆಮಾಡಿ ಹೇಳುತ್ತೇನೆ; ಏಕೆಂದರೆ ನೀನು ನನಗೆ ಅತ್ಯಂತ ಪ್ರಿಯನಾಗಿರುವೆ.

**ಸರ್ವಧರ್ಮಾನ್ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ।**
**ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ**

ಸಂಪೂರ್ಣ ಧರ್ಮಗಳನ್ನು ಅರ್ಥಾತ್ ಸಮಸ್ತ ಕರ್ತವ್ಯ-ಕರ್ಮಗಳನ್ನು ನನ್ನಲ್ಲಿ ತ್ಯಾಗಮಾಡಿ (ಸಮರ್ಪಿಸಿ) ನೀನು ಕೇವಲ, ಸರ್ವಶಕ್ತಿವಂತ, ಸರ್ವಾಧಾರ ಪರಮೇಶ್ವರನಾದ ನನ್ನೊೀರ್ವನಿಗೇ ಶರಣು ಬಂದುಬಿಡು. ನಾನು ನಿನ್ನನ್ನು ಸಮಸ್ತ ಪಾಪಗಳಿಂದ ಮುಕ್ತನಾಗಿಸುವೆ. ನೀನು ಶೋಕ ಮಾಡಬೇಡ.

**ಇದಂ ತೇ ನಾತಪಸ್ಕಾಯ ನಾಭಕ್ತಾಯ ಕದಾಚನ ।**
**ನ ಚಾಶುಶ್ರೂಷವೇ ವಾಚ್ಯಂ ನ ಚ ಮಾಂ ಯೋಽಭ್ಯಸೂಯತಿ**

ನೀನು ಈ ಗೀತಾರೂಪವಾದ ರಹಸ್ಯಮಯ ಉಪದೇಶವನ್ನು ಯಾವ ಕಾಲದಲ್ಲಿಯೂ ತಪರಹಿತನಾದ ಮನುಷ್ಯನಿಗಾಗಲೀ, ಭಕ್ತಿರಹಿತನಾದವನಿಗಾಗಲೀ ಮತ್ತು ಕೇಳಲು ಇಚ್ಛೆಯಿಲ್ಲದಿರುವವನಿಗಾಗಲೀ ಹೇಳಬಾರದು, ಹಾಗೂ ಯಾರು ನನ್ನಲ್ಲಿ ದೋಷದೃಷ್ಟಿಯನ್ನು ಇಡುತ್ತಾರೋ ಅವನಿಗಂತೂ ಎಂದಿಗೂ ಹೇಳಬಾರದು. ॥ ೬೭॥

**ಯ ಇಮಂ ಪರಮಂ ಗುಹ್ಯಂ ಮದ್ಭಕ್ತೇಷ್ವಭಿಧಾಸ್ಯತಿ**
**ಭಕ್ತಿಂ ಮಯಿ ಪರಾಂ ಕೃತ್ವಾ ಮಾಮೇವೈಷ್ಯತ್ಯಸಂಶಯಃ ॥ ೬೮॥**

ಯಾವ ಪುರುಷನು ನನ್ನಲ್ಲಿ ಪರಮ ಪ್ರೇಮವನ್ನಿಟ್ಟು ಕೊಂಡು ಈ ಪರಮ, ರಹಸ್ಯಯುಕ್ತವಾದ, ಗೀತಾಶಾಸ್ತ್ರವನ್ನು ನನ್ನ ಭಕ್ತರಲ್ಲಿ ಹೇಳುವನೋ ಅವನು ನನ್ನನ್ನೇ ಪಡೆಯುತ್ತಾನೆ-ಇದರಲ್ಲಿ ಯಾವ ಸಂದೇಹವೂ ಇಲ್ಲ. ॥ ೬೮॥

**ನ ಚ ತಸ್ಮಾನ್ಮನುಷ್ಯೇಷು ಕಶ್ಚಿನ್ಮೇ ಪ್ರಿಯಕೃತ್ತಮಃ ।**
**ಭವಿತಾ ನ ಚ ಮೇ ತಸ್ಮಾದನ್ಯಃ ಪ್ರಿಯತರೋ ಭುವಿ ॥ ೬೯॥**

ಅವನಿಗಿಂತ ಹೆಚ್ಚಾಗಿ ನನ್ನ ಪ್ರಿಯಕಾರ್ಯ ಮಾಡುವವನು ಮನುಷ್ಯರಲ್ಲಿ ಯಾರೂ ಇಲ್ಲ ಹಾಗೂ ಭೂಮಂಡಲದಲ್ಲಿ ಅವನಿಗಿಂತ ಮಿಗಿಲಾಗಿ ಪ್ರಿಯನಾದವನು ನನಗೆ ಬೇರೆ ಯಾರೂ ಭವಿಷ್ಯದಲ್ಲಿ ಆಗಲಾರರು. ॥ ೬೯॥

**ಅಧ್ಯೇಷ್ಯತೇ ಚ ಯ ಇಮಂ ಧರ್ಮ್ಯಂ ಸಂವಾದಮಾವಯೋಃ।**
**ಜ್ಞಾನಯಜ್ಞೇನ ತೇನಾಹಮಿಷ್ಟಃ ಸ್ಯಾಮಿತಿ ಮೇ ಮತಿಃ ॥ ೭೦॥**

ಯಾವ ಪುರುಷನು ಈ ಧರ್ಮಮಯವಾದ ನಮ್ಮಿಬ್ಬರ ಸಂವಾದರೂಪವಾದ ಗೀತಾಶಾಸ್ತ್ರವನ್ನು ಓದುವನೋ ಅವನ ಮೂಲಕವೂ ಸಹ ನಾನು ಜ್ಞಾನಯಜ್ಞದಿಂದ ಪೂಜಿತನಾಗುವೆನು ಎಂಬುದು ನನ್ನ ಅಭಿಪ್ರಾಯವಾಗಿದೆ. ॥ ೭೦॥

**ಶ್ರದ್ಧಾವಾನನಸೂಯಶ್ಚ ಶೃಣುಯಾದಪಿ ಯೋ ನರಃ ।**
**ಸೋಽಪಿ ಮುಕ್ತಃ ಶುಭಾಂಲ್ಲೋಕಾನ್ಪ್ರಾಪ್ನುಯಾತ್ಪುಣ್ಯಕರ್ಮಣಾಮ್**

ಯಾವ ಮನುಷ್ಯನು ಶ್ರದ್ಧಾಯುಕ್ತನಾಗಿ ಮತ್ತು ದೋಷದೃಷ್ಟಿಯಿಂದ ರಹಿತನಾಗಿ ಈ ಗೀತಾಶಾಸ್ತ್ರದ ಶ್ರವಣಮಾತ್ರ ಮಾಡುವನೋ ಅವನೂ ಸಹ ಪಾಪಗಳಿಂದ ಮುಕ್ತನಾಗಿ ಉತ್ತಮ ಕರ್ಮಮಾಡುವವರ ಶ್ರೇಷ್ಠವಾದ ಲೋಕಗಳನ್ನು ಹೊಂದುವನು. ॥ ೭೧॥

**ಕಚ್ಚಿದೇತಚ್ಛ್ರುತಂ ಪಾರ್ಥ ತ್ವಯೈಕಾಗ್ರೇಣ ಚೇತಸಾ**
**ಕಚ್ಚಿದಜ್ಞಾನಸಂಮೋಹಃ ಪ್ರನಷ್ಟಸ್ತೇ ಧನಂಜಯ ॥ ೭೨॥**

ಹೇ ಪಾರ್ಥನೇ! ಏನು ಈ ಗೀತಾಶಾಸ್ತ್ರವನ್ನು ನೀನು ಏಕಾಗ್ರಚಿತ್ತನಾಗಿ ಶ್ರವಣ ಮಾಡಿದೆಯಾ? ಮತ್ತು ಹೇ ಧನಂಜಯನೇ! ಏನು ಅಜ್ಞಾನದಿಂದ ಉಂಟಾದ ನಿನ್ನ ಮೋಹವು ನಾಶವಾಯಿತೇ? ॥ ೭೨॥

*ಅರ್ಜುನ ಉವಾಚ*

**ನಷ್ಟೋ ಮೋಹಃ ಸ್ಮೃತಿರ್ಲಬ್ಧಾ ತ್ವತ್ಪ್ರಸಾದಾನ್ಮಯಾಚ್ಯುತ।**
**ಸ್ಥಿತೋಽಸ್ಮಿ ಗತಸಂದೇಹಃ ಕರಿಷ್ಯೇ ವಚನಂ ತವ ॥ ೭೩॥**

ಅರ್ಜುನನು ಹೇಳಿದನು – ಹೇ ಅಚ್ಯುತಾ! ನಿನ್ನ ಕೃಪೆಯಿಂದ ನನ್ನ ಮೋಹವು ನಾಶವಾಗಿ ಹೋಯಿತು ಮತ್ತು ನಾನು ಸ್ಮೃತಿಯನ್ನು ಪಡೆದುಕೊಂಡಿದ್ದೇನೆ. ಈಗ ನಾನು ಸಂಶಯರಹಿತನಾಗಿ ಸ್ಥಿತನಾಗಿದ್ದೇನೆ. ಆದ್ದರಿಂದ ನಿನ್ನ ಆಜ್ಞೆಯನ್ನು ಪಾಲನೆ ಮಾಡುವೆನು. ॥ ೭೩॥

*ಸಂಜಯ ಉವಾಚ*

**ಇತ್ಯಹಂ ವಾಸುದೇವಸ್ಯ ಪಾರ್ಥಸ್ಯ ಚ ಮಹಾತ್ಮನಃ ।**
**ಸಂವಾದಮಿಮಮಶ್ರೌಷಮದ್ಭುತಂ ರೋಮಹರ್ಷಣಮ್ ॥**

ಸಂಜಯನು ಹೇಳಿದನು – ಹೇ ರಾಜಾ! ಈ ಪ್ರಕಾರವಾಗಿ ನಾನು ಶ್ರೀವಾಸುದೇವನ ಮತ್ತು ಮಹಾತ್ಮನಾದ ಅರ್ಜುನನ

ಈ ಅದ್ಭುತ ರಹಸ್ಯಯುಕ್ತವಾದ ರೋಮಾಂಚಕರವಾದ ಸಂವಾದವನ್ನು ಕೇಳಿದೆನು. ॥ ೭೪॥

**ವ್ಯಾಸಪ್ರಸಾದಾಚ್ಛ್ರುತವಾನೇತದ್ಗುಹ್ಯಮಹಂ ಪರಮ್ ।**
**ಯೋಗಂ ಯೋಗೇಶ್ವರಾತ್ಕೃಷ್ಣಾತ್ಸಾಕ್ಷಾತ್ಕಥಯತಃ ಸ್ವಯಮ್ ॥**

ಶ್ರೀವ್ಯಾಸರ ಕೃಪೆಯಿಂದ ದಿವ್ಯದೃಷ್ಟಿಯನ್ನು ಪಡೆದುಕೊಂಡು ನಾನು ಈ ಪರಮ ಗೋಪನೀಯವಾದ ಯೋಗವನ್ನು ಸ್ವಯಂ ಯೋಗೇಶ್ವರ ಭಗವಾನ್ ಶ್ರೀಕೃಷ್ಣನಿಂದ ಅರ್ಜುನನಿಗೆ ಹೇಳುತ್ತಿರುವಂತೆ ಪ್ರತ್ಯಕ್ಷವಾಗಿ ಕೇಳಿದ್ದೇನೆ. ॥ ೭೫॥

**ರಾಜನ್ಸಂಸ್ಮೃತ್ಯ ಸಂಸ್ಮೃತ್ಯ ಸಂವಾದಮಿಮಮದ್ಭುತಮ್ ।**
**ಕೇಶವಾರ್ಜುನಯೋಃ ಪುಣ್ಯಂ ಹೃಷ್ಯಾಮಿ ಚ ಮುಹುರ್ಮುಹುಃ**

ಹೇ ರಾಜಾ! ಭಗವಾನ್ ಶ್ರೀಕೃಷ್ಣ ಮತ್ತು ಅರ್ಜುನರ ಈ ರಹಸ್ಯಯುಕ್ತವಾದ, ಕಲ್ಯಾಣಕಾರಕವಾದ ಮತ್ತು ಅದ್ಭುತವಾದ ಸಂವಾದವನ್ನು ಪುನಃ ಪುನಃ ಸ್ಮರಿಸಿಕೊಂಡು ನಾನು ಪದೇ ಪದೇ ಹರ್ಷಿತನಾಗುತ್ತಿದ್ದೇನೆ. ॥ ೭೬॥

**ತಚ್ಚ ಸಂಸ್ಮೃತ್ಯ ಸಂಸ್ಮೃತ್ಯ ರೂಪಮತ್ಯದ್ಭುತಂ ಹರೇಃ ।**
**ವಿಸ್ಮಯೋ ಮೇ ಮಹಾನ್ ರಾಜನ್ ಹೃಷ್ಯಾಮಿ ಚ ಪುನಃ ಪುನಃ**

ಹೇ ರಾಜಾ! ಶ್ರೀಹರಿಯ ಆ ಅತ್ಯಂತ, ವಿಲಕ್ಷಣವಾದ ರೂಪವನ್ನು ಕೂಡ ಪುನಃ ಪುನಃ ಸ್ಮರಿಸಿಕೊಂಡು ನನ್ನ ಚಿತ್ತದಲ್ಲಿ

ಮಹಾನ್ ಆಶ್ಚರ್ಯವಾಗುತ್ತದೆ ಮತ್ತು ನಾನು ಬಾರಿ ಬಾರಿಗೂ ಹರ್ಷಿತನಾಗುತ್ತಿದ್ದೇನೆ. ॥ ೭೭॥

**ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ ।**
**ತತ್ರ ಶ್ರೀರ್ವಿಜಯೋ ಭೂತಿರ್ಧ್ರುವಾ ನೀತಿರ್ಮತಿರ್ಮಮ ॥**

ಹೇ ರಾಜಾ! ಎಲ್ಲಿ ಯೋಗೇಶ್ವರನಾದ ಭಗವಾನ್ ಶ್ರೀಕೃಷ್ಣನಿದ್ದಾನೋ ಮತ್ತು ಎಲ್ಲಿ ಗಾಂಡೀವ ಧನುರ್ಧಾರಿಯಾದ ಅರ್ಜುನನಿದ್ದಾನೋ ಅಲ್ಲಿಯೇ ಶ್ರೀ, ವಿಜಯ, ವಿಭೂತಿ ಮತ್ತು ಅಚಲವಾದ ನೀತಿಯು ಇದೆ - ಎಂಬುದೇ ನನ್ನ ಮತವಾಗಿದೆ. ॥ ೭೮॥

*ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು*
*ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ*
*ಮೋಕ್ಷಸಂನ್ಯಾಸಯೋಗೋ ನಾಮ ಅಷ್ಟಾದಶೋಽಧ್ಯಾಯಃ ॥*



# ಆರತಿ

ಜಯ ಭಗವದ್ಗೀತೆ, ಜಯ ಭಗವದ್ಗೀತೆ।
ಹರಿ-ಹಿಯ-ಕಮಲ-ವಿಹಾರಿಣಿ, ಸುಂದರ ಸುಪುನೀತೆ ॥ಜಯ॥

ಕರ್ಮ-ಸುಮರ್ಮ-ಪ್ರಕಾಶಿನಿ, ಕಾಮಾಸಕ್ತಿಹರಾ।
ತತ್ತ್ವಜ್ಞಾನ-ವಿಕಾಶಿನಿ, ವಿದ್ಯಾ ಬ್ರಹ್ಮ ಪರಾ ॥ಜಯ॥

ನಿಶ್ಚಲ-ಭಕ್ತಿ-ವಿದಾಯಿನಿ, ನಿರ್ಮಲ ಮಲಹಾರೀ।
ಶರಣ-ರಹಸ್ಯ-ಪ್ರದಾಯಿನಿ, ಸಬ ವಿಧಿ ಸುಖಕಾರೀ ॥ಜಯ॥

ರಾಗ-ದ್ವೇಷ-ವಿದಾರಿಣಿ, ಕಾರಿಣಿ ಮೋದ ಸದಾ।
ಭವ-ಭಯ-ಹಾರಿಣಿ ತಾರಿಣಿ, ಪರಮಾನಂದಪ್ರದಾ ॥ಜಯ॥

ಆಸುರ-ಭಾವ-ವಿನಾಶಿನಿ, ನಾಶಿನಿ ತಮ-ರಜನೀ।
ದೈವೀ ಸದ್ಗುಣದಾಯಿನಿ, ಹರಿ ರಸಿಕಾ ಸಜನೀ ॥ಜಯ॥

ಸಮತಾ, ತ್ಯಾಗ ಸಿಖಾವನಿ, ಹರಿ-ಮುಖಕೀ ಬಾನೀ।
ಸಕಲ ಶಾಸ್ತ್ರಕೀ ಸ್ವಾಮಿನಿ, ಶ್ರುತಿಯೋಂಕಿ ರಾನೀ ॥ಜಯ॥

ದಯಾ-ಸುಧಾ ಬರಸಾವನಿ ಮಾತು! ಕೃಪಾ ಕೀಜೈ।
ಹರಿ-ಪದ-ಪ್ರೇಮ ದಾನ ಕರ ಅಪನೋ ಕರ ಲೀಜೈ ॥ಜಯ॥

॥ ಶ್ರೀಹರಿಃ ॥

# ಗೀತಾ ಪ್ರೆಸ್ ಗೋರಖಪುರ – ಕನ್ನಡ ಪ್ರಕಟಣೆಗಳು

## ಪರಾಯಣ ಗ್ರಂಥಗಳು

೧. ಶ್ರೀಮದ್ಭಗವದ್ಗೀತೆ – ತತ್ತ್ವವಿವೇಚನೀಟೀಕೆ
೨. ಶ್ರೀಮದ್ಭಗವದ್ಗೀತೆ (ಶ್ಲೋಕಾರ್ಥಸಹಿತ)
೩. ಶ್ರೀಮದ್ಭಗವದ್ಗೀತೆ – ಅನ್ವಯ-ಪದಚ್ಛೇದ-ತಾತ್ಪರ್ಯ ಸಹಿತ
೪. ಶ್ರೀಮದ್ಭಗವದ್ಗೀತೆ ಮೂಲ – ವಿಷ್ಣು ಸಹಸ್ರನಾಮ
೫. ಶ್ರೀಮದ್ಭಗವದ್ಗೀತೆ ತಾತ್ಪರ್ಯ ಸಹಿತ
೬. ನಿತ್ಯಸ್ತುತಿ ಹಾಗೂ ಆದಿತ್ಯ ಹೃದಯಸ್ತೋತ್ರ
೭. ವಿಷ್ಣುಸಹಸ್ರನಾಮ ಟೀಕ ಮತ್ತು ನಾಮಾವಳಿ ಸಹಿತ
೮. ಹನುಮತ್ ಸ್ತೋತ್ರಾವಳಿ (ಹನುಮಾನ್ ಚಾಲಿಸಾ)
೯. ಶ್ರೀರಾಮಚರಿತಮಾನಸ ಸುಂದರಕಾಂಡ (ಅರ್ಥಸಹಿತ)
೧೦. ಲಲಿತಾ ಸಹಸ್ರನಾಮ
೧೧. ದುರ್ಗಾಸಪ್ತಶತಿ
೧೨. ವಾಲ್ಮೀಕಿ ರಾಮಾಯಣಾಂತರ್ಗತ ಮೂಲರಾಮಾಯಣ
೧೩. ಈಶಾಸ್ಯೋಪನಿಷತ್
೧೪. ಗಜೇಂದ್ರ ಮೋಕ್ಷ

॥ ಶ್ರೀಹರಿಃ ॥

# ಶ್ರೀಮದ್ಭಗವದ್ಗೀತೆ

## ತತ್ತ್ವವಿವೇಚನೀ ಹಿಂದೀ ಟೀಕೆಯ ಕನ್ನಡಾನುವಾದ

ಬ್ರಹ್ಮಲೀನ ಪರಮಪೂಜ್ಯ ಶ್ರೀಜಯದಯಾಳ ಗೋಯಂದಕಾರವರು ಬರೆದ ಗೀತೆಯ ಸರಳ-ಸುಂದರ-ಉದ್ಬೋಧಕ ಟೀಕೆ. ಜಿಜ್ಞಾಸುಗಳಿಗೆ ಸಾಧಕರಿಗೆ ತುಂಬಾ ಉಪಯುಕ್ತವಾದ ಸದ್ಗ್ರಂಥ. ಇದನ್ನು ಪ್ರತಿಯೋರ್ವ ಕನ್ನಡಿಗನು ಓದಲೇಬೇಕಾದ ಗ್ರಂಥ.

ಸುಂದರ ಆಫ್‌ಸೆಟ್ ಮುದ್ರಣ ಹದಿನಾರು ವರ್ಣಮಯ ಚಿತ್ರಗಳ ಸಹಿತ ಗಟ್ಟಿಮುಟ್ಟಾದ ಹೊದಿಕೆ.

ಡೆಮ್ಮಿ 1/4 ಆಕಾರ

ಪುಟ – 920

ಪ್ರತಿಗಳು ದೊರೆಯುವ ಸ್ಥಳ :

ಗೀತಾಪ್ರೆಸ್ – ಅಂಚೆ ಗೀತಾಪ್ರೆಸ್, ಗೋರಖಪುರ – 273005

ಸಾಹಿತ್ಯಸಿಂದು ಪ್ರಕಾಶನ, ನೃಪತುಂಗಾ ರೋಡ್,
ಬೆಂಗಳೂರು – 560 002.

'ಜ್ಞಾನಗಂಗಾ', ನಂ. 6 ಬನೇಶ್ವರ ಟೆಂಪಲ್ ಸ್ಟ್ರೀಟ್,
ಸುಲ್ತಾನ್‌ಪೇಟೆ ಕ್ರಾಸ್, ಬೆಂಗಳೂರು – 560 003.
ದೂರವಾಣಿ – 2260371

# Gita Press, Gorakhpur

## Our Publications, Kalyan and Kalyana-Kalpataru available at :


| | | |
|---|---|---|
| Gorakhpur—273005 | Gita Press—P.O. Gita Press; website : www.gitapress.org/ e-mail : booksales@gitapress.org | ✆ (0551) 2334721, 2331250; Fax 2336997 |
| Delhi—110006 | 2609, Nai Sarak | ✆ (011) 23269678; Fax 23259140 |
| Kolkata—700007 | Gobind Bhavan-Karyalaya, 151, Mahatma Gandhi Road; e-mail : gobindbhawan@gitapress.org | ✆ (033) 22686894; Fax 22680251 |
| Mumbai—400002 | 282, Samaldas Gandhi Marg (Princess Street) Near Marine Lines Station | ✆ (022) 22030717 |
| Kanpur—208001 | 24/55, Birhana Road | ✆ (0512) 2352351; Fax 2352351 |
| Patna—800004 | Ashok Rajpath, Opposite Women's Hospital | ✆ (0612) 2300325 |
| Ranchi—834001 | Cart Sarai Road, Upper Bazar | ✆ (0651) 2210685 |
| Surat—395001 | Vaibhav Apartment, Opposite Nutan Niwas, Bhatar Road; e-mail : suratdukan@gitapress.org | ✆ (0261) 2237362, 2238065 |
| Indore—452001 | G-5, Shree Vardhan, 4 R.N.T. Marg | ✆ (0731) 2526516, 2511977 |
| Jalgaon—425001 | 7, Bhim Singh Market, Near Railway Station | ✆ (0257) 2226393 |
| Hyderabad—500095 | 41, 4-4-1; Dilshad Plaza, Sultan Bazar | ✆ (040) 24758311 |
| Nagpur—440002 | Shriji Kripa Complex, 851, New Etawari Road | ✆ (0712) 2734354 |
| Cuttack—753009 | Bhartiya Towers, Badam Badi | ✆ (0671) 2335481 |
| Raipur—492009 | Mittal Complex, Ganjpara, Telghani Chowk | ✆ (0771) 4034430 |
| Varanasi—221001 | 59/9, Nichibag | ✆ (0542) 2413551 |
| Haridwar—249401 | Sabjimandi, Motibazar | ✆ (01334) 222657 |
| Rishikesh—249304 | Gita Bhawan, P.O.-Swargashram; e-mail : gitabhawan@gitapress.org | ✆ (0135) 2430122, 2432792 |
| Coimbatore—641018 | Gita Press Mansion, 8/1M, Racecourse | ✆ (0422) 3202521 |
| Bangalore—560027 | #15, 4th 'E' Cross, K.S. Garden, Lalbagh Road | ✆ (080) 22955190, 32408124 |


**Station-Stalls—** Delhi (Platform No. 12); New Delhi (No. 12-13); Hazarat Nizamuddin [Delhi] (No. 4-5); Kota [Rajasthan] (No. 1); Bikaner (No. 1); Gorakhpur (No. 1); Kanpur (No. 1); Lucknow [N.E. Railway]; Varanasi (No. 4-5); Mughal Sarai (No. 3-4); Haridwar (No. 1); Patna (Main Entrance); Ranchi (No. 1); Dhanbad (No. 2-3); Muzaffarpur (No. 1); Samastipur (No. 2); Howrah (No. 5 & 18 Both); Kolkata (No. 1); Sealdah Main (No. 8); Asansol (No. 5); Cuttack (No. 1); Bhubaneshwar (No. 1); Aurangabad [Maharashtra] (No. 1); Secunderabad [A.P.] (No. 1); Guwahati (No. 1); Kharagpur (No. 1-2); Raipur [Chhattisgarh] (No. 1); Bangalore (No.1); Yesvantpur (No.6); Sri Satya Sai Prashanti Nilayam [south Central Railway] (No.1) and I.S.B.T. (Delhi)

## Retail Counters


ISBN 81-293-0485-6





| | | |
|---|---|---|
| Churu—331001 | Rishikul-Brahmacharyashram, Purani Sarak; | ✆ (01562) 252674 |
| Rishikesh—249192 | Muni Ki Reti | |
| Tirupati—517504 | Shop No. 56, T.T.D. Mini Shopping Complex, Tirumalai Hills | |
| Berhampore—742101 | Municipal Market Complex, Block-B, Stall No. 57 to 60, 1st Floor, K.N. Road (Murshidabad) | |

**Code 1288**